# ಸಮಗ್ರ ದಾಸ ಸಾಹಿತ್ಯ

ಸಂಪುಟ : ೩ - ಭಾಗ ೨



## ಪುರಂದರದಾಸರ ಕೀರ್ತನೆಗಳು

ಭಾಗ ೨

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ
೨. ಪಾರಿಭಾಷಿಕ ಪದಗಳ ಅರ್ಥ
೩. ಪೂರ್ವಕಥೆಗಳು ಮತ್ತು ಟಿಪ್ಪಣಿಗಳು
೪. ಕೀರ್ತನೆಗಳ ಅಕಾರಾದಿ
೫. ಸಹಾಯಕ ಸಾಹಿತ್ಯ

# ಅನುಬಂಧ–೧

## ಕಠಿಣ ಶಬ್ದಗಳ ಅರ್ಥ

### ಅ

| | |
|---|---|
| ಅಕುಟಿಲ | – ಸತ್ಯಮಾರ್ಗವನ್ನನುಸರಿಸು |
| ಅಚ್ಚುಳಿ | – ಪ್ರೀತಿ ಅಥವ ಕಾಟ |
| ಅಘ | – ಪಾಪ, ದುಃಖ |
| ಅಂಡಜಾಸನ | – ಗರುಡವಾಹನ |
| ಅರ್ಜನ | – ಗಳಿಕೆ |
| ಅಟ್ಟಿ | – ಸಿದ್ದಮಾಡಿದ |
| ಅಟ್ಟುಳಿ | – ಉಪದ್ರವ |
| ಅಡಿ | – ತಳ |
| ಅಡಿಯಾಡಿ | – ಎಡತಾಕಿ |
| ಅಣಿಮುತ್ತು | – ದೊಡ್ಡಮುತ್ತು |
| ಅತಿಗಳೆ | – ತಿರಸ್ಕರಿಸಿನುಡಿ |
| ಅತ್ತಿಗೆ | – ಬುದ್ಧ |
| ಅತ್ತೆ | – ಭೂಮಿ ಅಥವಾ ಮಾಯೆ |
| ಅರ್ಥ | – ಪುರುಷಾರ್ಥ |
| ಅರ್ದಿ | – ಪರಿಪೂರ್ಣ |
| ಅರಂಗಡಿ | – ಪಡಿಮುಗಳು |
| ಅಧ್ವರ | – ಯಜ್ಞ |
| ಅದ್ವೈತ | – ಸರಿಯಿಲ್ಲದ |
| ಅನ್ವಯ | – ಹೊಂದಿಕೆ ಅಥವಾ ವಂಶ |
| ಅನವರತ | – ಯಾವಾಗಲೂ |
| ಅನ್ನಿಗ | – ಅನ್ಯಕ |
| ಅನಿತ್ಯ | – ಅನಿತ್ಯ |
| ಅನುಮಾನ | – ಸಂದೇಹ |
| ಅನುಬಂಧ | – ಸಂಬಂಧಿಕ |
| ಅನುಜೆ | – ಶೂರ್ಪನಖಿ |
| ಅನುವಾಗಿ | – ಅನುಕೂಲವಾಗಿ |
| ಅಸು | – ಪ್ರಾಣ ಅಥವಾ ಹೆಚ್ಚಾಗಿ |
| ಅಸುರ | – ನಿಷ್ಠುರ ಅಥವಾ ರಾಕ್ಷಸ |
| ಅಪವರ್ಗದ | – ಮೋಕ್ಷ ಕೊಡುವ ಶ್ರೀಹರಿ |
| ಅಪಲಾಪ | – ನಿಂದೆ, ದೂರು |
| ಅಪವರ್ಗ | – ಮೋಕ್ಷ |
| ಅಪರಂಜಿ | – ಶುದ್ಧ ಬಂಗಾರ |
| ಅಪರ್ಣಾ | – ಪಾರ್ವತಿ |
| ಅಪರಬುದ್ಧಿ | – ಕೀಳುಬುದ್ಧಿ |
| ಅಪಸ್ಮಾರಿ | – ಬುದ್ಧಿಗೇಡಿ |
| ಅಮ್ರಿ | – ಮಾಲೆ |
| ಅಮೋಘ | – ಅತಿಶಯ |
| ಅರಸನ | – ಕಂಸನ |
| ಅರವಟ್ಟಿಗೆ | – ನೀರಿಲ್ಲದ ದಾರಿಕಾರರಿಗೆ ನೀರೊದಗಿಸುವ ಸ್ಥಳ |
| ಅರಳು | – ಹೂವು |

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಸಂಪಾದಕ ಮಂಡಳಿ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನೂ ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಆವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**
ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮೂವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್.ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ.ಎಂ.ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ–ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯುದ ಹಿಂದಿನ ನಿರ್ದೇಶಕರಾದ ಶ್ರೀ ಕೆ.ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್‍ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ–ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' - ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೇ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು– ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ, ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

ದಾಸರೆಂದರೆ ಪುರಂದರದಾಸರಯ್ಯ - ಎಂದು ಗುರುಗಳಾದ ವ್ಯಾಸರಾಯರಿಂದ ಪ್ರಶಂಸೆಗೆ ಪಾತ್ರರಾಗಿರುವ ಪುರಂದರದಾಸರು ಕನ್ನಡ ಸಾಹಿತ್ಯಕ್ಕೆ, ಕರ್ನಾಟಕ ಸಂಗೀತಕ್ಕೆ ಮೌಲಿಕವಾದ ಕೊಡುಗೆಯನ್ನಿತ್ತಿದ್ದಾರೆ. ಪುರಂದರರು ರಚಿಸಿರುವ ಕೀರ್ತನೆಗಳು ಇಂದಿಗೂ ಪ್ರಸ್ತುತವಾಗಿವೆ, ಅವರು ಕರ್ನಾಟಕ ಸಂಗೀತಕ್ಕೆ ನೀಡಿದ ಕೊಡುಗೆ ಇಂದಿಗೂ ಹಸಿರಾಗಿದೆ. ಬಹುಮುಖ ವ್ಯಕ್ತಿತ್ವವನ್ನು ಹೊಂದಿದ್ದ ಪುರಂದರದಾಸರು ಭಾರತೀಯ ಸಂಸ್ಕೃತಿಗೆ ಅತ್ಯಮೂಲ್ಯವಾದ ಕೊಡುಗೆಯನ್ನು ನೀಡಿ ಮಹತ್ವದ ಸಾಧಕರಲ್ಲೊಬ್ಬರಾಗಿದ್ದಾರೆ.

**ಜೀವನಚರಿತ್ರೆ**

ಪುರಂದರದಾಸರ ಚರಿತ್ರೆಗೆ ಸಂಬಂಧಿಸಿದಂತೆ ಇಂದಿಗೂ ಕೂಡ ನಿಖರವಾದ ದಾಖಲೆಗಳು ಸಿಗುತ್ತಿಲ್ಲ. ಇವರ ಚರಿತ್ರೆಗೆ ಸಂಬಂಧಿಸಿದಂತೆ ಈಗಾಗಲೇ ಅನೇಕ ಲೇಖನಗಳು, ಕೃತಿಗಳು ಪ್ರಕಟವಾಗಿವೆ. ಆದರೆ ಇವುಗಳಲ್ಲಿ ಯಾವುದೂ ಪುರಂದರದಾಸರ ಚರಿತ್ರೆಯನ್ನು ಪೂರ್ಣವಾಗಿ ಕಟ್ಟಿಕೊಡುವದಿಲ್ಲ. ಇದುವರೆಗೆ ರಚನೆಯಾಗಿರುವ ಇವರ ಚರಿತ್ರೆಗೆ ಮೂರು ಆಕರಗಳು ಪ್ರಮುಖ ಪ್ರೇರಣೆ ಯಾಗಿವೆ. ಇವರ ಕೀರ್ತನೆಗಳಲ್ಲಿ ಬಂದಿರುವ ಕೆಲವು ವ್ಯಕ್ತಿಗತ ವಿವರಗಳು ಮೊದಲ ಪುರಾವೆಗಳಾಗುತ್ತವೆ. ಆದದ್ದೆಲ್ಲ ಒಳಿತೇ ಆಯಿತು, ಮುಯ್ಯಕ್ಕೆ ಮುಯ್ಯ ತೀರಿತು, ನಿಮ್ಮ ಭಾಗ್ಯ ದೊಡ್ಡದೊ ನಮ್ಮ ಭಾಗ್ಯ ದೊಡ್ಡದೊ, ಬದುಕಿದೆನು ಬದುಕಿದೆನು ಈ ಮೊದಲಾದ ಕೆಲವು ಕೀರ್ತನೆಗಳಲ್ಲಿ ಕೆಲವು ವ್ಯಕ್ತಿಗತ ವಿಷಯಗಳು ವ್ಯಕ್ತವಾಗಿವೆ.

'ನಿಮ್ಮ ಭಾಗ್ಯ ದೊಡ್ಡದೊ ನಮ್ಮ ಭಾಗ್ಯ ದೊಡ್ಡದೊ' ಎಂಬ ಕೀರ್ತನೆಯಿಂದ ವಿಜಯನಗರ ಸಾಮ್ರಾಜ್ಯದ ಸಂದರ್ಭದಲ್ಲಿ ಪುರಂದರದಾಸರು ಇದ್ದುದು

ಸ್ಪಷ್ಟವಾಗುತ್ತದೆ. ವಿಜಯನಗರ ಸಾಮ್ರಾಜ್ಯದ ಆಗು ಹೋಗುಗಳ ಹಿನ್ನೆಲೆಯಲ್ಲಿ ಇವರ ಜೀವನದ ಏರಿಳಿತಗಳನ್ನು ಗಮನಿಸಬಹುದಾಗಿದೆ. ಹೀಗಾಗಿ ಇವರು ಕ್ರಿ. ಶ. ೧೪೮೦ ರಿಂದ ಕ್ರಿ. ಶ. ೧೫೬೫ ರ ವರೆಗೆ ಸುಮಾರು ಎಂಬತ್ತೈದು ವರ್ಷಗಳಕಾಲ ಜೀವಿಸಿರಬಹುದಾಗಿದೆ.

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ತಗ್ಗಿಸಿ ನಾಚುತಲಿದ್ದೆ.
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ.

ಈ ಕೀರ್ತನೆಯನ್ನು ಗಮನಿಸಿದಾಗ ಬಹುಮುಖ್ಯ ಸಂಗತಿ ಬೆಳಕಿಗೆ ಬರುತ್ತದೆ. ಮೊದಲು ಪುರಂದರದಾಸರು ದೇವರ ಕಡೆಗೆ ಗಮನಕೊಡದೆ ಕೇವಲ ಹಣಗಳಿಸುತ್ತ ವ್ಯಾಪಾರದಲ್ಲಿ ಮಗ್ನರಾಗಿರಬೇಕು. ದೇವರಲ್ಲಿ ಅತ್ಯಂತ ಭಕ್ತಿಯಿಟ್ಟಿದ್ದ ಇವರ ಹೆಂಡತಿ, ಇವರ ಮನಸ್ಸನ್ನು ದೇವರ ಧ್ಯಾನದತ್ತ ಒಲಿಸಿರಬೇಕು. ಹೆಂಡತಿಯ ಈ ಒತ್ತಾಸೆಯಿಂದ ಧ್ಯಾನಾಸಕ್ತರಾದ ಅವರು ಮುಂದೆ ಶ್ರೇಷ್ಠ ದಾಸರಾಗಿ ಬೆಳಗಲು ಕಾರಣವಾಗಿರಬೇಕು. ತಮ್ಮ ಪತ್ನಿಯು ಪ್ರೀತಿಯಿಂದ ಗೋಪಾಳಬುಟ್ಟಿ ಹಿಡಿಸಿದುದನ್ನು ಈ ಕೀರ್ತನೆಯಲ್ಲಿ ಅವರು ವಿವರಿಸಿದ್ದಾರೆ. ಹೀಗೆ ಅವರ ಕೆಲವು ಕೀರ್ತನೆಗಳು ಅವರ ವ್ಯಕ್ತಿತ್ವ ಹಾಗೂ ಅವರ ವ್ಯಕ್ತಿ ಚರಿತ್ರೆಯನ್ನು ರೂಪಿಸಲು ಸಹಾಯಕವಾಗುತ್ತವೆ.

ಎರಡನೆಯದಾಗಿ ಕ್ರಿ. ಶ. ೧೫೨೬ ರ ಬಳ್ಳಾರಿ ಜಿಲ್ಲೆಯ ಕಮಲಾಪುರದ ತಾಮ್ರಶಾಸನ ಪ್ರಮುಖ ಆಧಾರವಾಗಿದೆ. ಆ ಶಾಸನದ ಪಾಠ ಹೀಗಿದೆ.

ಧೀಮಾನ್ ಲಕ್ಷ್ಮಣದಾಸಾಖ್ಯಃ ಶ್ರೀ ಪುರಂದರದಾಸಜಃ
ವಸಿಷ್ಠ ಗೋತ್ರಜೋ ವೃತ್ತಿದ್ವಯ ಮತ್ರೈಹಿ ಯಾಜುಷಃ ॥೧೭೮॥

ವಸಿಷ್ಠಾನ್ವಯ ಸಂಭೂತಃ ಶ್ರೀ ಪುರಂದರದಾಸಜಃ
ದ್ವಿಜೋಹೇಬಣದಾಸಖ್ಯೋ ಯಾಜುಷೋತ್ರ ದ್ವಿವೃತ್ತಿಕಃ ॥೧೭೯॥

ವಸಿಷ್ಠಗೋತ್ರ ಸಂಬೂತಃ ಶ್ರೀ ಪುರಂದರದಾಸಜಃ
ಧೀಮಾನ್ ಮದ್ವಪಪಾಸಾಖ್ಯೋ ಯಾಜುಷೋತ್ರ ದ್ವಿವೃತ್ತಿಕಃ ॥೧೮೦॥

(Epigraphia Indica, 31. vol 3)

ಕೃಷ್ಣದೇವರಾಯನಿಂದ ತಾವು ದಾನವಾಗಿ ಪಡೆದ ಭೂಭಾಗವನ್ನು ವ್ಯಾಸರಾಯರು ವಿವಿಧ ಗೋತ್ರದ ೩೧೮ ಜನರಿಗೆ ದತ್ತಿಯನ್ನಾಗಿ ಕೊಟ್ಟ ವಿವರ ಇಲ್ಲಿ ದಾಖಲಾಗಿದೆ. ಈ ದತ್ತಿಗಳನ್ನು ಪಡೆದವರಲ್ಲಿ ಪುರಂದರದಾಸರ ಮೂವರು ಮಕ್ಕಳ ಹೆಸರುಗಳಿವೆ. ಕಮಲಾಪುರದ ಈ ತಾಮ್ರಶಾಸನ ಕ್ರಿ. ಶ. ೧೫೨೬ ಫೆಬ್ರವರಿ ೨೪ ರಂದು ಬರೆಯಲ್ಪಟ್ಟಿದೆ.

ಮೂರನೆಯದಾಗಿ ಪುರಂದರದಾಸರ ಸಮಕಾಲೀನ ಹಾಗೂ ಅನಂತರದ ದಾಸರ ಸಾಹಿತ್ಯದಲ್ಲಿ ಬಂದ ಉಲ್ಲೇಖಗಳೂ ಆಧಾರಗಳಾಗುವ ಸಾಧ್ಯತೆಯನ್ನು ಹೊಂದಿವೆ. ವ್ಯಾಸರಾಯರು, ವಿಜಯದಾಸರು, ಪ್ರಸನ್ನ ವೆಂಕಟದಾಸರು, ಜಗನ್ನಾಥದಾಸರು, ಗುರುಪುರಂದರ ವಿಠ್ಠಲರು ಹಾಗೂ ತ್ಯಾಗರಾಜ ಸ್ವಾಮಿಗಳು – ಈ ಮುಂತಾದ ದಾಸರ ಕೀರ್ತನೆಗಳಲ್ಲಿ ಪುರಂದರದಾಸರನ್ನು ಕುರಿತಂತೆ, ಕೆಲವು ವಿವರಗಳು ಬರುತ್ತವೆ. ಬಾಗಲಕೋಟೆಯ ಸಮೀಪವಿರುವ ಕಾಖಂಡ್ಕಿ ಪ್ರಸನ್ನ ವೆಂಕಟದಾಸರು ಕ್ರಿ. ಶ. ೧೬೭೪ರಲ್ಲಿ ನಿಧನರಾದರು. ಇವರ ಕೀರ್ತನೆಗಳಲ್ಲಿ ಪುರಂದರರ ಹೆಸರು ಕೇಳಿಬರುತ್ತದೆ. ಕ್ರಿ. ಶ. ೧೬೮೩ – ೧೭೫೫ ರ ಅವಧಿಯಲಿದ್ದ ವಿಜಯದಾಸರು ಪುರಂದರರನ್ನು ಕುರಿತಂತೆ ಅನೇಕ ವಿಷಯಗಳ ಬಗೆಗೆ ಹೇಳಿದ್ದಾರೆ. ಅವರ ಕೀರ್ತನೆಗಳು ಈ ದಿಸೆಯಲ್ಲಿ ಗಮನ ಸೆಳೆಯುತ್ತವೆ. ಪ್ರಸನ್ನ ವೆಂಕಟದಾಸರ "ತಂದೆ ಪುರಂದರ ದಾಸರ ಸ್ಮರಿಸುವೆ" ಎಂಬ ಕೀರ್ತನೆಯಲ್ಲಿ ಪುರಂದರದಾಸರ ವ್ಯಕ್ತಿತ್ವ ಮತ್ತು ವಾಙ್ಮಯ ಎರಡೂ ಉಲ್ಲೇಖ ಗೊಂಡಿವೆ. ಅದೇ ರೀತಿ 'ಬೇಸರದೆ ಭಜಿಸಿರೊ ಪುರಂದರ ದಾಸರಾಯರ' ಎಂಬ ವಿಜಯದಾಸರ ಕೀರ್ತನೆಯಲ್ಲಿ ಮುತ್ತಿನ ಮೂಗುತಿಯ ಕಥೆ ಮೊಟ್ಟಮೊದಲಬಾರಿಗೆ ಕಾಣಿಸಿಕೊಳ್ಳುತ್ತದೆ. ಹೀಗೆ ಈ ಮೂರೂ ಆಧಾರಗಳ ನೆಲೆಯಲ್ಲಿ ಪುರಂದರದಾಸರ ಜೀವನ ಚರಿತ್ರೆಯನ್ನು ರೂಪಿಸಲಾಗಿದೆ.

ತೆಲುಗಿನ 'ಅನ್ನಮಾಂಕು ಚರಿತಮು', ಸಂಸ್ಕೃತದ 'ಭಕ್ತಿವಿಜಯ,' ಆರ್. ಎಸ್. ಪಂಚಮುಖಿಯವರ 'ಪುರಂದರದಾಸರ ಜೀವನಚರಿತ್ರೆ,' ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚರಾಯರು ಸಂಪಾದಿಸಿರುವ 'ಪುರಂದರದಾಸರ ಸಾಹಿತ್ಯದ ಆರು ಸಂಪುಟಗಳ ಪ್ರಸ್ತಾವನೆ' ಬೇಲೂರ ಕೇಶವದಾಸ ಅವರ 'ಪುರಂದರ ದಾಸರ ಚರಿತ್ರೆ,' ಡಾ. ವ. ಅ. ದಿವಾಣಜಿಯವರ 'ಪ್ರಸಾದ ಯೋಗ', ಬುರ್ಲಿ ಬಿಂದುಮಾಧವರಾವ ಅವರು ಸಂಪಾದಿಸಿರುವ 'ಶ್ರೀ ಪುರಂದರದಾಸರು,' ಡಾ. ಪಿ ಎಸ್. ಶ್ರೀನಿವಾಸ ಅವರ 'A comparative study of Sharana and Dasa Literature', ಪ್ರೊ. ಎಸ್. ಕೆ. ರಾಮಚಂದ್ರರಾವ್ ಅವರು ಸಂಪಾದಿಸಿರುವ 'ಪುರಂದರ ಸಾಹಿತ್ಯದರ್ಶನ'ದ ನಾಲ್ಕು ಸಂಪುಟಗಳು, ಶ್ರೀಪಾದ ಹಂಡೆಯವರ 'ಪುರಂದರದಾಸಾರ್ಯರ ಚರಿತ್ರೆ,' ಡಾ. ಬಸವರಾಜ ಸಬರದ ಅವರ 'ಬಸವೇಶ್ವರ ಮತ್ತು ಪುರಂದರದಾಸ' ಈ ಮೊದಲಾದ ಕೃತಿಗಳಲ್ಲಿ ಪುರಂದರದಾಸರ ಚರಿತ್ರೆಯ ವಿವರಗಳು ದೊರೆಯುತ್ತವೆ. ಇದರೊಂದಿಗೆ ರಂ. ಶ್ರೀ. ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆ ಹಾಗು ಮೈಸೂರು ವಿಶ್ವವಿದ್ಯಾಲಯ ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳು ಪ್ರಕಟಿಸಿರುವ 'ಕನ್ನಡ ಸಾಹಿತ್ಯ ಚರಿತ್ರೆ'ಗಳಲ್ಲಿಯೂ ಪುರಂದರದಾಸರ ಬಗೆಗೆ ಅನೇಕ ಮಾಹಿತಿಗಳಿವೆ.

ಈ ಎಲ್ಲ ಸಂಗತಿಗಳನ್ನು ಸಂಗ್ರಹಿಸಿ ಪುರಂದರದಾಸರ ಜೀವನ ಚರಿತ್ರೆಯನ್ನು ಹೀಗೆ ಸಂಕ್ಷಿಪ್ತಗೊಳಿಸಬಹುದಾಗಿದೆ. ಇಂದು ಮಹಾರಾಷ್ಟ್ರದಲ್ಲಿರುವ ಪುರಂದರಗಡದಲ್ಲಿ ಪುರಂದರದಾಸರ ಪೂರ್ವಜರು ವ್ಯಾಪಾರ ಮಾಡುತ್ತಿದ್ದರು. ಪುರಂದರದಾಸರ ಊರು ಪುರಂದರಗಡ ಎನ್ನುವುದಕ್ಕೆ ಯಾವ ಆಧಾರವೂ ಇಲ್ಲವೆಂದು ಡಾ. ಪಿ. ಬಿ. ದೇಸಾಯಿಯವರು ಸ್ಪಷ್ಟಪಡಿಸಿರುವರಾದರೂ ಸಧ್ಯಕ್ಕೆ ಪುರಂದರಗಡವನ್ನೇ ಪುರಂದರರ ಜನ್ಮ ಸ್ಥಳವೆಂದು ಪರಿಗಣಿಸಬೇಕಾಗುತ್ತದೆ. ಹೀಗೆ ಕ್ರಿ. ಶ. ೧೪೮೦ ರಲ್ಲಿ ವರದಪ್ಪನಾಯಕ ಮತ್ತು ಲಕ್ಷ್ಮೀದೇವಿ ದಂಪತಿಗಳ ಉದರದಲ್ಲಿ ಪುರಂದರರು ಜನಿಸಿದರು. ಇವರ ಪೂರ್ವಾಶ್ರಮದ ಹೆಸರು ಶೀನಪ್ಪನಾಯಕ. ಈ ಶೀನಪ್ಪನಾಯಕ ವೈಶ್ಯ ಮನೆತನದಲ್ಲಿ ಜನಿಸಿ ವ್ಯಾಪಾರ

ಮಾಡುತ್ತಾ ಬದುಕುತಿದ್ದರು. ಇವರು ಚಿನ್ನದ ವ್ಯಾಪಾರ ಮಾಡುತ್ತಿದ್ದರೆಂದು ತಿಳಿದು ಬರುತ್ತದೆ. ಇವರ ಹೆಂಡತಿಯ ಹೆಸರು ಸರಸ್ವತಿಬಾಯಿ.

ತುಂಬಾ ಜಿಪುಣರಾಗಿದ್ದ ಈ ಶೀನಪ್ಪನಾಯಕರು ತಮ್ಮ ಹೆಂಡತಿಯ ಒತ್ತಾಸೆಯಿಂದ ಮನಪರಿವರ್ತನೆಗೊಂಡು ಪುರಂದರದಾಸರಾಗಿರಬೇಕೆಂಬುದಕ್ಕೆ ಅವರೇ ರಚಿಸಿರುವ ಕೀರ್ತನೆ ಆಧಾರವಾಗಿದೆ. ವಿಜಯದಾಸರ ಕೀರ್ತನೆಯಲ್ಲಿ ಬರುವ ಮೂಗುತಿಯ ಕತೆಗೂ ಇದಕ್ಕೂ ಸಂಬಂಧವಿದೆ. ಆದರೆ ಅಲ್ಲಿ ನಡೆದ ಪವಾಡ ಕತೆಯನ್ನು ಹೊರತುಪಡಿಸಿ ವಾಸ್ತವದ ನೆಲೆಯಲ್ಲಿ ನೋಡಿದರೆ, ಜಿಪುಣ ವ್ಯಾಪಾರಿಯಾಗಿದ್ದ ಶೀನಪ್ಪನಾಯಕ ಸರಸ್ವತಿಬಾಯಿಯ ವ್ಯಕ್ತಿತ್ವದ ಪರಿಣಾಮದಿಂದ ಆಧ್ಯಾತ್ಮದತ್ತ ಸಾಗಿಬಂದಿರಲು ಸಾಧ್ಯವಿದೆ. ಕೇವಲ ಹಣಗಳಿಸುವ ಜಿಪುಣತನದ ಬದುಕಿಗಿಂತ ಮುಕ್ತಿಗಳಿಸುವ ಆಧ್ಯಾತ್ಮದ ಜೀವನ ಅವರಿಗೆ ಮುಖ್ಯವಾಗಿ ಕಂಡಂತಿದೆ.

ಹೀಗೆ ಪುರಂದರದಾಸರು ಸಂಸಾರವನ್ನು ತೊರೆದು, ಸಂಪತ್ತನ್ನು ಬಿಟ್ಟು ದಾಸರಾಗಿ ಬೆಳೆದು ಬಂದುದನ್ನು ಗಮನಿಸಬಹುದಾಗಿದೆ. ಅನೇಕ ಮಹಾಪುರುಷರ ಹೆಗ್ಗಳಿಕೆಯ ಹಿಂದೆ ಅವರ ಪತ್ನಿಯರ ಸಾಧನೆಯಿರುವಂತೆ, ಪುರಂದರದಾಸರ ಹಿರಿಮೆಯ ಹಿಂದೆ ಅವರ ಪತ್ನಿ ಸರಸ್ವತಿಬಾಯಿಯವರ ಮಹತ್ವದ ಸಾಧನೆಯಡಗಿದೆ. ಹೀಗೆ ಪುರಂದರಗಡವನ್ನು ತೊರೆದು ಹಂಪೆಗೆ ಬಂದ ಪುರಂದರರು ವ್ಯಾಸರಾಯರಿಂದ ದೀಕ್ಷೆಪಡೆದು ಮಾಧ್ವಸಂಪ್ರದಾಯಕ್ಕೆ ಬದ್ಧರಾದರೆಂದು ತಿಳಿದುಬರುತ್ತದೆ. ವ್ಯಾಸತೀರ್ಥರು ಕಟ್ಟಿದ ದಾಸಕೂಟ ಪರಂಪರೆಯನ್ನು ಬೆಳೆಸಿದ ಕೀರ್ತಿ ಪುರಂದರದಾಸರಿಗೆ ಸಲ್ಲುತ್ತದೆ. ಈ ರೀತಿ ಶೀನಪ್ಪನಾಯಕರಾಗಿದ್ದವರು ಪುರಂದರದಾಸರಾಗಿ ಒಂದು ಲಕ್ಷ ಎಪ್ಪತ್ತೈದು ಸಾವಿರ ಕೃತಿ ರಚನೆ ಮಾಡಿದರೆಂಬ ಪ್ರತೀತಿಯಿದೆ. ಆದರೆ ಈಗ ದೊರೆತಿರುವ ಅವರ ಕೀರ್ತನೆಗಳ ಸಂಖ್ಯೆ ಸಾವಿರಕ್ಕಿಂತ ಕಡಿಮೆಯಿದೆ.

ಮಧ್ವಮತ ಪ್ರಚಾರವನ್ನು ತಮ್ಮ ಕೀರ್ತನೆಗಳ ಮೂಲಕ ಕೈಕೊಂಡ ಪುರಂದರದಾಸರು ಅನೇಕ ಪವಿತ್ರ ಕ್ಷೇತ್ರಗಳನ್ನು ಸುತ್ತಾಡಿದ್ದಾರೆ. ತಿರುಪತಿ,

ಶ್ರೀ ರಂಗಪಟ್ಟಣ, ಅರುಣಗಿರಿ, ಉಡುಪಿ, ಕಂಚಿ, ಕನಕಾಚಲ, ಕಾಶಿ, ಕುಂಭಕೋಣ, ಕೂಡಲಿಪುರ, ಹಸ್ತಿಗಿರಿ, ಸಿಂಹಗಿರಿ, ಕಾಳಹಸ್ತಿ, ಶ್ರೀಶೈಲ, ಘಟಿಕಾಚಲ, ಗದಗ, ಪಂಢರಪುರ, ಬೇಲೂರು, ಮನ್ನಾರು, ಮಳೂರು, ಮೇಲುಕೋಟೆ, ಹಂಪಿ, ಹರಿಹರ ಈ ಮುಂತಾದ ಪುಣ್ಯಕ್ಷೇತ್ರಗಳನ್ನು ಸುತ್ತಾಡಿದ ಪುರಂದರದಾಸರು ಜನಸಾಮಾನ್ಯರಿಗೆ ಅನುಭವದೆತ್ತರವನ್ನು ತಿಳಿಸಿದವರಾಗಿದ್ದಾರೆ.

ಪುರಂದರದಾಸರಿಗೆ ವರದ, ಗುರುರಾಯ, ಅಭಿನವ, ಮಧ್ವಪತಿ ಎಂಬ ನಾಲ್ವರು ಗಂಡು ಮಕ್ಕಳು ಹಾಗೂ ಒಬ್ಬ ಮಗಳೂ ಇದ್ದರೆಂದು ತಿಳಿದುಬರುತ್ತದೆ. ಆದರೆ ಕಮಲಾಪುರ ತಾಮ್ರಶಾಸನದಲ್ಲಿ ಲಕ್ಷ್ಮಣದಾಸ, ಹೇಬಣದಾಸ ಮತ್ತು ಮಧ್ವಪದಾಸ ಎಂಬ ಮೂವರು ಮಕ್ಕಳ ಹೆಸರು ಮಾತ್ರ ಉಲ್ಲೇಖವಾಗಿದೆ. ಹಂಪಿಯಲ್ಲಿ ದೊರೆತಿರುವ ಪುರಂದರದಾಸರ ಶಿಲಾ ಮೂರ್ತಿಯನ್ನು ಗಮನಿಸಿದರೆ ಪುರಂದರರು ಹಂಪಿಯಲ್ಲಿಯೇ ಕ್ರಿ. ಶ. ೧೫೬೪ ರಲ್ಲಿ ನಿಧನರಾದರೆಂದು ತಿಳಿದುಬರುತ್ತದೆ.

## ಕೀರ್ತನೆಗಳ ಪ್ರಾಮುಖ್ಯ

ಪುರಂದರದಾಸರು ಕೀರ್ತನೆಗಳೊಂದಿಗೆ ಇತರ ಸಾಹಿತ್ಯ ಪ್ರಕಾರಗಳಲ್ಲಿಯೂ ಕೃಷಿಮಾಡಿದ್ದಾರೆ. ವಿಜಯದಾಸರ ಸಮಕಾಲೀನರಾದ ಪ್ರಸನ್ನ ವೆಂಕಟದಾಸರು ಪುರಂದರ ಸಾಹಿತ್ಯದ ಸ್ವರೂಪವನ್ನು ಕುರಿತಂತೆ ಹೀಗೆ ಹೇಳಿದ್ದಾರೆ.

ಗೀತಠಾಯಿ ಸುಳಾದ್ಯುಗಾಭೋಗ ಪದ್ಯಪದ
ವ್ರಾತ ಪ್ರಬಂಧ ರಚಿಸಿ ವಿಠ್ಠಲನ
ಪ್ರೀತಿ ಬಡಿಸಿ ಪ್ರತ್ಯಕ್ಷ ಕಂಡು ನಲಿವ ವೈಷ್ಣವಾಗ್ರ
ನಾಥ ಪ್ರಸನ್ನ ವೇಂಕಟಕೃಷ್ಣಪ್ರಿಯನ

ಗೀತ, ಠಾಯಿ, ಸುಳಾದಿ, ಉಗಾಭೋಗ, ಪದ್ಯ, ಪದ ಎಂಬ ಆರು ಬಗೆಯ ರಚನೆಗಳನ್ನು ಪುರಂದರದಾಸರು ರಚಿಸಿದ್ದಾರೆಂದು ತಿಳಿದುಬರುತ್ತದೆ.

ಈ ಸಂಪುಟದಲ್ಲಿ ಪುರಂದರದಾಸರ ಕೀರ್ತನೆಗಳನ್ನು ಮಾತ್ರ ಸಂಗ್ರಹಿಸಿ ಕೊಡಲಾಗಿದೆ. ಅವರ ಉಳಿದ ರಚನೆಗಳ ಬಗೆಗೆ ಪ್ರತ್ಯೇಕ ಸಂಪುಟವಿದೆ.

ದಾಸರ ರಚನೆಗಳಲ್ಲಿ ಕೀರ್ತನೆಗಳೇ ಹೆಚ್ಚು ಜನಪ್ರಿಯುವಾಗಿವೆ. "ಸುಳಾದಿಗಳಲ್ಲಿರುವಂತೆ ವಿವಿಧ ತಾಳಗಳ ಬಿಗಿಯಿಲ್ಲ, ಠಾಯಿಯಲ್ಲಿರುವಂತೆ ರಾಗವಿಸ್ತರಣೆಯ ಅಗತ್ಯವಿಲ್ಲ, ಉಗಾಭೋಗದಲ್ಲಿರುವಂತೆ ಮಾತ್ರಾಗಣ, ಲಯಬಂಧಗಳ ಕಟ್ಟುಪಾಡಿಲ್ಲ." ಎಂದು ಹೇಳಿರುವ ಪ್ರೊ. ಎಸ್. ಕೆ. ರಾಮಚಂದ್ರರಾವ್ ಅವರ ನುಡಿಗಳಲ್ಲಿ ಸತ್ಯವಿದೆ. ಕೀರ್ತನೆಗಳಲ್ಲಿ ಹಾಡಿನ ಮೋಡಿಯ ಗುಣದ ಜತೆಗೆ, ಸಾಹಿತ್ಯಕ ಸುಗಂಧವೂ ಸೇರಿಕೊಂಡು ಕೇಳುಗರನ್ನು ಆಕರ್ಷಿಸುತ್ತವೆ.

ಕೀರ್ತನೆಯ ಇನ್ನೊಂದು ಮುಖ್ಯ ಗುಣವೆಂದರೆ ಅದರ ತನ್ಮಯತೆ. ಇದು ಭಗವಂತನನ್ನು ಕುರಿತಿರುವ ಭಕ್ತನ ತನ್ಮಯತೆ. ಭಗವಂತನನ್ನು ಕೀರ್ತಿಸುವುದೇ ಇಲ್ಲಿ ಭಕ್ತನ ಪ್ರಮುಖ ಕ್ರಿಯೆಯಾಗಿರುವುದರಿಂದ 'ಕೀರ್ತನೆ' ಯಂತಹ ಸಾಹಿತ್ಯದ ರೂಪ ಭಕ್ತಿ ಪಂಥದಲ್ಲಿ ಮಾತ್ರ ಕಾಣಿಸಿಕೊಳ್ಳಲು ಸಾಧ್ಯವಾಗಿದೆ. ಹೀಗಾಗಿ ಇದರ ಸ್ವರೂಪ – ಉದ್ದೇಶಗಳನ್ನು ಕುರಿತು ಚರ್ಚಿಸುವಂತಹ ಸಂದರ್ಭದಲ್ಲಿ ಭಕ್ತ – ಭಗವಂತನ ನಡುವಿರುವ ಸಂಬಂಧದ ಹಿನ್ನೆಲೆಯಲ್ಲಿಯೇ ಇದನ್ನು ವಿಶ್ಲೇಷಿಸಬೇಕಾಗುತ್ತದೆ. ಕೀರ್ತನೆಗಳನ್ನು "ಪದಗಳೆಂದು" "ದೇವರನಾಮಗಳೆಂದೂ" ಕರೆಯುವ ರೂಢಿಯಿದೆ.

'ಕೀರ್ತಿ' 'ಕೀರ್ತಿಸು' ಪದಗಳಿಂದ ಹುಟ್ಟಿಕೊಂಡ "ಕೀರ್ತನೆ"ಯು "ಸ್ತುತಿ" 'ಸ್ತೋತ್ರ' ಯೆಂಬರ್ಥಗಳನ್ನು ಪಡೆದಿದೆ. ಕೀರ್ತನೆಯ ಮುಖ್ಯಗುಣ ಸ್ತುತಿಸುವುದೇ ಆದರೂ ಅದೊಂದು ಸಾಹಿತ್ಯರೂಪವಾಗಿ ಬೆಳೆದುಕೊಂಡು ಬಂದಿರುವುದನ್ನು ಮರೆಯುವಂತಿಲ್ಲ. "ಕೀರ್ತನೆ" ಪದಕ್ಕೆ ಸಂವಾದಿಯಾಗಿ "ಹರಿಕಥೆ" ಪದವನ್ನು ಬಳಸುತ್ತಾರೆ. ಕೀರ್ತನೆ ಮಾಡುವವರನ್ನು ಕೀರ್ತನಕಾರರೆಂದು ಕರೆಯುತ್ತಾರೆ. "ಕಲಿಯುಗದಿ ಗಾನದಲಿ ಕೇಶವಯೆನಲು ಕೈಗೂಡುವನು ರಂಗವಿಠಲ" ಎಂಬ ಶ್ರೀಪಾದರಾಜರ ನುಡಿಯಲ್ಲಿ, "ಹರೇರ್ವಾಪ್ರಭೋರ್ವಾ ಕೀರ್ತನಂ ಸಂಕೀರ್ತನಂ"

ಎಂದು ತಾಳ್ಳಪಾಕ ಅಣ್ಣಮಾಚಾರ್ಯರು ಸಂಕೀರ್ತನೆಗೆ ಹೇಳಿರುವ ಲಕ್ಷಣದಲ್ಲಿ ಕೀರ್ತನ ಭಕ್ತಿಯ ಮಹತ್ವವನ್ನು ಅದರ ಅನಂತತೆಯನ್ನು ಕಾಣಬಹುದಾಗಿದೆ.

'ಕೀರ್ತನೆ'ಯನ್ನು ತಾಳಸಹಿತವಾದ ರಾಗದಲ್ಲಿ ಹಾಡಿದಾಗಲೇ ಅದರ ಸಾರ್ಥಕತೆಯುಂಟು. ಇಲ್ಲಿ ಧ್ರುವಪದವು ಇದ್ದೇ ಇರುತ್ತದೆ. ವಚನ - ಸ್ವರವಚನಗಳಂತೆ ಕೀರ್ತನೆಗಳಲ್ಲಿಯೂ ಕೊನೆಯ ನುಡಿಯಲ್ಲಿ ಅದನ್ನು ರಚಿಸಿದವರ ಅಂಕಿತವಿರುತ್ತದೆ. ನಾಲ್ಕು ಸಾಲಿನ ನುಡಿಗಳೇ ಕೀರ್ತನೆಯಲ್ಲಿ ಹೆಚ್ಚಾಗಿ ಬರುತ್ತವೆ. ಇಂತಹ ಮೂರುನುಡಿ, ಐದುನುಡಿ, ಏಳುನುಡಿಗಳನ್ನೊಳಗೊಂಡ ಕೀರ್ತನೆಗಳಿವೆ. ಹತ್ತಕ್ಕಿಂತ ಹೆಚ್ಚು ನುಡಿಗಳಿರುವ ಕೀರ್ತನೆಗಳು ವಿರಳ. ಮೂರರಿಂದ ಐದು ನುಡಿಗಳಿರುವ ಕೀರ್ತನೆಗಳೇ ಹೆಚ್ಚು.

'ಕೀರ್ತನೆ' ಸಾಹಿತ್ಯರೂಪದ ಉಗಮ ಯಾವಾಗ ಆಯಿತೆಂಬುದಕ್ಕೆ ವಿದ್ವಾಂಸರಲ್ಲಿ ಬೇರೆ ಬೇರೆ ಅಭಿಪ್ರಾಯಗಳಿವೆ. "ಕನ್ನಡದಲ್ಲಿ ಕೀರ್ತನೆ ಅಥವಾ 'ಪದ' ಎಂಬುದೇನು ಹೊಸದಲ್ಲ. ವೈದಿಕ ಪರಂಪರೆಯಿಂದ ಅದು ಬಂದದ್ದೆಂಬುದು ದೂರದ ಮಾತು. ಕನ್ನಡದ ಮಟ್ಟಿಗೆ ಪಾಡು, ಮೆಲ್ವಾಡು, ಬಾಜನೆಗಬ್ಬಗಳಿದ್ದವು. ಆಮೇಲೆ ಶರಣರಲ್ಲಿ ಕೆಲವರು ಪದಗಳನ್ನು ಹಾಡಿದರು. ಅದೇ ಹರಿದಾಸರ ಬಾಯಲ್ಲಿ 'ಕೀರ್ತನೆ' ಯಾಯಿತೆಂದು ರಂ. ಶ್ರೀ. ಮುಗಳಿಯವರು ಹೇಳಿದರೆ ('ಕನ್ನಡ ಸಾಹಿತ್ಯ ಚರಿತ್ರೆ', ಪು: ೨೭೮). "ವೀರಶೈವರ ವಚನಗಳ ರಚನೆಯಿಂದ ಈ ವಿಷಯದಲ್ಲಿ ಸಾಮೂಹಿಕ ಪ್ರೇರಣೆಯುಂಟಾಗಿರಬಹುದಾಗಿದೆ" ಎಂದು ವ. ಅ. ದಿವಾಣಜಿಯವರು ಅಭಿಪ್ರಾಯಪಟ್ಟಿದ್ದಾರೆ. ("ಪ್ರಸಾದಯೋಗ" ಪು: ೧೧) "ಹನ್ನೆರಡನೇ ಶತಮಾನದಲ್ಲಿದ್ದ ಶಿವಶರಣರಿಂದಲೇ ಈ ಕೀರ್ತನ ಪ್ರಕಾರ ಹುಟ್ಟಿತು, ಶಿವಶರಣರೇ ಕೀರ್ತನ ಪ್ರಕಾರದ ಪ್ರವರ್ತಕ" ರೆಂದು ಎಲ್. ಬಸವರಾಜು ಅವರು ಸ್ಪಷ್ಟಪಡಿಸಿದ್ದಾರೆ (ಶಿವದಾಸಗೀತಾಂಜಲಿ, ಪು: ೨೨) ಶರಣರ ಸ್ವರವಚನಗಳ ಮುಂದಿನ ಬೆಳವಣಿಗೆಯಾಗಿ ಕೀರ್ತನೆಯಂತಹ ಸಾಹಿತ್ಯರೂಪ ಹುಟ್ಟಿಕೊಂಡಿದೆಯೆನ್ನ ಬಹುದಾಗಿದೆ.

ಪ್ರಕಟವಾಗಿವೆ. ಹೀಗಾಗಿ ಮತ್ತೆ ಮತ್ತೆ ಇಲ್ಲಿ ಅದರ ಪ್ರಸ್ತಾಪ ಅನಗತ್ಯವೆನಿಸುತ್ತದೆ. ಆದರೆ ಪುರಂದರರ ಸಾಹಿತ್ಯವನ್ನು ಇಂದಿನ ನವವಸಾಹತು ಶಾಹಿಯ ಆಕ್ರಮಣದ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ಇಂದಿನ ಅಗತ್ಯವಾಗಿದೆ. ತಮ್ಮ ಕಾಲದಲ್ಲಿಯೇ ವ್ಯಾಸಕೂಟವನ್ನು ವಿರೋಧಿಸಿ ದಾಸಕೂಟವನ್ನು ಪ್ರಾರಂಭಿಸಿದ ಪುರಂದರದಾಸರು ದೇಸೀ ಸಂಸ್ಕೃತಿಯು ಸಾಧ್ಯತೆಗಳನ್ನು ತಮ್ಮ ಕೃತಿಗಳಲ್ಲಿ ಹೆಚ್ಚಿಸಿಕೊಂಡಿದ್ದಾರೆ. ಹೊರಗಿನ ವ್ಯಾಮೋಹಕ್ಕೆ ಬಲಿಬೀಳದೆ ಒಳಗನ್ನು ಹುಡುಕಿಕೊಳ್ಳುವ, ಅದನ್ನು ಶುದ್ಧೀಕರಿಸಿಕೊಳ್ಳುವ ಪ್ರಕ್ರಿಯೆಯನ್ನು ಅವರ ಕೃತಿಗಳಲ್ಲಿ ಕಾಣಬಹುದಾಗಿದೆ. ಅದು ಇಂದು ಹೆಚ್ಚು ಪ್ರಸ್ತುತವೆನಿಸುತ್ತದೆ.

ಪುರಂದರದಾಸರ ಕೀರ್ತನೆಗಳಲ್ಲಿ ಎಲ್ಲವೂ ಇದೆಯೆನ್ನುವ ಭಾವೋದ್ವೇಗ ಹೇಳಿಕೆಗಿಂತ, ಅವರ ರಚನೆಗಳಲ್ಲಿ ವೈವಿಧ್ಯಮಯ ಬದುಕಿನ ಸಂಕೀರ್ಣ ಅನುಭವವಿದೆಯೆಂದು ಹೇಳುವುದು ಹೆಚ್ಚು ಸೂಕ್ತವೆನಿಸುತ್ತದೆ. ಅಲಂಕಾರ, ಪ್ರತಿಮೆ, ಸಂಕೇತಗಳು ಅವರ ಕೀರ್ತನೆಗಳಲ್ಲಿ ಸಂದರ್ಭಕ್ಕೆ ಸಹಜವೆಂಬಂತೆ ಮೂಡಿಬಂದಿವೆ. ಗಾದೆಮಾತು, ಪಡಿನುಡಿಗಳು ಪರಿಣಾಮಕಾರಿಯಾಗಿ ಬಳಕೆಯಾಗಿವೆ. ಆಡುಮಾತಿನ ಸೊಗಡು, ಉಸಿರಿನಷ್ಟು ಸಹಜವಾಗಿ ಹೊರಹೊಮ್ಮಿದೆ. ಭಕ್ತಿ, ಆಧ್ಯಾತ್ಮ, ಅನುಭಾವಗಳ ಜತೆಗೆ ಸಾಮಾಜಿಕ ಪ್ರಜ್ಞೆ, ವಿಡಂಬನೆ, ಜಾತ್ಯಾತೀತ ಪರಿಕಲ್ಪನೆಗಳು ಗಮನ ಸೆಳೆಯುತ್ತವೆ. ಅವರ ಕೀರ್ತನೆಗಳಲ್ಲಿ ಬರುವ ಬಾಲಕೃಷ್ಣನ ಚಿತ್ರಣವಂತೂ ಮನಮೋಹಕವಾಗಿದೆ. ಭಾರತೀಯ ಸಂಸ್ಕೃತಿಯನ್ನು ಪ್ರತಿಪಾದಿಸುವ ಮಹತ್ವದ ಜೀವನ ಮೌಲ್ಯಗಳಿವೆ. ಅಹಂಭಾವ ಅತಿಯಾಗಿ ಅನುಭಾವ ಕಣ್ಮರೆಯಾಗುತ್ತಿರುವ ಈ ಸಂದರ್ಭದಲ್ಲಿ ಪುರಂದರದಾಸರ ಕೀರ್ತನೆಗಳು ತೀರಾ ಪ್ರಸ್ತುತವೆನಿಸುತ್ತವೆ. ನವವಸಾಹತುಶಾಹಿಯ ದಾಸ್ಯದಲ್ಲಿ ಮನುಷ್ಯ ಸಂಬಂಧಗಳೇ ಮರೆತುಹೋಗುತ್ತಿರುವ ಈ ಕಾಲದಲ್ಲಿ ಪುರಂದರದಾಸರ ಮಾನವೀಯ ಅಂತಃಕರಣ ದೊಡ್ಡದಾಗಿ ಕಾಣಿಸುತ್ತದೆ. ಎಲ್ಲವೂ ನನಗಾಗಿ ಎಂದು ಸಂಭ್ರಮಿಸುತ್ತಿರುವ ಭ್ರಮಾಲೋಕದ ಜನರಿಗೆ, ಎಲ್ಲವನ್ನೂ ತೊರೆದು ದಾಸರಾದ ಪುರಂದರರ ಚಿಂತನೆಗಳು ತೀರಾ ಅಗತ್ಯವಾಗಿವೆ.

ಡಾಂಭಿಕತೆ, ಬೂಟಾಟಿಕೆಯಂತಹ ಸೋಗಿನ ಸಂಸ್ಕೃತಿಯನ್ನು ವಿಡಂಬಿಸಿ ವಿನಯವಂತಿಕೆ, ಮಾನವೀಯತೆಯನ್ನು ಕಲಿಸುವ ದಾಸರ ಹಾಡುಗಳು ಎಲ್ಲ ಕಾಲಕ್ಕೂ ಸಲ್ಲಬಹುದಾದ ಸತ್ವವನ್ನು ಪಡೆದುಕೊಂಡಿವೆ. ಜಡತ್ವವನ್ನು ತೊರೆದು, ಚರಿನಶೀಲವಾಗುವ, ಅಹಂಭಾವವನ್ನು ಬಿಟ್ಟು ಅನುಭಾವಿಯಾಗುವ, ಡಾಂಭಿಕತೆಯನ್ನು ತೊರೆದು ದಾಸನಾಗುವ ಸಮರ್ಪಣಾಭಾವ ಇಲ್ಲಿಯ ಮುಖ್ಯ ಆಶಯವಾಗಿದೆ. ತನ್ನೊಳಗನ್ನು ಬೆಳಗಲೆತ್ನಿಸುವ ಈ ಕ್ರಿಯೆ ತುಂಬಾ ಮಹತ್ವದ್ದೆನಿಸುತ್ತದೆ. ಇಂತಹ ಅಮೂಲ್ಯ ರಚನೆಗಳು ಇಲ್ಲಿವೆ. ಅಧ್ಯಯನದ ಮೂಲಕ ಓದುಗರು ಆ ಪ್ರಾಮುಖ್ಯವನ್ನು ಕಂಡುಕೊಳ್ಳುವರೆಂದು ಆಶಿಸಿದ್ದೇನೆ.

ಪುರಂದರದಾಸರ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಸಾಮಾಜಿಕ ಪ್ರಜ್ಞೆ ಇಂದಿಗೂ ಪ್ರಸ್ತುತವಾಗಿದೆ. ಅವರು ಭಕ್ತಿಯನ್ನು ಸಾಧಿಸಿ ಹರಿದಾಸರಾಗಿರುವಂತೆ, ಸಮಾನತೆಯನ್ನು ಸಾರಿಹೇಳುವ ಸಮಾಜ ಚಿಂತಕರೂ ಆಗಿದ್ದಾರೆ. ಭಾರತೀಯ ಭಕ್ತಿಪರಂಪರೆಯ ಮೂಲ ನೆಲೆಗಳನ್ನು, ನವವಸಾಹತುಶಾಹಿ ಆಕ್ರಮಣದ ಈ ಸಂದರ್ಭದಲ್ಲಿ ಶೋಧಿಸಬೇಕಾದುದು ತುಂಬಾ ಅಗತ್ಯವಾಗಿದೆ. ಅಹಂಭಾವ ಹೆಚ್ಚಾಗುತ್ತಿರುವ ಈ ದಿನಗಳಲ್ಲಿ ಭಕ್ತಿಯ ಒಳನೋಟಗಳನ್ನು ಕುರಿತು ಗಂಭೀರವಾಗಿ ಚರ್ಚಿಸಬೇಕಾಗಿದೆ.

ದುರುಳ ಬುದ್ಧಿಗಳೆಲ್ಲ ಬಿಡಿಸೋ ನಿನ್ನ
ಕರುಣಕವಚವೆನ್ನ ಹರಣಕ್ಕೆ ತೊಡಿಸೋ

ಎಂದು ವಿನಂತಿಸುವ ದಾಸರ ಈ ನುಡಿಯಲ್ಲಿ, ಕರುಣೆ ದಯೆಯಂತಹ ಮೌಲ್ಯಗಳ ಬಗೆಗೆ ಅಪಾರ ಕಾಳಜಿ ಕಂಡುಬರುತ್ತದೆ. ಇಂತಹ ಸದ್ಗುಣಗಳಿಂದಲೇ ದುರುಳತನ ದೂರಾಗಬಲ್ಲುದೆಂಬುದನ್ನು ಅರಿತುಕೊಂಡ ದಾಸರು ಅಂತಹ ಮಾನವೀಯ ಮೌಲ್ಯಗಳ ಶೋಧಕ್ಕೆ ತೊಡಗುತ್ತಾರೆ. ಈ ಭಕ್ತಿಭಾವದಲ್ಲಿ ಸ್ವಾರ್ಥವನ್ನು ಕಳೆದುಕೊಂಡು, ದುರುಳತನದಿಂದ ಬಿಡಿಸಿಕೊಂಡು ಮನುಷ್ಯನಾಗುವ ಅನಂತ ಕನಸುಗಳಿವೆ. ಮನುಷ್ಯಸಾಧ್ಯತೆಯ ಇಂತಹ ಅನೇಕ ಕನಸುಗಳನ್ನು ಕಟ್ಟಿಕೊಡುವ ಈ ಭಕ್ತಿಯ ಪರಿ ಅನನ್ಯವಾಗಿದೆ. ಇದನ್ನೆಲ್ಲಾ ನೋಡಿದರೆ, ಇಲ್ಲಿ ಭಕ್ತಿಯೆಂಬುದು

ಕೇವಲ ವ್ಯಕ್ತಿಗತ ವಿಷಯವಾಗಿ ಉಳಿಯದೆ, ಅದು ಸಮುದಾಯದ ಸ್ಥಿತಿಯಾಗಿ, ಕರುಣಾಳಿನ ಬೆಳಕಾಗಿ ಪ್ರಜ್ವಲಿಸುತ್ತದೆ.

ಗುರುಭಕ್ತಿಯೆಂತೆಂಬ ಗಮಕದೋಲೆಯನಿಟ್ಟು
ಹರಿಧ್ಯಾನವೆಂಬ ಆಭರಣವಿಟ್ಟು ।
ಪರತತ್ತ್ವವೆಂತೆಂಬ ಪಾರಿಜಾತವ ಮುಡಿದು
ಪರಮಾತ್ಮ ಹರಿಗೆ ಆರತಿಯೆತ್ತಿರೆ

ಎಂದು ಮಂಗಳಹಾಡುವ ಪುರಂದರದಾಸರ ಈ ಭಕ್ತಿಗೆ ದೀರ್ಘವಾದ ಪರಂಪರೆಯಿದೆ. ದಾಸರ ಮಧುರಭಕ್ತಿಯಲ್ಲಿರುವ ಅನನ್ಯತೆಯನ್ನು ಇಲ್ಲಿಯ ಅನೇಕ ಕೀರ್ತನೆಗಳಲ್ಲಿ ಕಾಣಬಹುದಾಗಿದೆ.

ದಾಸರು ಈ ಭಕ್ತಿಯ ಅಂತರಾರ್ಥವನ್ನು ಬಿಚ್ಚಿಡುತ್ತಾ ಆ ದೇವನಿಗೆ ನಾನು ಕೊಡುವುದಾದರೂ ಏನು? ಮಾಡುವುದಾದರೂ ಏನು? ಎಂದು ಪ್ರಶ್ನಿಸಿಕೊಳ್ಳುತ್ತಾರೆ. ವಿಠ್ಠಲನನ್ನು ಅರ್ಚಿಸುವದಾದರೂ ಹೇಗೆ? ಎಂದು ಕೇಳಿಕೊಳ್ಳುತ್ತಾರೆ. ಮಂಗಳಾಭಿಷೇಕಕ್ಕಾಗಿ ಉದಕ ತಂದು ಪೂಜಿಸಬೇಕೆಂದರೆ, ಅಂಗುಷ್ಟದಲ್ಲಿ ಗಂಗೆಯಿದ್ದಾಳೆ. ಪುಷ್ಪವ ತಂದು ಅರ್ಪಿಸಬೇಕೆಂದ್ದರೆ ಹೊಕ್ಕಳಲ್ಲಿಯೇ ಅರಳಿದ ಪುಷ್ಪವಿದೆ. ಮೋಟು ದೀವಿಗೆ ಹಿಡಿದು ಬೆಳಗಬೇಕೆಂದರೆ ಕೋಟಿ ಸೂರ್ಯರ ಕಾಂತಿಯೇ ಆತನಲ್ಲಿದೆ. ಹಾಸಿಗೆ ಹಾಸಿ ಭಕ್ತಿ ಸಲ್ಲಿಸಬೇಕೆಂದರೆ ಶೇಷನ ಮೈಮೇಲೆಯೇ ಪವಡಿಸಿದ್ದಾನೆ. ಹೀಗಿದ್ದಾಗ ಯಾವ ಪೂಜಾಸಲಕರಣೆಗಳೂ ಪ್ರಯೋಜನಕ್ಕೆ ಬಾರದಂತಾಗಿವೆ. ಆದರೆ ಆತ ಭಕ್ತಪ್ರಿಯನಾದುದರಿಂದ ಭಕ್ತಿಯಿಂದಲೇ ದೇವನನ್ನು ಪೂಜಿಸಬೇಕೆಂಬ ನಿರ್ಣಯಕ್ಕೆ ಬರುತ್ತಾರೆ. ಬಸವಣ್ಣ ಮೊದಲಾದ ಶಿವಶರಣರೂ ಕೂಡ ದೇವರು ಭಕ್ತಿಪ್ರಿಯನೆಂದೇ ನಂಬಿ ಪೂಜಿಸಿದ್ದಾರೆ. ಅಂತಹ ಭಕ್ತಿ ಪರಂಪರೆಯನ್ನೇ ಮುಂದುವರಿಸಿದ ಪುರಂದರದಾಸರು ಭಕ್ತಿಯೊಂದಿದ್ದರೆ ಸಾಕೆಂದು ಸ್ಪಷ್ಟಪಡಿಸುತ್ತಾರೆ.

ನಿತ್ಯ ಉಪವಾಸವಿದ್ದು ಹಸಿದು ಬಳಲಲೇಕೆ ?
ಮತ್ತೆ ಚಳಿಯೊಳು ಗಂಗೆ ಮುಳುಗಲೇಕೆ
ಹಸ್ತವ ಪಿಡಿದು ಮಾಡುವ ಜಪ–ತಪ
ಮುಕ್ತಿಗೆ ಸಾಧನವಲ್ಲವೆ ಹರಿನಾಮ?

ಎಂದು ಪ್ರಶ್ನಿಸುವಲ್ಲಿ ಡಾಂಭಿಕ ಭಕ್ತಿಯ ನಿರಾಕರಣೆಯಿದೆ. ಭಕ್ತಿಯನ್ನು ಸ್ಥಾಪಿಸುತ್ತಲೇ ಡಾಂಭಿಕತೆಯನ್ನು ದಾಸರು ತಿರಸ್ಕರಿಸುತ್ತಾರೆ. ವಾರಣಾಸಿಗೆ ಹೋಗಿ ಬಳಲುವುದರಿಂದ, ನೀರ ಕಾವಡಿಯಹೊತ್ತು ತಿರುಗುವುದರಿಂದ, ಸತಿಸುತರನು ಬಿಟ್ಟು ಯತಿಗಳಾಶ್ರಮ ಸೇರುವುದರಿಂದ ಮುಕ್ತಿ ದೊರೆಯದೆಂದು ಸ್ಪಷ್ಟಪಡಿಸಿರುವ ಪುರಂದರದಾಸರು ಹರಿಸ್ಮರಣೆ, ಅಂತರಂಗದ ಭಕ್ತಿಯಿಂದ ಮಾತ್ರ ದೇವನೊಲಿಮೆ ಸಾಧ್ಯವೆಂದು ಹೇಳಿದ್ದಾರೆ.

ಪುರಂದರದಾಸರ ಸಾಮಾಜಿಕ ಕಳಕಳಿಯನ್ನು ಇಂದು ಗಮನಿಸಲೇ ಬೇಕಾಗಿದೆ. ಅವರು ಜಾತಿ – ಮತಗಳನ್ನು ಖಂಡಿಸಿದರು, ಯಾಗ – ಯಜ್ಞಗಳನ್ನು ತಿರಸ್ಕರಿಸಿದರು. ಮೂಢನಂಬಿಕೆಗಳನ್ನು ಅಲ್ಲಗಳೆದರು, ಡಾಂಭಿಕತೆಯನ್ನು ವಿಡಂಬಿಸಿದರು.

"ಯಾಗ ಯಜ್ಞ ಮಾಡಲೇಕೆ ।
ಯೋಗಿ ಯತಿಯು ಆಗಲೇಕೆ ॥"

"ಹೊಲೆಯ ಹೊರಗಹನೆ ಊರೊಳಗಿಲ್ಲವೆ ।
ಸಲೆ ಶಾಸ್ತ್ರವನು ತಿಳಿದು ಬಲ್ಲವರು ನೋಡಿ ॥"

"ಸತ್ಯ ಶೌಚವಿಲ್ಲದ ಆಚಾರವೇಕೆ ?
ಚಿತ್ತಶುದ್ಧಿಯಿಲ್ಲದ ಜ್ಞಾನವಿನ್ನೇಕೆ ?"

"ಹೀನ ಗುಣಂಗಳ ಬಿಡದೆ ನದಿಯೊಳು
ಸ್ನಾನವ ಮಾಡಿದರೇನು ಫಲ?"

ಇಂತಹ ಅನೇಕ ಕೀರ್ತನೆಗಳಲ್ಲಿ ಪುರಂದರದಾಸರ ಸಾಮಾಜಿಕ ಕಳಕಳಿ ಎದ್ದು ಕಾಣುತ್ತದೆ. ಭಕ್ತಿಗೆ ವಿಶಾಲ ಅರ್ಥವನ್ನು ತಂದುಕೊಟ್ಟ ಅವರು ಸಾಮಾಜಿಕ ಪರಿವರ್ತನೆಗೆ ವಿಶಾಲ ಮನಸ್ಸು ಬಹಳ ಮುಖ್ಯವೆಂದು ಹೇಳಿದರು. ಭಕ್ತಿ – ಮನಸ್ಸು – ಸಮಾಜ ಇವುಗಳಲ್ಲಿರುವ ಆಂತರಿಕ ಸಂಬಂಧವನ್ನು ಬಿಚ್ಚಿತೋರಿಸಿದರು.

ಗೂಟನಾಮವ ಹೊಡೆದು ಗುಂಡುತಂಬಿಗೆ ಹಿಡಿದು
ಗೋಟಂಚು ಧೋತರ ಮಡಿಯನುಟ್ಟು ।
ದಾಪುಗಾಲಿಡುತ ನಾ ಧರೆಯೊಳಗೆ ಬರಲೆನ್ನ
ಬೂಟಕತನ ನೋಡಿ ಭ್ರಮಿಸದಿರಿ ಜನರೆ

ಎಂದು ಸ್ಪಷ್ಟಪಡಿಸಿದರು. ತೋರಿಕೆಯ ಭಕ್ತಿಯನ್ನು ತಿರಸ್ಕರಿಸಿದ ಅವರು ಆಂತರಿಕ ಹುಡುಕಾಟಕ್ಕೆ, ಆತ್ಮಶೋಧನೆಗೆ ಪ್ರಾಮುಖ್ಯತೆ ಕೊಟ್ಟರು. ಅಂತರಂಗ ಶುದ್ಧಿಯಾಗದೆ ಬಹಿರಂಗ ಶುದ್ಧಿ ವ್ಯರ್ಥವೆಂದು ತಿಳಿಸಿದರು. ಮನವ ತೊಳೆಯದೆ ಮಲವ ತೊಳೆಯುವದರಿಂದೇನು ಪ್ರಯೋಜನವೆಂದು ಕೇಳಿಕೊಂಡರು. ನೀರಿನಲ್ಲಿ ಕುಳಿತು ಧ್ಯಾನ ಮಾಡುವ ಡಾಂಭಿಕರನ್ನು ಬಕಪಕ್ಷಿಗಳಿಗೆ ಹೋಲಿಸಿದರು. ಮನದಲ್ಲಿ ದೃಢಭಕ್ತಿಯಿಲ್ಲದೆ ತನುವ ನೀರೊಳಗದ್ದುವುದು ವ್ಯರ್ಥವೆಂದು ಸ್ಪಷ್ಟಪಡಿಸಿದರು.

ದಾನ ಧರ್ಮಗಳನು ಮಾಡುವುದೆ ಸ್ನಾನ
ಜ್ಞಾನ ತತ್ವಂಗಳ ತಿಳಿಯುವುದೆ ಸ್ನಾನ
ಹೀನ ಪಾಪಂಗಳ ಬಿಡುವುದೆ ಸ್ನಾನ
ಧ್ಯಾನದಿ ಮಾಧವನ ನಂಬುವುದೇ ಸ್ನಾನ ॥

ವೆಂದು ಸ್ನಾನದ ಅರ್ಥವನ್ನು ವಿವರಿಸಿ ಹೇಳಿದರು.

ಮನಸ್ಸು ಮರ್ಕಟನಂತೆ, ಹುಚ್ಚು ಕುನ್ನಿಯಂತೆಯೆಂದು ತಿಳಿಹೇಳಿದ ಅವರು ಮನಸ್ಸನ್ನು ಒಳ್ಳೆಯದರತ್ತ ಕರೆದೊಯ್ಯಬೇಕೆಂದು ಹೇಳಿ ಶ್ರದ್ಧಾಭಕ್ತಿಯಿಂದ ಅದು

ಸಾಧ್ಯವೆಂದು ತಿಳಿಸಿದರು. ಭಾಗ್ಯ – ಸಂಪತ್ತನ್ನು ನೆಚಿ ್ಚಸಿರಿಮದದಲ್ಲಿ ಮುಳುಗಿದವರನ್ನು ಮೇಲಕ್ಕೆತ್ತಿದರು. ಮೌಢ್ಯತೆಯಿಂದ ಹಾಳಾಗುವವರನ್ನು ದಾರಿಗೆ ತಂದರು. ಈ ಸಂಪತ್ತನ್ನು ನೆಚ್ಚಿಕೆಡಬೇಡ, ಅದು ಕಾಳಬೆಳದಿಂಗಳೆಂದು ಸ್ಪಷ್ಟಪಡಿಸಿದರು.

ಇಲ್ಲದ ಗುಣಗಳ ಕಲಿಸುವುದು ರೊಕ್ಕ
ಸಲ್ಲದ ನಾಣ್ಯವ ಸಲಿಸುವುದು ರೊಕ್ಕ
ಬೆಲ್ಲದಕ್ಕಿಂತಲೂ ಸವಿಯಾದ ರೊಕ್ಕ
ಕೊಲ್ಲಲಿಕ್ಕೆ ಕಾರಣವಾಯಿತು ರೊಕ್ಕ

ಎಂದು ವಿವರಿಸುತ್ತಾ ರೊಕ್ಕ ತಂದೊಡ್ಡುವ ದುಃಖದ ಪರಿ – ಪರಿಗಳನ್ನು ಬಿಡಿಸಿ ತೋರಿಸಿದರು.

ಕಂಚು ಬೆಳ್ಳಿ – ಬಂಗಾರದ ಲೋಹಗಳಿಂದ ದೇವರ ಮೂರ್ತಿಗಳನ್ನು ಮಾಡಿಸಿಕೊಂಡು ಪೂಜೆ ಮಾಡುವ, ಮೂಢಭಕ್ತರನ್ನು ಪುರಂದರದಾಸರು ಕಟುವಾಗಿ ವಿಡಂಬಿಸಿದರು. ಇಂತಹ ಬೆಲೆ ಬಾಳುವ ಮೂರ್ತಿಗಳನ್ನು ಕಳ್ಳರು ಬಂದು ಕದ್ದೊಯ್ದಾಗ, ಈ ಭಕ್ತರು ಬಾಯಿ ಬಾಯಿಬಡಿದುಕೊಳ್ಳುತ್ತಿದ್ದುದನ್ನವರು ವಿಡಂಬಿಸಿದರು.

ಬೂಟಕತನದಲಿ ಬಹಳ ಭಕುತಿಮಾಡಿ
ಸಾಟಿಯಿಲ್ಲವು ಎನಗೆಂದೆನಿಸಿ ।
ನಾಟಕ ಸ್ತ್ರೀಯಂತೆ ಬಯಲ ಡಂಭವ ತೋರಿ
ಊಟಕೆ ಸಾಧನೆ ಮಾಡಿಕೊಂಬುದಿದು

ಎಂದು ಬೂಟಾಟಿಕೆಯ ಭಕ್ತರನ್ನು ನಾಟಕದ ಸ್ತ್ರೀಯರಿಗೆ ಹೋಲಿಸಿ, ನಟರ ಬದುಕಿಗೂ – ಪಾತ್ರಕ್ಕೂ ಹೇಗೆ ಸಂಬಂಧವಿರುವುದಿಲ್ಲವೋ ಹಾಗೆ ಡಾಂಭಿಕರ ಭಕ್ತಿಯೆಂದು ಹೇಳುತ್ತಾ, ನಡೆ – ನುಡಿಗಳಲ್ಲಿ ಸಾಮ್ಯವಿರಬೇಕೆಂದು

ಸ್ಪಷ್ಟಪಡಿಸಿದರು. ಇದೇ ರೀತಿ ಮನಸ್ಸು ಶುದ್ಧವಿಲ್ಲದೆ ಉದಯದೊಳೆದ್ದು ಮಿಂದು ಗಡಗಡ ನಡುಗುವವರನ್ನು ಕಂಡು ನೀರೊಳಗಿರುವ ಕಪ್ಪೆಗೆ ಹೋಲಿಸಿ ವಿಡಂಬಿಸಿದರು.

ಮಡಿಮಡಿಮಡಿಯೆಂದು ಮುಮ್ಮಾರು ಹಾರುತಿ
ಮಡಿಯೆಲ್ಲಿ ಬಂದಿತೊ ಬಿಕನಾಸಿ
ಎಲುವು ಚರ್ಮ ಮಲಮೂತ್ರ ಗುಂಡಿಯಲ್ಲಿ
ನಲಿಯುತ ನಿಂತಿಯೋ ಬಿಕನಾಶಿ

ಮಡಿವಂತಿಕೆಯನ್ನು ಪ್ರದರ್ಶಿಸಿ ಜನತೆಯನ್ನು ಮರುಳುಗೊಳಿಸುವ ಡಾಂಭಿಕರನ್ನು ಇಲ್ಲಿ ತೀವ್ರವಾಗಿ ವಿಡಂಬಿಸಿದ್ದಾರೆ. ಮಡಿಮಡಿಯೆಂದು ಮಾರುದ್ದ ಹಾರುವವರನ್ನು ಕಂಡು ಕಟುವಾಗಿ ನುಡಿದಿದ್ದಾರೆ. ಅಂತಹವರನ್ನು 'ಬಿಕನಾಶಿ'ಎಂದು ಕರೆಯುವಲ್ಲಿನ ತೀವ್ರತೆಯನ್ನು ಗಮನಿಸಬಹುದಾಗಿದೆ. ಒಳಗಿನ ಕಾಮ – ಕ್ರೋಧಗಳನ್ನು ಬಿಡದೆ ಬಟ್ಟೆಯ ನೀರೊಳಗಿಟ್ಟು ಒಣಗಿಸಿಉಟ್ಟರೆ ಅದು ಮಡಿಯಾಗುವುದಿಲ್ಲವೆಂದು ಸ್ಪಷ್ಟಪಡಿಸಿದ್ದಾರೆ.

ಪುರಂದರದಾಸರು ಸ್ವವಿಡಂಬನೆ ಹಾಗು ಸಾಮಾಜಿಕ ವಿಡಂಬನೆಗಳೆರಡನ್ನೂ ಜತೆಜತೆಯಾಗಿಯೇ ಮಾಡಿದ್ದಾರೆ. ಕೆಲವು ಡಾಂಭಿಕ ವೀರಶೈವ ಭಕ್ತರನ್ನು ಕುರಿತು ಬಸವಣ್ಣನವರು ವಿಡಂಬಿಸಿದಂತೆ, ಕೆಲವು ಡಾಂಭಿಕ ವೈದಿಕರನ್ನು ಕುರಿತು ಪುರಂದರದಾಸರು ವಿಡಂಬಿಸಿದ್ದಾರೆ.

ತುಡುಗ ಮುಂಡೇಗಂಡರು ಗಡ್ಡಮೀಸೆ ಬೋಳಿಸಿಕೊಂಡು
ಗೊಡ್ಡುನಾಮ ತೀಡಿಕೊಂಡು ಅಡ್ಡಾದಿಡ್ಡಿ ಮುದ್ರೆಗಳ ಬಡಿದುಕೊಂಡು
ದೊಡ್ಡ ದೊಡ್ಡ ಮಾತುಗಳಾಡಿ ದೊಡ್ಡವರೆಂದು ಹೇಳಿಕೊಂಬ
ಬಡ್ಡಿ ಧಗಡೀ ಮಕ್ಕಳು ಸೋಗಿಲಿರುವ ಜೋಗೀ ತೊತ್ತಿನಮಕ್ಕಳು

ಎಂದು ಹೇಳುವ ಅವರ ಕೀರ್ತನೆಗಳಲ್ಲಿ ವಿಡಂಬನೆಯ ಹರಿತವನ್ನು ಕಾಣಬಹುದಾಗಿದೆ. ತುಡುಗಮುಂಡೇಗಂಡರು ಬಡ್ಡೀಧಗಡಿ ಮಕ್ಕಳು ಈ ಮುಂತಾದ ಮಾತುಗಳಲ್ಲಿ ಕಾಣುವ ವಿಡಂಬನೆಯಲ್ಲಿ ಸಾತ್ವಿಕವಾದ ಸಿಟ್ಟಿರುವುದನ್ನು ಕಾಣಬಹುದಾಗಿದೆ.

ದಂಡದೋಷಕೆ ಉಂಟು ಪುಂಡುಪೋಕರಿಗುಂಟು
ಹೆಂಡತಿ ಮಕ್ಕಳಿಗಿಲ್ಲವೀ ಕಲಿಕಾಲ ।
ಭಂಡೆಯರಿಗುಂಟು ಮಿಂಡೆಯರಿಗುಂಟು ಬೇಡಿ
ಕೊಂಡವರಿಗಿಲ್ಲ ಈ ಕಲಿಕಾಲ

ಈ ಕೀರ್ತನೆಯಲ್ಲಿ ಕಲಿಕಾಲದ ವಿಡಂಬನೆಯಿದೆ. ಅಂದಿನ ಸಾಮಾಜಿಕ ಜೀವನದ ಢೋಂಗಿತನವನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ. ಅಸತ್ಯ – ಅನ್ಯಾಯಗಳೇ ತಾಂಡವವಾಡುತ್ತಿರುವ ಕಲಿಕಾಲದಲ್ಲಿ ಒಳ್ಳೆಯವರನ್ನು ಕೇಳುವವರಿಲ್ಲ ದಂತಾಗಿದೆಯೆಂದು ತುಂಬಾ ಯಾತನೆಯಿಂದ ಹೇಳಿದ್ದಾರೆ. ಇಂತಹ ಕೀರ್ತನೆಗಳು ಪ್ರಸ್ತುತ ಸಂದರ್ಭಕ್ಕೆ ತುಂಬಾ ಉಪಯುಕ್ತವಾಗಿವೆ. ಪುರಂದರದಾಸರ ಕೀರ್ತನೆಗಳಲ್ಲಿ ಬಂದಿರುವ ವಿಡಂಬನೆ ಅನೇಕ ಸಲ ವಾಚ್ಯಾರ್ಥಕ್ಕಿಳಿದು ಅದು ನಿಂದೆಯ ಹಾಗೆ ಕಾಣಿಸಿಕೊಳ್ಳುವುದೂ ಉಂಟು. ಆದರೆ ಇದರ ಹಿಂದಿರುವ ಸಾತ್ವಿಕ ಸಿಟ್ಟನ್ನು ಗಮನಿಸಿದರೆ ಅದು ನಿಂದೆಯಾಗಿ ಕಾಣುವುದಿಲ್ಲ. ನೀತಿ ಮಾತುಗಳು ಅನೇಕ ಕಡೆ ಪುನರಾವರ್ತನೆಯಾಗಿವೆ.

ಪುರಂದರದಾಸರು ದುರ್ಜನರನ್ನು ಜಾಲಿಯಮರಕ್ಕೆ ಹೋಲಿಸಿದ್ದಾರೆ. ಆ ಜಾಲಿಮರದ ಪ್ರತಿಮೆ ಇಡಿಯಾಗಿ ಬಿಚ್ಚಿಕೊಂಡು ಅದರ ಮುಳ್ಳುಗಿಡದ ಕೆಳಗಿರುವ ಬಿಸಿಲು, ಆಸರೆಯಿಲ್ಲದ ಸ್ಥಿತಿ ಇವೆಲ್ಲಾ ದುರ್ಜನರ ಗುಣಸ್ವಭಾವವನ್ನು ತೆರೆದಿಡುತ್ತವೆ. ಇಂತಹ ದುರ್ಜನರಿಂದ ದೂರವಾಗಿರುವುದೇ ಒಳ್ಳೆಯದೆಂದು ದಾಸರು ಅಭಿಪ್ರಾಯಪಟ್ಟಿದ್ದಾರೆ. ನಿಂದೆಯಾಡುವವರನ್ನು ಕಟುವಾಗಿ ಟೀಕಿಸುತ್ತಾ ಕಾಗೆ–ಗೂಗೆಗಳಿಗೆ ಹೋಲಿಸಿದ್ದಾರೆ. ನಿಂದೆಯಾಡುವವರಿಗೆ ನಿಜಮೋಕ್ಷ

ದೊರೆಯದೆಂದು ಸ್ಪಷ್ಟಪಡಿಸಿದ್ದಾರೆ. ಸೇಡಿಗೆ ಪ್ರತಿಯಾಗಿ ಸೇಡು, ದ್ವೇಷಕ್ಕಾಗಿ ದ್ವೇಷ ಇರಬಾರದೆಂದು ತಿಳಿಸಿಹೇಳಿದ ಪುರಂದರರು 'ಧರ್ಮವೇ ಜಯವೆಂಬ ದಿವ್ಯ ಮಂತ್ರ' ವೆಂಬ ಕೀರ್ತನೆಯಲ್ಲಿ ಇದಕ್ಕೆ ಪ್ರತಿಯಾಗಿ ಏನು ಮಾಡಬೇಕೆಂಬುದನ್ನು ಹೀಗೆ ಹೇಳಿದ್ದಾರೆ.

ವಿಷವನುಣಿಸಿದವಗೆ ಷಡುರಸವನುಣಿಸಲುಬೇಕು
ದ್ವೇಷಮಾಡುವವನ ಪೋಷಿಸಲು ಬೇಕು ।
ಹುಸಿದು ಮನೆಕೊಂಬವನ ಹಾಡಿ ಹರಸಲು ಬೇಕು
ಅಸು ಹೀರಿದವನ ಹೆಸರ ಮಗನಿಗಿಡಬೇಕು

ಪುರಂದರದಾಸರ ಇಂತಹ ನುಡಿಗಳನ್ನು ಕೇಳಿ ಪ್ರಸ್ತುತ ಸಾಮಾಜಿಕ ಸಂದರ್ಭದಲ್ಲಿ ಆಶ್ಚರ್ಯವುಂಟಾಗಬಹುದು. ಆದರೆ ಅವರ ನುಡಿಗಳಲ್ಲಿ ಸತ್ಯವಡಗಿದೆ. "ಒಂದು ಕಪಾಳಕ್ಕೆ ಹೊಡೆದರೆ ಮತ್ತೊಂದು ಕಪಾಳವನ್ನು ಕೊಡು" ಎಂದು ಗಾಂಧೀಜಿಯವರು ಹೇಳಿದ ಮಾತಿನಲ್ಲಿಯೂ ಇದೇ ಸತ್ಯವಡಗಿದೆ. ಕರುಣೆ - ದಯೆ - ಸಹನೆಯಂತಹ ಮೌಲ್ಯಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡಾಗ ಮಾತ್ರ ಇಂತಹ ನುಡಿಗಳ ಔಚಿತ್ಯ ಸ್ಪಷ್ಟವಾಗುತ್ತದೆ. ದ್ವೇಷ-ಅಸೂಯೆ-ಹಿಂಸೆಯಂತಹ ಜ್ವಾಲೆಗಳಿಂದ ಪಾರಾಗಲು ದಾಸರು ಹೇಳಿದ ಲೋಕನೀತಿ ತುಂಬಾ ಸಹಾಯಕವಾಗಿದೆ.

ಅಜ್ಞಾನಿಗಳ ಕೂಡ ಅಧಿಕ ಸ್ನೇಹ ಮಾಡುವುದಕ್ಕಿಂತ ಸುಜ್ಞಾನಿಗಳ ಕೂಡ ಜಗಳವೇ ಲೇಸೆಂದು ತೀರ್ಮಾನಿಸುವ ದಾಸರ ನುಡಿಯಲ್ಲಿ ಅನುಭವದ ಸತ್ಯಾಂಶವಿದೆ.

ಒಡಲ ಹಂಗಿಸುವರ ಮನೆಯ ಓಗರಕ್ಕಿಂತ
ಕುಡಿನೀರ ಕುಡಿದುಕೊಂಡಿಹುದೆ ಲೇಸು ।
ಬಿಡದೆ ಕಡಿದಾಡುವರ ನೆರೆಯಲಿಹುದಕಿಂತ.
ಅಡವಿಯೊಳಜ್ಞಾತವಾಸವೇ ಲೇಸು

ಎಂಬಂತಹ ನುಡಿಗಳಲ್ಲಿ ಯಾವುದು ಒಳ್ಳೆಯದು, ಯಾವುದು ಕೆಟ್ಟದು ಎಂಬುದನ್ನು ತಿಳಿಸಿ ಹೇಳಲಾಗಿದೆ. ಬಂಡವಾಳಶಾಹಿ ರಾಷ್ಟಗಳಿಂದ ಸಾಲಪಡೆದು ಮುತುವರ್ಜಿಯಲ್ಲಿ ಬದುಕುತ್ತಿರುವ ಇಂದಿನ ಸ್ಥಿತಿಯಲ್ಲಿ ದಾಸರ ನುಡಿಗಳನ್ನು ಗಂಭೀರವಾಗಿ ತೆಗೆದುಕೊಳ್ಳಬೇಕಾಗಿದೆ. ನವವಸಾಹತುಶಾಹಿ ಆಕ್ರಮಣದ ಹಿನ್ನೆಲೆಯಲ್ಲಿ ಪುರಂದರದಾಸರಂತಹ ಅನುಭಾವಿಗಳ ರಚನೆಗಳನ್ನು ಹೊಸರೀತಿಯಲ್ಲಿ ಓದಿಕೊಳ್ಳಬೇಕಾದ ಅಗತ್ಯವಿದೆ.

ಪುರಂದರರು ಹೇಳಿದ ಅನುಭಾವವು ನೆಲದ ಮರೆಯ ನಿಧಾನದಂತೆ ಗಹನವಾದುದು. ಅನುಭಾವದ ಅಡಿಗೆಯಮಾಡಿ, ಅದಕ್ಕೆ ಅನುಭಾವಿಗಳು ಬಂದು ತನುವೆಂಬ ಭಾಂಡದಲ್ಲಿ ಹರಿಭಕ್ತಿಯೆಂಬ ನೀರಿನ ಎಸರಿಟ್ಟು ಕರುಣವೆಂಬ ಸಾಮಗ್ರಿಹಾಕಿ, ಆ ಪಾತ್ರೆಯನ್ನು ತ್ರಿಗುಣವೆಂಬ ಒಲೆಯಮೇಲೆ ಅರಿವುಯೆಂಬ ಉರಿಹಚ್ಚಿ ಇರಿಸಿ, ಮೋಕ್ಷಪರಿಕರವೆಂಬ ಪಕ್ವಾನ್ನ ಮಾಡಿ ಉಂಡು ಸುಖಿಸಿರೆಂದು ಹೇಳುವ ಅವರ ಅನುಭಾವದ ನುಡಿಗಳು ಅವರ ಕೀರ್ತನೆಗಳಲ್ಲಿ ಹೇರಳವಾಗಿ ದೊರೆಯುತ್ತವೆ. ಇಹದ ಅನುಭವದ ಮೂಲಕವೇ ಪರಲೋಕದ ಅನುಭಾವವನ್ನು ಕಟ್ಟಿಕೊಡುವ ಪುರಂದರ ಕೀರ್ತನೆಗಳು ಈ ದೃಷ್ಟಿಯಿಂದ ಗಮನಾರ್ಹವಾಗಿವೆ.

ತುಂಟರೈವರ ತುಳಿದು ಕಂಟಕನೊಬ್ಬನ ಕಳೆದು
ಎಂಟು ಮಂದಿಯ ಗರುವನಳಿದು ।
ವೆಂಕಟ ನೀ ಬಂದೆನ್ನ ಕಂಟಕವನೆ ಬಿಡಿಸಿ
ಉಂಟಾದ ವೈಕುಂಠ ಬಂಟನೆಂದೆನಿಸೊ

ಕಾಮ, ಕ್ರೋಧ, ಲೋಭ, ಮೋಹ, ಮದಗಳೆಂಬ ಐದು ತುಂಟರು ಮತ್ಸರನೆಂಬೊಬ್ಬ ಕಂಟಕ ಇದ್ದಾರೆ. ಈ ಆರರಿಂದ ಪಾರುಮಾಡಿ ಅಷ್ಟಮದಗಳನ್ನು ಮುರಿದು ಹಾಕಿ ನೀನೆನ್ನ ಕಾಪಾಡಬೇಕೆಂದು ಪುರಂದರದಾಸರು ವಿಠ್ಠಲನನ್ನು ಕೇಳಿಕೊಳ್ಳುತ್ತಾರೆ.

"ಶರಧಿ ಸೆಡ್ಡಿಯ ಮಾಡಿ ಧರೆಯ ಕೂರಿಗೆ ಮಾಡಿ" ಎಂಬ ಕೀರ್ತನೆಯಲ್ಲಿ ಪುರಂದರದಾಸರು ಕೊಟ್ಟ ಲೌಕಿಕ ಉಪಮೆಗಳು ಗಮನಾರ್ಹವಾಗಿವೆ. ಒಕ್ಕಲುತನದ ಉಪಕರಣಗಳ ಬಗೆಗೆ ಅವರಲ್ಲಿದ್ದ ಅಪಾರ ತಿಳುವಳಿಕೆಯನ್ನು ಈ ಕೀರ್ತನೆ ತಿಳಿಸುತ್ತದೆ. ಇಲ್ಲಿ ಬರುವ ಹರಿಬೊಮ್ಮರೆಂಬ ಎರಡೆತ್ತು, ನರಜೀವ ರಾಶಿಗಳೆಂಬ ಬೀಜ ಗಮನಿಸುವಂತಿದೆ. ಬಿತ್ತುವಾತ ಇಂದ್ರನಾಗಿ, ಬೆಳೆಸುವಾತ ಚಂದ್ರನಾಗಿ, ಕಳೆಯ ಕೀಳುವಾತ ಯಮರಾಜನಾಗಿದ್ದಾನೆ. "ಬಿತ್ತಿದಾತನೆ ಬೆಳೆಯನು ಒಕ್ಕಿಕೊಂಡು ಹೋಗುವಾಗ ದುಃಖವೇತಕೆ" ಎಂದು ಕೇಳುವ ಅವರ ನುಡಿಯಲ್ಲಿ ಅನುಭಾವದೆತ್ತರವನ್ನು ಕಾಣಬಹುದಾಗಿದೆ.

ದೇಹದಲ್ಲಿ ಕೆಲದಿನಗಳ ಮಟ್ಟಿಗೆ ವಾಸಮಾಡಿದ್ದ ಜೀವಾತ್ಮ ಹೇಳದೆ ಕೇಳದೆ ಹಾರಿಹೋಗುವುದನ್ನು ಹಂಸಕ್ಕೆ ಹೋಲಿಸಿದ್ದಾರೆ. ಒಂಬತ್ತು ಬಾಗಿಲು ದಾಟಿ ಹಾರಿಹೋದ ಜೀವಾತ್ಮನು, ದೇಹಕ್ಕೇನೇ ಹೋಗುವುದನ್ನು ತಿಳಿಸಲಿಲ್ಲ. ಅದೇ ರೀತಿ ಬಳ್ಳಿಯಲ್ಲಿ ಬಿಟ್ಟ ಹೂವು ಕಾಯಾಗಿ – ಹಣ್ಣಾಗಿ ಆ ತನಿಹಣ್ಣು ಉದುರಿಹೋಗುವಾಗ ಬಳ್ಳಿಗೆ ಒಂದು ಮಾತೂ ಹೇಳಲಿಲ್ಲವೆಂಬಂತಹ ನುಡಿಗಳಲ್ಲಿರುವ ಸಾಧ್ಯತೆಗಳನ್ನು ಗಮನಿಸಬಹುದಾಗಿದೆ. ಸತಿಪತಿಭಾವದ ಮಧುರಭಕ್ತಿಯೊಂದಿಗೆ ಅರ್ಥಸಾದೃಶವಾದ ಉಪಮೆಗಳು ಬೆಳೆದುನಿಲ್ಲುತ್ತವೆ. ಅನುಭಾವದ ತಿರುಳನ್ನು ಬಿಡಿಸುವ ಅವರ ಕೀರ್ತನೆಗಳು ಇಂದಿಗೆ ತೀರಾ ಪ್ರಸ್ತುತವಾಗಿವೆ. 'ಗಿಳಿಯು ಪಂಜರದೊಳಿಲ್ಲ' ಎನ್ನುವ ಕೀರ್ತನೆಯಂತೂ ಅನುಭಾವದ ಉತ್ಕಟತೆಗೆ ಪ್ರಮುಖ ಉದಾಹರಣೆಯಾಗಿದೆ. ಗಿಳಿಯನ್ನು ಸಾಕಿ, ಅದನ್ನು ಮುದ್ದಿನಿಂದ ಬೆಳೆಸಿ, ಬಣ್ಣಿಸಿ ಸಂತೋಷಪಟ್ಟು ಕೊನೆಗೆ ಅದು ಹೇಳದೆ ಕೇಳದೆ ಹಾರಿಹೋದಾಗ ಪರಿತಪಿಸುವ ಕ್ರಿಯೆ ತುಂಬಾ ಪರಿಣಾಮಕಾರಿಯಾಗಿದೆ.

'ಬೇವು ಬೆಲ್ಲದೊಳಿಡಲೇನು ಫಲ' 'ಹರಿಯ ನೆನೆಯದ ನರಜನ್ಮವೇಕೆ' 'ವಿಷಯದ ವಿಚಾರಬಿಡು ವಿಹಿತಕರ್ಮವ ಮಾಡು' 'ಈಸಬೇಕು ಇದ್ದು ಜಯಿಸಬೇಕು' 'ಸ್ನಾನವ ಮಾಡಿಕೋ ಜ್ಞಾನತೀರ್ಥದಲ್ಲಿ' 'ರಾಮನಾಮವನು ನುಡಿ ನುಡಿ' 'ಕಂಡು ಕಂಡು ನೀಯೆನ್ನ ಕೈಬಿಡುವರೆ' 'ನಾನೇಕೆ ಬಡವನು

ನಾನೇಕೆ ಪರದೇಶಿ' ಇಂತಹ ಅನೇಕ ರಚನೆಗಳಲ್ಲಿ ಅವರು ಹೇಳಿದ ಅನುಭಾವದ ವಿಸ್ತಾರವಿದೆ. ಪುರಂದರದಾಸರ ಇಂತಹ ಅನೇಕ ಕೀರ್ತನೆಗಳು ಪ್ರಸ್ತುತ ಸಾಮಾಜಿಕ ಸಂದರ್ಭಕ್ಕೆ ತುಂಬಾ ಅನಿವಾರ್ಯವಾಗಿವೆ.

## ಪುರಂದರದಾಸರು ಮತ್ತು ಕರ್ನಾಟಕ ಸಂಗೀತ

ಕರ್ನಾಟಕ ಸಂಗೀತದ ಪಿತಾಮಹ ಎಂದು ಕರೆಯಿಸಿಕೊಂಡಿರುವ ಪುರಂದರದಾಸರು ಕರ್ನಾಟಕ ಸಂಗೀತಕ್ಕೆ ನೀಡಿದ ಕೊಡುಗೆ ಅಗಾಧವಾದುದು. ಈಗ ಕರ್ನಾಟಕ ಸಂಗೀತ ಸಂಪ್ರದಾಯದಲ್ಲಿ ಪ್ರಸಿದ್ಧರಾಗಿರುವ ತ್ಯಾಗರಾಜರು, ಮುತ್ತುಸ್ವಾಮಿ ದೀಕ್ಷಿತರು ಮತ್ತು ಶ್ಯಾಮಶಾಸ್ತ್ರಿಗಳಿಗೆ ತ್ರಿಮೂರ್ತಿಗಳೆಂದು ಹೆಸರು. ಇವರಲ್ಲಿ ತ್ಯಾಗರಾಜರು ಪುರಂದರದಾಸರನ್ನು ಅತ್ಯಂತ ಗೌರವದಿಂದ ಉಲ್ಲೇಖಿಸಿದ್ದಾರೆ.

ಶಾಸ್ತ್ರೀಯ ಸಂಗೀತದಲ್ಲಿ ಶಾಸ್ತ್ರಭಾಗ ಮತ್ತು ಪ್ರಯೋಗ ಭಾಗ ಎಂಬ ಎರಡು ವಿಭಾಗಗಳಿವೆ. ಶಾಸ್ತ್ರಭಾಗವು ಪಂಡಿತಪ್ರಿಯವಾದುದಾದರೆ, ಪ್ರಯೋಗ ಭಾಗವು ಪಾಮರರಿಗೆ ರಂಜಕವಾದುದಾಗಿದೆ. ವಿದ್ಯಾರಣ್ಯರಿಂದ ಈ ಸಂಗೀತ ಸಂಪ್ರದಾಯವು ವಿಜಯನಗರದಲ್ಲೇ ಬೆಳೆದುಬಂದಿತು. ಕೃಷ್ಣದೇವರಾಯನ ಕಾಲದಲ್ಲಿ ಈ ಸಂಗೀತ ಸಂಪ್ರದಾಯವು ಪ್ರೌಢವಾಗಿ ಬೆಳೆಯಲು ವ್ಯಾಸರಾಯರು ಮತ್ತು ಪುರಂದರದಾಸರು ಕಾರಣರಾಗಿದ್ದಾರೆ. ಹೀಗಾಗಿ ಪುರಂದರದಾಸರ ಹೆಸರಿನೊಂದಿಗೆ ಕರ್ನಾಟಕ ಸಂಗೀತವೂ ಸೇರಿಕೊಳ್ಳುತ್ತದೆ. ಸಂಗೀತ ಸಂಪ್ರದಾಯವು ಬೆಳೆಯಲು ಪುರಂದರದಾಸರು ಶ್ರಮವಹಿಸಿದರು. ದೇಶಭಾಷೆಯಲ್ಲಿ ಲಕ್ಷ್ಯಸಂಗೀತವನ್ನು ಸಿದ್ಧಪಡಿಸಿದ ಶ್ರೇಯಸ್ಸು ಪುರಂದರದಾಸರಿಗೆ ಸಲ್ಲುತ್ತದೆ. ಈ ಕರ್ನಾಟಕ ಸಂಗೀತದ ಪ್ರವರ್ತಕರು ವ್ಯಾಸರಾಯರೇ ಆದರೂ ಈ ಪ್ರವರ್ತನೆಯಲ್ಲಿ ಪಾಲ್ಗೊಂಡು ಈ ಸಂಗೀತ ಸಂಪ್ರದಾಯಕ್ಕೆ ಪುರಂದರದಾಸರು ಹೊಸ ಆಯಾಮ ನೀಡಿರುವುದು ಪುರಂದರರ ಕೊಡುಗೆಯನ್ನು ಸ್ಪಷ್ಟಪಡಿಸುತ್ತದೆ. ಇವರು ಶಾಸ್ತ್ರದ

ಚೌಕಟ್ಟನ್ನು ಮೀರಿ ಪ್ರಯೋಗಶೀಲರಾದರು. ಇವರ ರಚನೆಗಳು ತುಳಜಾಜಿಯ ಕಾಲದಲ್ಲೂ ಜನಪ್ರಿಯವಾಗಿದ್ದವು.

ಕೃತಿರಚನೆ ಮಾಡುವದರಲ್ಲಿ ಪುರಂದರದಾಸರು ಮುಂದಿನ ಸಂಕೀರ್ತನ–ಕಾರರಿಗೆ ಮಾರ್ಗದರ್ಶಿಯಾದರು. ತಾಳ್ಳಪಾಕ ಕವಿಗಳು, ಕ್ಷೇತ್ರಯ್ಯನವರು, ಸೋಮಕವಿ, ವಾಸುದೇವ ಕವಿ ಈ ಮೊದಲಾದವರನ್ನು ಉದಾಹರಿಸಬಹುದಾಗಿದೆ. ಈ ಕೀರ್ತನೆಗಳಲ್ಲಿ ಪುರಂದರರು ಹಾಕಿಕೊಟ್ಟ ಲಕ್ಷ್ಯಸಂಗೀತದ ಪ್ರಭಾವವನ್ನು ಕಾಣಬಹುದಾಗಿದೆ.

"ಕರ್ನಾಟಕ ಸಂಗೀತ" ವೆಂಬ ಪದ ಮೊದಲು ಉಲ್ಲೇಖವಾಗಿದ್ದು "ಮಾನಸೋಲ್ಲಾಸ" ಕೃತಿಯಲ್ಲಿ. ಹನ್ನೆರಡನೇ ಶತಮಾನದಲ್ಲಿದ್ದ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಸೋಮೇಶ್ವರ ಭೂಲೋಕಮಲ್ಲನು ಈ ಕೃತಿಯನ್ನು ರಚಿಸಿದ್ದಾನೆ. ಶ್ರೀರಾಗ, ವಸಂತ, ಭೈರವ, ಪಂಚಮ, ಮೇಘ ಮತ್ತು ನಟನಾರಾಯಣವೆಂಬ ಆರು ರಾಗಗಳು ಜನಕ ರಾಗಗಳೆಂದೂ ಅವುಗಳೊಂದೊಂದಕ್ಕೂ ಜನ್ಯರಾಗಗಳ ರಾಗಿಣಿಗಳು ಹುಟ್ಟಿದವೆಂದು ಶಾಸ್ತ್ರೀಯವಾಗಿ ಈ ಕೃತಿಯಲ್ಲಿ ಪ್ರತಿಪಾದಿಸಲಾಗಿದೆ. ಹನ್ನೆರಡನೇ ಶತಮಾನದ ಚಾಲುಕ್ಯ ಸೋಮೇಶ್ವರ, ಹದಿನಾಲ್ಕನೇ ಶತಮಾನದ ವಿದ್ಯಾರಣ್ಯ ಮೊದಲಾದ ಶಾಸ್ತ್ರಕಾರರು, ಪುರಂದರದಾಸರಂತಹ ವಾಗ್ಗೇಯಕಾರರು "ದಕ್ಷಿಣಭಾರತ ಸಂಗೀತವು" "ಕರ್ನಾಟಕ ಸಂಗೀತ" ವೆಂದೇ ಪ್ರಸಿದ್ಧರಾಗಲು ಪ್ರಮುಖವಾಗಿ ಕಾರಣರಾಗಿದ್ದಾರೆ. ಪುರಂದರದಾಸರ ಪದಗಳನ್ನೇ ಮಾದರಿಯಾಗಿಟ್ಟುಕೊಂಡು ಮುಂದೆ, ವಾಗ್ಗೇಯಕಾರರುಗಳಾದ ಕ್ಷೇತ್ರಜ್ಞ, ತ್ಯಾಗರಾಜ, ಮುತ್ತುಸ್ವಾಮಿ ದೀಕ್ಷಿತರು ಮತ್ತು ಶಾಮಾಶಾಸ್ತ್ರಿಗಳು ತಮ್ಮ ಕೃತಿಗಳನ್ನು ರಚಿಸಿದರೆಂದು ತಿಳಿದುಬರುತ್ತದೆ. ತ್ಯಾಗರಾಜರಂತಹ ಪ್ರಸಿದ್ಧ ಸಂಗೀತಗಾರರ ಮೇಲೆ ಪುರಂದರದಾಸರ ದಟ್ಟ ಪ್ರಭಾವವಿದ್ದುದು ಇದರಿಂದ ಸ್ಪಷ್ಟವಾಗುತ್ತದೆ. ಪುರಂದರರಿಂದ ಪ್ರೇರಿತರಾದ ಶ್ರೀ ತ್ಯಾಗರಾಜರು "ಪ್ರಹ್ಲಾದ ಭಕ್ತವಿಜಯ" ವೆಂಬ ಸಂಗೀತ ರೂಪಕದಲ್ಲಿ ದಾಸರನ್ನು ಮುಕ್ತಕಂಠದಿಂದ ಸ್ತುತಿಸಿದ್ದಾರೆ. ಕರ್ನಾಟಕ ಸಂಗೀತಕ್ಕೆ ಸಂಬಂಧಿಸಿದಂತೆ ಪುರಂದರದಾಸರ ಪ್ರಮುಖ ಕೊಡುಗೆಯ ಮಹತ್ವ ಇದರಿಂದ ತಿಳಿದು ಬರುತ್ತದೆ.

ಪುರಂದರದಾಸರಿಗಿಂತ ಪೂರ್ವದಲ್ಲಿ ಹನ್ನೆರಡನೇ ಶತಮಾನದ ಶಿವ-ಶರಣರು, ನಿಜಗುಣಶಿವಯೋಗಿಗಳಂತಹ ತತ್ವಪದಕಾರರು ನರಹರಿತೀರ್ಥ - ಶ್ರೀಪಾದರಾಯ - ಶ್ರೀವ್ಯಾಸರಾಯರಂತೆ ಹರಿದಾಸರು ಕರ್ನಾಟಕ ಸಂಗೀತಕ್ಕೆ ತಮ್ಮದೇ ಆದಂತಹ ವಿಶಿಷ್ಟ ಕಾಣಿಕೆ ಕೊಟ್ಟಿದ್ದಾರೆ. ಆದರೆ ಕರ್ನಾಟಕ ಸಂಗೀತ ಪಿತಾಮಹರೆಂಬ ಕೀರ್ತಿಗೆ ಪುರಂದರದಾಸರು ಮಾತ್ರ ಪಾತ್ರರಾಗಿದ್ದಾರೆ. ಕರ್ನಾಟಕ ಸಂಗೀತವನ್ನು ಅಭ್ಯಸಿಸಲು ಸೂತ್ರಬದ್ಧವಾದ ವ್ಯವಸ್ಥೆಯೊಂದನ್ನು ಮಾಡಿದ ಕೀರ್ತಿ ಪುರಂದರದಾಸರಿಗೆ ಸಲ್ಲುತ್ತದೆ.

ಅನೇಕ ಸಂಗೀತ ವಿದ್ವಾಂಸರು ತಮ್ಮ ಲಕ್ಷಣಗ್ರಂಥಗಳಲ್ಲಿ ಪುರಂದರದಾಸರ ರಚನೆಗಳನ್ನು ಲಕ್ಷ್ಯಗಳನ್ನಾಗಿ ಉಲ್ಲೇಖಿಸಿದ್ದಾರೆ. ಪುರಂದರದಾಸರು ಶಾಸ್ತ್ರೀಯ ಸಂಗೀತಕ್ಕೆ ಕೊಟ್ಟ ಅತಿದೊಡ್ಡ ಕೊಡುಗೆಯೆಂದರೆ, ಅನೇಕ ಜಾನಪದ ರಾಗಗಳನ್ನು ಶಾಸ್ತ್ರೀಯವಾಗಿ ಅಳವಡಿಸಿದುದಾಗಿದೆ. ಆದಿಕಾಲದಿಂದಲೂ ಜನ ಸಾಮಾನ್ಯರ ನಾಲಿಗೆಯ ಮೇಲೆ ಜೀವಂತವಾಗಿದ್ದ ಜನಪದ ಲಯಗಳನ್ನು ಪುರಂದರರು ಹಿಡಿದಿಟ್ಟುಕೊಂಡು ಅವುಗಳಿಗೆ ಶಾಸ್ತ್ರೀಯ ರೂಪಕೊಟ್ಟುದುದು ಮಹತ್ವದ ಅಂಶವಾಗಿದೆ. ಜಾನಪದವೆಂದರೆ ಮೂಗುಮುರಿಯುತ್ತಿದ್ದ ಸಂದರ್ಭದಲ್ಲಿ ಪುರಂದರರು, ಜಾನಪದದ ಮೂಲಸತ್ವವನ್ನು ಪರಿಚಯಿಸಿದ್ದು, ಜಾನಪದ ಲಯಗಳನ್ನು ಸ್ವೀಕರಿಸಿದ್ದು ತುಂಬಾ ಮುಖ್ಯವಾಗುತ್ತದೆ. ತ್ಯಾಗರಾಜರೂ ಅನೇಕ ಜನಪದ ಮಟ್ಟುಗಳನ್ನು ಶಾಸ್ತ್ರೀಯ ಸಂಗೀತಕ್ಕೆ ಅಳವಡಿಸಿದ್ದಾರೆ. ಅವರಿಗಿಂತ ಪೂರ್ವದಲ್ಲಿಯೇ ಪುರಂದರದಾಸರು ಇಂತಹ ಕಾರ್ಯವನ್ನು ಕೈಕೊಂಡು ತ್ಯಾಗರಾಜರಂತವರಿಗೆ ಮಾದರಿಯಾಗಿದ್ದಾರೆ. ಪುರಂದರ ದಾಸರು ಜಾನಪದದಿಂದ ಶಾಸ್ತ್ರೀಯ ಸಂಗೀತಕ್ಕೆ ಅಳವಡಿಸಿದ ರಾಗಗಳಲ್ಲಿ ಕುರಂಜಿ, ನವರಾಜ, ಮಂಜಿ (ಮಂಜೀಷ ಭೈರವಿ), ವಶ್ರುಸ್ಯೆಂಧವಿ ಈ ಮುಂತಾದವುಗಳು ಪ್ರಮುಖ ಉದಾಹರಣೆಗಳಾಗಿವೆ. ಹೀಗೆ ಅನೇಕ ರಾಗಗಳನ್ನು ಸೃಷ್ಟಿಸುವುದರ ಮೂಲಕ, ಕನ್ನಡದಲ್ಲಿ ಹೊಸ ರಚನೆಗಳನ್ನು ಮಾಡುವುದರ ಮೂಲಕ ಪುರಂದರರು ಶಾಸ್ತ್ರೀಯ ಸಂಗೀತಕ್ಕೆ ಹೊಸ ತಿರುವು ನೀಡಿದ್ದಾರೆ.

ಪುರಂದರದಾಸರ ಸಮಕಾಲೀನನಾಗಿದ್ದ ರಾಮಾಮಾತ್ಯನು, ರಾಗಗಳಲ್ಲಿಯೇ ಮಾಲವಗೌಡ ರಾಗ ಅತ್ಯುತ್ತಮವೆಂದು ಹೇಳಿದ್ದಾರೆ. ಈ ಮಾಲವಗೌಡ ಸ್ವರೂಪಗೌಡರಾಗ ಅತ್ಯುತ್ತಮವೆಂದು ಹೇಳಿದ್ದಾನೆ. ಈ ಮಾಲವಗೌಡ ಸ್ವರಾವಳಿಯನ್ನು ಪುರಂದರರೇ ಬಳಕೆಯಲ್ಲಿ ತಂದಿದ್ದಾರೆ. ಮುಂದೆ ಅರ್ಧಶತಮಾನದ ನಂತರ ಬಂದ ತಾನಸೇನನು ಭೈರವಿ ರಾಗವನ್ನು ಆದಿರಾಗವೆಂದು ಕರೆದಿದ್ದಾನೆ. ಮಹಾನ್ ಸಂಗೀತ ವಿದ್ವಾಂಸರಿಗೆ ಪುರಂದರರು ಮಾದರಿಯಾಗಿದ್ದಾರೆ. ಪುರಂದರದಾಸರದು ಸಾಹಿತ್ಯ ಒಂದು ಕಣ್ಣಾದರೆ, ಸಂಗೀತ ಮತ್ತೊಂದು ಕಣ್ಣಾಗಿದೆ. ಹೀಗೆ ಸಾಹಿತ್ಯ – ಸಂಗೀತ ಎರಡೂ ಕ್ಷೇತ್ರದಲ್ಲಿ ಪುರಂದರರ ಸಾಧನೆ ಗಮನಾರ್ಹವಾಗಿದೆ.

## ಸಂಕಲನ – ಸಂಪಾದನಾ ಕಾರ್ಯ

ಪುರಂದರದಾಸರ ಸುಳಾದಿ – ಉಗಾಭೋಗಗಳನ್ನು ಪ್ರತ್ಯೇಕ ಸಂಪುಟದಲ್ಲಿ ಪ್ರಕಟಿಸಿರುವದರಿಂದ ಇಲ್ಲಿ ಕೀರ್ತನೆಗಳನ್ನು ಮಾತ್ರ ಪರಿಗಣಿಸಲಾಗಿದೆ. ಹೀಗಾಗಿ ಇದು ಕೇವಲ ಕೀರ್ತನೆಗಳ ಸಂಪುಟವಾಗಿದೆ.

ಪುರಂದರರ ಸಾಹಿತ್ಯ ಸಂಗ್ರಹಕ್ಕೂ ಸಂಬಂಧಿಸಿದಂತೆ ಒಂದು ದೀರ್ಘ ಪರಂಪರೆಯೇ ಇದೆ. ವಿಜಯದಾಸರ ಕಾಲದಲ್ಲಿಯೇ ಇವರ ಕೀರ್ತನೆಗಳ ಸಂಗ್ರಹಕಾರ್ಯ ಪ್ರಪ್ರಥಮವಾಗಿ ನಡೆಯಿತೆಂದು ಹೇಳಬಹುದಾಗಿದೆ. ದಾಸಕೂಟದ ಪ್ರಾಬಲ್ಯ ಇಳಿಮುಖವಾಗುತ್ತಿರುವ ಸಂದರ್ಭದಲ್ಲಿ ಬಂದ ವಿಜಯದಾಸರು, ಪುರಂದರದಾಸರ ಸಾಹಿತ್ಯ ಸಂಗ್ರಹದ ಕಾರ್ಯವನ್ನು ಭಕ್ತಿಯಿಂದಲೇ ಮಾಡಿರಬಹುದಾಗಿದೆ.

ಆಧುನಿಕ ಸಂದರ್ಭದಲ್ಲಿ ಪುರಂದರದಾಸರ ಸಾಹಿತ್ಯಸಂಗ್ರಹವನ್ನು ಮೊದಲ ಬಾರಿಗೆ ಓದುಗರ ಗಮನಕ್ಕೆ ತಂದದ್ದು ೧೮೫೦ ರಲ್ಲಿ. ಮಂಗಳೂರಿನಿಂದ ಹೊರಬಂದ ಕಲ್ಲಚ್ಚಿನ ಪ್ರತಿಯೇ ಪುರಂದರರ ಸಾಹಿತ್ಯ ಸಂಗ್ರಹದ ಪ್ರಥಮ ಪ್ರಕಟನೆಯಾಗಿದೆ. ಆಗಿನ ಮೈಸೂರು ಸರ್ಕಾರದ ಜೆ. ಗ್ಯಾರೆಟ್ ಎಂಬ ಅಧಿಕಾರಿ

ಈ ಕಲ್ಲಚ್ಚಿನ ಪ್ರತಿಯನ್ನು ೧೮೭೦ ರಲ್ಲಿ ಪುನರ್ಮುದ್ರಣ ಗೊಳಿಸಿದನೆಂದು ತಿಳಿದುಬರುತ್ತದೆ. ಹೊಳಕಲ್ಲು ನರಸಿಂಹಯ್ಯನವರು ಈ ಕಲ್ಲಚ್ಚು ಪ್ರತಿಯನ್ನು ಪರಿಷ್ಕರಿಸಿ ಪುನರ್ಮುದ್ರಣಕ್ಕೆ ಅಣಿಮಾಡಿಕೊಟ್ಟರು. ಇದರಲ್ಲಿ ಪುರಂದರದಾಸರ ಕೀರ್ತನೆಗಳೊಂದಿಗೆ ಇತರ ದಾಸರ ಕೀರ್ತನೆಗಳೂ ಸೇರಿವೆ. ಒಟ್ಟು ಒಂದು ನೂರಾ ಎಪ್ಪತ್ತಮೂರು ಕೀರ್ತನೆಗಳು ಇದರಲ್ಲಿವೆ. ಪುರಂದರದಾಸರ ಕೃತಿಗಳನ್ನೇ ಸಂಗ್ರಹಿಸಿ ಪ್ರಥಮವಾಗಿ ಅಚ್ಚು ಮಾಡಿಸಿದವರೆಂದರೆ ಮಡಕಶಿರಾ ಬಾಲಕೃಷ್ಣ-ರಾಯರು. ಇವರು ೧೮೯೪ರಲ್ಲಿ ಮದರಾಸಿನಿಂದ ತೆಲುಗು ಲಿಪಿಯಲ್ಲಿ ಈ ಕೃತಿ ಪ್ರಕಟಿಸಿದರು. 'ಪುರಂದರದಾಸಲುವಾರು ಪಾಡಿನ ಕೀರ್ತನಲು' ಎಂಬುದು ಈ ಕೃತಿಯ ಹೆಸರು. ೧೮೮೦ ರ ಅವಧಿಯಲ್ಲಿ ಬೆಳಗಾವಿಯಲ್ಲಿ ಅಬಾಜಿ ರಾಮಚಂದ್ರ ಸಾವಂತರು ದೇವನಾಗರಿ ಲಿಪಿಯಲ್ಲಿ ದಾಸರ ಪದಗಳನ್ನು ಸಂಗ್ರಹಿಸಿದರು. ಬೆಂಗಳೂರಿನ ಟಿ. ಎನ್. ಕೃಷ್ಣಯ್ಯಶೆಟ್ಟರು ೧೯೧೪ರಲ್ಲಿ ಪುರಂದರದಾಸರ ಪದಗಳ ಸಂಗ್ರಹವನ್ನು ಪ್ರಕಟಿಸಿದರು. ಪಾವಂಜೆ ಗುರುರಾಯರು ಉಡುಪಿಯಲ್ಲಿ ಶ್ರೀಮನ್ಮಧ್ವಸಿದ್ಧಾಂತ – ಗ್ರಂಥಾಲಯದಿಂದ ಪುರಂದರರ ಒಂದು ಸಾವಿರ ಐವತ್ತು ಕೀರ್ತನೆಗಳನ್ನು ಐದುಭಾಗಗಳಲ್ಲಿ ಪ್ರಕಟಿಸಿದರು. ೧೯೧೨ರಲ್ಲಿ ಈ ಪ್ರಕಟನೆ ನಡೆಯಿತು. ೧೯೩೨ರಲ್ಲಿ ಉಗಾಭೋಗಗಳನ್ನೊಳಗೊಂಡ ಕೊನೆಯಭಾಗ ಪ್ರಕಟವಾಯಿತು. ಇದೇ ರೀತಿಯಾದ ಇನ್ನೊಂದು ಸಂಗ್ರಹ ಸುಬೋಧ ರಾಮರಾಯರ ಹರಿದಾಸಕೀರ್ತನ ತರಂಗಿಣಿ ಗ್ರಂಥಮಾಲೆಯಿಂದ ೧೯೨೫ ರಲ್ಲಿ ಪ್ರಾರಂಭವಾಯಿತು. ಎರಡು ಭಾಗಗಳಲ್ಲಿ ಪ್ರಕಟವಾದ ಈ ಸಂಗ್ರಹದಲ್ಲಿ ಪುರಂದರದಾಸರ ಐದುನೂರಾ ನಲವತ್ತಮೂರು ಕೀರ್ತನೆಗಳು ಒಂದುನೂರಾ ಇಪ್ಪತ್ತೆಂಟು ಉಗಾಭೋಗಗಳೂ ಸೇರಿವೆ. ಪಣಿಯಾಡಿ ಲಕ್ಷ್ಮೀನಾರಾಯಣ ಉಪಾಧ್ಯಾಯ, ವೆಂಕಟರಮಣಾಚಾರ್ಯ ಮತ್ತು ಲಕ್ಷ್ಮೀನಾರಾಯಣ ಅಡಿಗ ಈ ಮೂವರೂ ಸೇರಿ ೧೯೪೦ರಲ್ಲಿ ತುಳುನಾಡು ಪ್ರೆಸ್ಸಿನಿಂದ ಒಂದು ಸಂಕಲನವನ್ನು ತಂದರು, ಅದು ನಾಲ್ಕು ಭಾಗಗಳಲ್ಲಿ ಪ್ರಕಟವಾಯಿತು. ೧೯೪೪ರಲ್ಲಿ ರಾಯಚೂರ ಜಿಲ್ಲೆಯ ಲಿಂಗಸೂಗೂರಿನ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲದಿಂದ ಗೊರೆಬಾಳ ಹನುಮಂತರಾಯರು ಮತ್ತೊಂದು ಸಂಕಲವನ್ನು ತಂದರು.

೧೯೫೬ರಲ್ಲಿ ಎಸ್. ಎಸ್. ಕಾರಂತರು (ತುಳುನಾಡು ಪ್ರೆಸ್ಸಿನ ಮ್ಯಾನೇಜರ್ ಆಗಿದ್ದವರು) ಪುರಂದರದಾಸರ ಆರುನೂರಾ ಐವತ್ತಾರು ಪದಗಳ ಸಂಗ್ರಹವೊಂದನ್ನು ಹೊರತಂದರು.

ಪುರಂದರದಾಸರ ಸಾಹಿತ್ಯದ ಸಂಗ್ರಹ ಸಂಪಾದನೆ ಪ್ರಕಟನೆಯ ಈ ಕಾರ್ಯ ನಿರಂತರವಾಗಿ ನಡೆಯುತ್ತಲೇ ಬಂದಿದೆ. ಪುರಂದರರ ಚತುರ್ಥ ಶತಮಾನೋತ್ಸವ ಸಂದರ್ಭದಲ್ಲಿ, ಅಂದರೆ ೧೯೬೩-೬೪ರ ಅವಧಿಯಲ್ಲಿ ಬೆಂಗಳೂರು - ಧಾರವಾಡಗಳಲ್ಲಿ ಉತ್ಸವ ಸಮಿತಿಗಳು ಏರ್ಪಟ್ಟು ಬೆಂಗಳೂರಿನ ಉತ್ಸವ ಸಮಿತಿಯು ಪ್ರೊ. ಎಸ್. ಕೆ. ರಾಮಚಂದ್ರರಾವ್ ಅವರಿಂದ ಪುರಂದರದಾಸರನ್ನು ಕುರಿತು ಗ್ರಂಥವೊಂದನ್ನು ಬರೆಯಿಸಿ ಕನ್ನಡ, ಇಂಗ್ಲೀಷ, ತೆಲುಗು ಭಾಷೆಗಳಲ್ಲಿ ಪ್ರಕಟಿಸಿತು.

ಧಾರವಾಡದ ಉತ್ಸವ ಸಮಿತಿಯವರು, ಮಿಂಚಿನಬಳ್ಳಿ ಕಾರ್ಯಲಯದ ಬುರ್ಲಿ ಬಿಂದುಮಾಧವಾಚಾರ್ಯರ ನೇತೃತ್ವದಲ್ಲಿ ಪುರಂದರದಾಸರ ಸಮಗ್ರ ಸಾಹಿತ್ಯವನ್ನು ಆರು ಸಂಪುಟಗಳಲ್ಲಿ ಹೊರತಂದರು. ಬೆಟಗೇರಿ ಕೃಷ್ಣಶರ್ಮ ಹಾಗೂ ಬೆಂಗೇರಿ ಹುಚ್ಚರಾಯರು ಸಂಪಾದಕರಾಗಿ ಬಹಳ ನಿಷ್ಠೆಯಿಂದ ಈ ಕಾರ್ಯವನ್ನು ಯಶಸ್ವಿಗೊಳಿಸಿದರು. ೧೯೬೩ ರಿಂದ ೧೯೬೫ರ ಅವಧಿಯಲ್ಲಿ ಪೂಜಾತತ್ತ್ವ, ಆರ್ತಭಾವ, ಮಹಾತ್ಮ್ಯಜ್ಞಾನ, ಕೃಷ್ಣಲೀಲೆ, ಲೋಕನೀತಿ ಮತ್ತು ಸಂಕೀರ್ಣಸಂಗ್ರಹ ಹೀಗೆ ಆರು ಮಹತ್ವದ ಸಂಪುಟಗಳು ಹೊರಬಂದವು. ಈ ಆರು ಸಂಪುಟಗಳಲ್ಲಿ ಪುರಂದರದಾಸರು ರಚಿಸಿರುವ ಒಂಬತ್ತು ನೂರಾ ಒಂದು ರಚನೆಗಳು ಸಂಗ್ರಹಗೊಂಡಿವೆ.

ಈ ಸಂಪುಟಗಳು ಪುರಂದರದಾಸರ ರಚನೆಗಳನ್ನು ಬಹು ಅರ್ಥ-ಪೂರ್ಣವಾದ ರೀತಿಯಲ್ಲಿ ಒಳಗೊಂಡಿವೆ. ಶುದ್ಧಪಾಠ, ಸಮಗ್ರ ಪರಿಶೀಲನೆ, ಸಂಪಾದನೆಯ ಶಿಸ್ತು, ಆಳವಾದ ಅಧ್ಯಯನ, ಸತತ ಪರಿಶ್ರಮ ಎಲ್ಲವೂ ಸೇರಿ ಇವು ಮಹತ್ವದ ಮತ್ತು ಅಧಿಕೃತ ಆಕರಗಳಾಗುತ್ತವೆ. ಪರಿಶಿಷ್ಟದಲ್ಲಿ ಶಬ್ದಾರ್ಥ, ಅಕಾರಾದಿ, ಸಾಂದರ್ಭಿಕ ಕತೆಗಳು, ಐತಿಹಾಸಿಕ ವಿವರಣೆಗಳೂ ಸೇರಿವೆ. ಹೀಗಾಗಿ

ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿಯವರ ಸಂಪಾದಕತ್ವದಲ್ಲಿ ಪ್ರಕಟವಾದ ಈ ಆರೂ ಸಂಪುಟಗಳು, ಪುರಂದರರ ಸಾಹಿತ್ಯವನ್ನು ಕುರಿತಂತೆ ಅಧಿಕೃತಹ ದಾಖಲೆಗಳಾಗಿವೆ.

ಪುರಂದರದಾಸರ ಐದನೆಯ ಶತಮಾನೋತ್ಸವದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಿಂದ 'ಪುರಂದರದಾಸರ ಸಾಹಿತ್ಯ ದರ್ಶನ' ಹೆಸರಿನಲ್ಲಿ ನಾಲ್ಕು ಸಂಪುಟಗಳು ಪ್ರಕಟವಾಗಿವೆ. ಜೀವನದರ್ಶನ, ಆಧ್ಯಾತ್ಮದರ್ಶನ, ಸಮಾಜದರ್ಶನ ಮತ್ತು ಕೀರ್ತನದರ್ಶನ ಹೆಸರಿನ ಈ ನಾಲ್ಕು ಸಂಪುಟಗಳ ಸಂಪಾದಕರು ಪ್ರೊ. ಎಸ್. ಕೆ. ರಾಮಚಂದ್ರರಾವ್, ಸಹಾಯಕ ಸಂಪಾದಕರು ಪ್ರೊ. ಅ. ರಾ. ಮಿತ್ರ ಹಾಗೂ ರತ್ನಾಶಿವಶಂಕರ್. ವಿಷಯಗಳಿಗನುಗುಣವಾಗಿ ಇಲ್ಲಿ ಸಂಪುಟಗಳನ್ನು ಮಾಡಿಕೊಳ್ಳಲಾಗಿದೆ. ಜೀವನದರ್ಶನದಲ್ಲಿ ಪುರಂದರರ ಸಮಕಾಲೀನ ದಾಸರು ಮತ್ತು ನಂತರದ ದಾಸರ ಕೀರ್ತನೆಗಳೂ ಸೇರಿವೆ.

ಇವಲ್ಲದೆ ಇನ್ನೂ ಅನೇಕ ಸಂಗ್ರಹಗಳು ಬಂದಿವೆ. ಕಲಮದಾನಿ ಗುರುರಾಯರು ಪ್ರಕಟಿಸಿದ ಸಂಗ್ರಹ, ಗದಗದ ಬಿ.ಜಿ. ಸಂಕೇಶ್ವರ ಸಂಗ್ರಹ, ಹುಬ್ಬಳ್ಳಿಯ ಎ. ಎಂ. ಕರಡಿಯವರ ಸಂಗ್ರಹ ಹಾಗೂ ೧೯೫೪ರಲ್ಲಿ ಬೆಂಗಳೂರಿನಿಂದ ಪ್ರಕಟವಾದ ಉಪಾಧ್ಯಾಯ ಪ್ರಕಟನಾಲಯದ ಸಂಗ್ರಹಗಳನ್ನೆಲ್ಲ ಹೆಸರಿಸಬಹುದಾಗಿದೆ. ಇತರ ದಾಸರ ಆಯ್ದ ಪದಗಳ ಸಂಗ್ರಹಗಳು ಅನೇಕ ಇವೆ. ಅಂತಹ ಸಂಗ್ರಹಗಳಲ್ಲಿಯೂ ಪುರಂದರದಾಸರ ರಚನೆಗಳು ಸೇರಿಕೊಂಡಿವೆ.

## ಕೃತಜ್ಞತೆಗಳು

ಬೆಟಗೇರಿ ಕೃಷ್ಣಶರ್ಮ ಹಾಗೂ ಬೆಂಗೇರಿ ಹುಚ್ಚರಾಯರು ಸಂಪಾದಿಸಿದ ಆರು ಸಂಪುಟಗಳನ್ನು ಅಧಿಕೃತ ಸಂಪುಟಗಳೆಂದು ಪರಿಗಣಿಸಿ ಅವುಗಳನ್ನೇ ಇಲ್ಲಿ ಮುಖ್ಯ ಆಕರವಾಗಿ ಬಳಸಲಾಗಿದೆ. ಕನ್ನಡ ಸಂಸ್ಕೃತಿ ನಿರ್ದೇಶನಾಲಯವು, ಪ್ರೊ. ಎಸ್. ಕೆ. ರಾಮಚಂದ್ರರಾವ್ ಅವರ ಸಂಪಾದಕತ್ವದಲ್ಲಿ ಪ್ರಕಟಿಸಿದ

ಪುರಂದರದಾಸರ ಸಾಹಿತ್ಯವನ್ನೊಳಗೊಂಡ ನಾಲ್ಕೂ ಸಂಪುಟಗಳನ್ನು ಪಾಠಾಂತರ, ಪರಿಷ್ಕರಣೆಯ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ. ಈ ಎರಡೂ ಸಂಗ್ರಹಗಳಲ್ಲಿ ಪ್ರಕಟವಾಗಿರುವ ಕೆಲವು ಪೂರ್ವ ಕತೆಗಳನ್ನು, ಟಿಪ್ಪಣಿಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಹೀಗಾಗಿ ಈ ಎರಡೂ ಸಂಗ್ರಹಗಳ ಸಂಪಾದಕರುಗಳಿಗೆ ಕೃತಜ್ಞತೆಗಳು.

ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಪುರಂದರದಾಸರ ಕೀರ್ತನೆಗಳ ಓಲೆಗರಿಗಳ ವಿವರಗಳನ್ನು ಡಾ. ಟಿ. ಎನ್. ನಾಗರತ್ನ ಅವರು ಒದಗಿಸಿದ್ದಾರೆ. ಪಾಠಾಂತರ ನಿರ್ಣಯಿಸುವಲ್ಲಿ, ಪುರಂದರ ಕನಕದಾಸರ ಅಂಕಿತ ಬದಲಾವಣೆಯಿಂದಾದ ತೊಂದರೆಯುನ್ನು ಹೋಗಲಾಡಿಸುವಲ್ಲಿ ಈ ವಿವರಗಳು ಪ್ರಮುಖ ದಾಖಲೆಗಳಾಗಿವೆ. ಅದಕ್ಕಾಗಿ ಅವರಿಗೂ ಧನ್ಯವಾದಗಳು.

ಕೆಲವು ಕೀರ್ತನೆಗಳು ಪುರಂದರದಾಸರ ಅಂಕಿತದಲ್ಲೂ ಇವೆ, ಕನ್ನಕದಾಸರ ಅಂಕಿತದಲ್ಲೂ ಇವೆ. ಈ ಕುರಿತು ಸಂಪಾದಕ ಸಮಿತಿಯು ಸಾದ್ಯಂತವಾಗಿ ಚರ್ಚಿಸಿ, "ವಿವಾದಾಸ್ಪದ ಕೀರ್ತನೆಗಳನ್ನು ಪುರಂದರದಾಸ, ಕನಕದಾಸ ಇವೆರಡೂ ಸಂಪುಟಗಳಲ್ಲಿ ಸೇರಿಸಬೇಕು. ಹಾಗೂ ಈ ಕೀರ್ತನೆಯು ಈ ದಾಸರ ಅಂಕಿತದಲ್ಲಿಯೂ ಇದೆ ಎಂದು ಟಿಪ್ಪಣಿಯಲ್ಲಿ ಕಾಣಿಸಬೇಕು" ಎಂಬುದಾಗಿ ನಿರ್ಣಯಿಸಿತು. ಅದರಂತೆ ಈ ಸಂಪುಟದಲ್ಲಿಯು ಸೇರ್ಪಡೆ ಹಾಗೂ ಅಡಿಟಿಪ್ಪಣಿಗಳಲ್ಲಿ ಹಾಗೆ ಮಾಡಿದೆ.

ಈ ಸಂಪುಟವನ್ನು ನಾನು ಸಂಪಾದಿಸಿಕೊಡಲು ಡಾ. ಟಿ. ಎನ್. ನಾಗರತ್ನ ಅವರ ಸಲಹೆ – ಸಹಕಾರವಿದೆ, ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಸಮಗ್ರ ದಾಸವಾಙ್ಮಯ ಪ್ರಕಟನಾ ಸಮಿತಿಯ ಎಲ್ಲ ಸದಸ್ಯರಿಗೂ, ಸಂಸ್ಕೃತಿ ಇಲಾಖೆಯ ಈಗಿನ ನಿರ್ದೇಶಕರಾಗಿರುವ ಶ್ರೀ ವೈ. ಕೆ. ಮುದ್ದುಕೃಷ್ಣ ಅವರಿಗೂ ಅಭಿವಂದನೆಗಳು.

ಈ ಸಂಪುಟದ ಹಸ್ತಪ್ರತಿ ಸಿದ್ಧಪಡಿಸುವಲ್ಲಿ ನನ್ನ ಸಂಶೋಧನಾ ವಿದ್ಯಾರ್ಥಿಗಳು ಸಹಕರಿಸಿದ್ದಾರೆ. ಶ್ರೀಮತಿ ರಾಜಶ್ರೀ ಕಲ್ಲೂರಕರ್, ಕು. ಸುವರ್ಣವಝ್ಕು, ಕು. ಸ್ನೇಹಲತಾ, ಭಾರತಿ, ದಸ್ತಗೀರಸಾಬ್ ದಿನ್ನಿ, ಮುನಿಯಪ್ಪ, ಆರ್. ಜಿ.ಕುಲಕರ್ಣಿ, ಸುನಿಲ್ ಕುಮಾರ್, ಹಿರೇಮಠ ಇವರೆಲ್ಲರಿಗೂ ನನ್ನ ನೆನಕೆಗಳು. ಇಲ್ಲಿಯ ಕೀರ್ತನೆಗಳ ಅಕಾರಾದಿ ಸಿದ್ಧಪಡಿಸುವಲ್ಲಿ ಸಹಕರಿಸಿದ ಡಾ. ಜಯಲಕ್ಷ್ಮೀ ಮಂಗಳಮೂರ್ತಿ ಹಾಗೂ ಶ್ರೀಮತಿ ಶೀಲಾ ದಾಸ್ ಅವರಿಗೆ ಕೃತಜ್ಞತೆಗಳು. ನಮ್ಮ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ನನ್ನ ಸಹೋದ್ಯೋಗಿಗಳನ್ನು ಹಾಗು ಸಂಗಾತಿ ವಿಜಯಶ್ರೀಯನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ. ಬೆಂಗಳೂರಿನ ವಿಜಯ ಕಾಲೇಜಿನ ಅಧ್ಯಾಪಕ ಶ್ರೀ ಎಸ್. ಎಲ್. ಶ್ರೀನಿವಾಸಮೂರ್ತಿಯವರ ಸಹಾಯವನ್ನು ಇಲ್ಲಿ ನೆನೆಯುತ್ತೇನೆ. ಡಾ. ಶ್ರೀನಿವಾಸ್ ಹಾವನೂರ ಅವರಿಗೆ ಧನ್ಯವಾದಗಳು. ಈ ಸಂಪುಟ ಸಿದ್ಧಪಡಿಸುವಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಾಯ ಸಹಕಾರ ನೀಡಿದ ಎಲ್ಲರಿಗೂ ಕೃತಜ್ಞತೆಗಳು ಸಲ್ಲುತ್ತವೆ.

ಈ ಸಂಪುಟದಲ್ಲಿ ಪ್ರಕಟವಾಗಿರುವ ಕೀರ್ತನೆಗಳ ಪಾಠಾಂತರ ನಿರ್ಣಯಿಸುವಲ್ಲಿ, ಮುದ್ರಿಕೆಗಳ ಸ್ಪಷ್ಟೀಕರಣದ ವಿಷಯದಲ್ಲಿ ವಿಮರ್ಶಕರ ಸಂಶೋಧಕರ ಸಲಹೆಗಳಿಗೆ ಸ್ವಾಗತವಿದೆ. ಓದುಗರ ಅಭಿಪ್ರಾಯಗಳನ್ನು, ಪ್ರತಿಕ್ರಿಯೆಗಳನ್ನು ಮುಕ್ತ ಹೃದಯದಿಂದ ಸ್ವಾಗತಿಸುತ್ತೇನೆ.

ಡಾ. ಬಸವರಾಜ ಸಬರದ
ಸಂಪಾದಕರು

# ಕೀರ್ತನೆಗಳ ಕ್ರಮಸೂಚಿ

## VIII. ಲೋಕನೀತಿ

## IX. ಸಂಪ್ರದಾಯದ ಹಾಡುಗಳು

# ಪುರಾಣ ಕಥಾನಕಗಳು

## ೧

ಅರಿಯರು ಮನುಜರು ಅರಿತೂ ಅರಿಯರು
ಧರೆಗೆ ಒಡೆಯ ಶ್ರೀ ಹರಿಯಲ್ಲದಿಲ್ಲವೆಂದು ಪ

ಶಿವಬಲ್ಲ ಧ್ರುವಬಲ್ಲ ದ್ರೌಪದಿ ಬಲ್ಲಳು
ಅವನಿ ಪಾಲಿಪ ಜನಕನೃಪ ಬಲ್ಲನು ॥
ಯುವತಿಗೆ ಶಾಪವಿತ್ತ ಗೌತಮ ಬಲ್ಲನು
ಭವರೋಗ ವೈದ್ಯ ಶ್ರೀಹರಿಯಲ್ಲದಿಲ್ಲವೆಂದು ೧

ನಾರದ ಮುನಿ ಬಲ್ಲ ವಾರಿಜೋದ್ಭವ ಬಲ್ಲ
ಪಾರಾಶರನು ಬಲ್ಲ ಮನು ಬಲ್ಲನು ॥
ಧೀರ ಭೀಷ್ಮನು ಬಲ್ಲ ಪಾರ್ವತಿ ಬಲ್ಲಳು
ಕಾರಣಕರ್ತ ಶ್ರೀಹರಿಯಲ್ಲದಿಲ್ಲವೆಂದು ೨

ದಿಟ್ಟ ಪ್ರಹ್ಲಾದ ಮೊರೆಯಿಟ್ಟ ಗಜೇಂದ್ರ ಬಲ್ಲ
ದೃಷ್ಟಾಂತ ಕಂಡ ಭೃಗುಮುನಿ ಬಲ್ಲನು ॥
ಕೊಟ್ಟ ಬಲಿಯು ಬಲ್ಲ ಕೆಟ್ಟಜಾಮಿಳ ಬಲ್ಲ
ಸೃಷ್ಟಿಗೆ ಪುರಂದರವಿಠಲನಲ್ಲದಿಲ್ಲವೆಂದು ೩

## ೨

ಅಂಬೆಗಾಲಿಕ್ಕುತಲಿ ಬಂದ ಗೋವಿಂದ ।
ಅಂಬುಜನಾಭ ದಯದಿಂದೆನ್ನ ಮನೆಗೆ ಪ

ಜಲಚರ ಜಲವಾಸ ಧರಣೀಧರ ಮೃಗರೂಪ ।
ನೆಲನಳೆದೀರಡಿ ಮಾಡಿ ಬಂದ ॥
ಕುಲನಾಶಿ ವನವಾಸಿ ನವನೀತಚೋರನಿವ ।
ಲಲನೆಯರ ವ್ರತಭಂಗ ವಾಹನತುರಂಗ ೧

ಕಣ್ಣ ಬಿಡುವನು ಮುಖ ತಗ್ಗಿಸಿ ನೆಲವಗಿದು ।
ಅಣಕಿಸುವ ಬಾಯ್ದೆರೆದು ಬಾಲತನದಿ ॥
ಪ್ರಾಣಘಾತಕನುಣಲೊಲ್ಲ ಬೆಣ್ಣೆಯ ಮೆಲುವ ।
ಮಾನವ ಬಿಟ್ಟು ಕುದುರೆಯನೇರಿ ಮೆರೆವ ೨

ನೀರ ಪೊಕ್ಕನು ಗಿರಿಯ ನೆಗಹಿ ಧಾರಿಣಿ ತಂದ ।
ನರಮೃಗ ಬಲಿಬಂಧ ಕೊರಳಗೊಯ್ಕ ॥
ಶರಮುರಿದೊರಳೆಳೆದು ಬತ್ತಲೆ ಹಯವನೇರಿ ।
ಪುರಂದರವಿಠಲ ನಮ್ಮ ಮನೆಗೆ ಹರುಷದಲಿ ೩

## ೩

ಆಗಮವ ತಮನೊಯ್ಯೆ । ಅವನ ಪಾತಾಳದಲಿ ।
ತಾಗಿದಲೆವರಿದು ವೇದಾವಳಿಗಳಾ ।
ಆಗ ತಂದಿತ್ತ ಮಚ್ಛಾವತಾರನೆ ಉದಯವಾಗುತಿದೆವುಪ್ಪುವಡಿಸೊ ಪ

ಹರಿಯೆ ಭಾಗೀರಥಿ ಪಿತನೆ । ಭಾಗವತಜನಪ್ರಿಯನೆ ।
ಯೊಗಧೆಯ ವಪ್ಪುವಡಿಸೊ ಹರಿಯೆ । ಭಾಗೀರಥಿ ಪಿತನೆ ೧

ದೇವಾಸುರರು ಶಿಂಧು । ಮಥನದಲಿ ಗಿರಿ ಮುಳುಗೆ ।
ದೇವಾ ರಕ್ಷಿಸುತಾ ಕ್ಷಿಶನ ಉಳಿದೂ ।
ಆನೊಯಲು ವಾಗಿರಿಯ । ನಾಂತ ಕೂರ್ಮನೆ ವುದಯವಾಗುತಿದೆ
ವುಪ್ಪವಡಿಸೊ ಹರಿಯೆ ೨

ಭೂತಳವ ಕದ್ದೊಯಿದ । ಹಿರಂಣಾಕ್ಷನೆಂಬಸುರಪಾತಳದ ।
ಲೊರಶಿನಿಲಿಶಿದ ಜಗಂಗಳಾ । ಖ್ಯಾತಿ ಪಡೆದಪ್ರತಿಮ ।
ವರಹಾರೂಪನೆ ಸುಪ್ರಭಾತದಲಿವುಪ್ಪವಡಿಸೊ ಹರಿಯೇ ೩

ಭೂದೇವದೇವರನು । ಭಜಿಸುವ ಶಿಶುವು ಪ್ರಹ್ಲಾದಗಾ । ಗಾಹವನು
ಕವಲುಗಿಶಿ ಉಗದೆ । ತೂದ ಕರುಳಿನಮಾಲೆ ।
ಯಪ್ಪನರಶಿಂಹ ಕಾರುಣೋದಯದೊ ವಪ್ಪವಡಿಸೊ ಹರಿಯೆ ೪

ಬಲಿ ಭಕುತಿಯಿಂದ ಮೂರಡಿನೆಲನ ಮಾತು ಕೊಡೆ ।
ನೆಲ ನಭವನೀರಡಿಯ ಮಾಡಿ ಬೆಳೆದೆ ।
ನಳಿನಜಾಂಡವನೊಡದೆ । ವಾಮನ ತ್ರಿವಿಕ್ರಮನೆ
ಬೆಳಗಾಯಿತುಪ್ಪವಡಿಸೋ ಹರಿಯೆ ೫

ಕಾರ್ತ್ತವೀರ್ಯ್ಯಾರ್ಜುನನ ಕಡಿದು ಕ್ಷತ್ರಿಯ ಕುಮುದು ।
ಮಾರ್ತ್ತಂಡನಾದೆ ಮಾತೆಯ ಮಾತಿಗೆ
ಆರ್ತ್ತಜನ ಬಂಧುವೆ । ಪರಶುರಾಮನೆ ಬ್ರಾಹ್ಮಿ ಮೂ
ಹೂರ್ತದಲ್ಲಿ ವುಪ್ಪವಡಿಸೊ ಹರಿಯೆ ೬

ಪಂಪಾದಿಪನವರದ । ಅಮರಪತಿಯಾದ ಷಂಪ್ಪ
ರಾವಣನಗೆಲಿದವನನುಜಗೆ ಸಂತ್ಪಾರಂಪರೆಯಯಿತ್ತ
ರಘುರಾಮದೆಶೆ । ಕೆಂಪಾಯಿತುಪ್ಪ ವಡಿಸೊಹರಿಯೆ ೭

ಯಿಂದು ರವಿಕುಲಗಳಲಿ । ಜನಿಶಿದಮಜರಾಜ। ಬೃಂದಾರಿಯಾಗಿ
ಭೂಭಾರವಿಳಿಪಿದೆ । ನಂದನಂದನ ಕೃಷ್ಣ ।
ಆಂಗನೆಯರಗಣ ಬಂದವಿದವುಪ್ಪ ವಡಿಸೊ ಹರಿಯೇ ೮

ತ್ರಿಪುರದಮಕಾರಿಗಳ । ಸತಿಯರಿಗೆವುಪಸತಿಗಳು
ಪದೆಶಗಳ ತೊಟ್ಟು
ಭ್ರಮಗೊಳಿಶಿದು ತ್ರಿಪುರ ಹತಗಂಬಾದೆ ।
ತ್ರಿಪುರ ಸಾಧಕ ಜಾಧ್ಯ ತಪ ನವಿದೆವುಪ್ಪವಡಿಸೊ ಹರಿಯೆ ೯

ಆಶಿ ಖಾಡವಿಡಿದಾಶ್ವವೇರಿ ಕೋಪದಿ ವಿಷ್ಣು ।
ಯಶಶಿನಲಿ ಕಲ್ಕ್ಯಾವ । ತಾರನಾದೆ ।
ಕುಶಿರಿದರಿದಶಸುವೇಪದಶ್ಯೊ
ಗಳಗೆಲಿದೆ । ಬಿಶಿಲಾಯಿತುಪ್ಪವಡಿಸೊ ಹರಿಯೆ ೧೦

ಯಿಂದ ಚಂದ್ರಾದಿಗಳ್ ಬ್ರಹ್ಮ ರುದ್ರಾದಿಗಳುಪೇಂದ್ರಜಯ ।
ಜಯಯೆನುತ ಬಂದೈಧರೆ । ವೀಂದ್ರ ವಾಹನ ಪುರಂದರವಿಠಲ
ಸೌಭಾಗ್ಯ ಸಾಂದ್ರನಿಧಿ ವುಪ್ಪವಡಿಸೊ ಹರಿಯೆ ೧೧

೪

ಆತನ ಪಾಡುವೆನನವರತ ।
ಪ್ರೀತಿಯಿಂದಲಿ ತನ್ನ ಭಕುತರ ಸಲಹುವ ಪ

ಆವಾತನ ಕೀರ್ತಿಯನು ಪರೀಕ್ಷಿತ ಕೇಳೆ ।
ಪಾವನನಾದನು ಮೂಜಗವರಿಯೆ ॥
ಭಾವಶುದ್ಧಿಯಲಿ ಶುಕನಾರನು ಪೊಗಳುವ ।
ಆವಗಂ ಪ್ರಹ್ಲಾದನಾದವನ ನೆನೆವೆನಯ್ಯ ೧

ಶಿಲೆಯ ಬಾಲೆಯ ಮಾಡಿದ ಪಾದವಾರದು ।
ನಳಿನ ಸಂಭವನನು ಪೆತ್ತವನಾರು ॥
ಕಲಿಯುಗದ ಮನುಜರಿಗೆ ಆರನಾಮವು ಗತಿ ।
ಇಳೆಯ ಭಾರವನಿಳುಹಿ ಸಲಹಿದರಾರಯ್ಯ ೨

ದ್ರುಪದನ ಸುತೆಯ ಮಾನರಕ್ಷಕನಾರು ।
ನೃಪಧರ್ಮನಿಗೆ ಸಂರಕ್ಷಕನಾರು ।
ಕೃಪೆಯಿಂದ ವಿದುರನ ಮನೆಯಲುಂಡವನಾರು ।
ಆಪತ್ಕಾಲದಿ ಗಜವ ಸಲಹಿದರಾರಯ್ಯ ೩

ಅತಿಶಯದಿಂದ ಅರ್ಜುನಗೆ ಸಾರಥಿಯಾಗಿ ।
ರಥವ ಪಿಡಿದು ನಡೆಸಿದವನಾರೊ ॥
ಪೃಥಿವಿಯೆಲ್ಲವ ಬಲಿ ಆರಿಗೊಪ್ಪಿಸಿದನು ।
ಮತಿವಂತ ಧ್ರುವನ ರಕ್ಷಕನಾರು ಪೇಳಯ್ಯ ೪

ಸಾಗರನ ಮಗಳಿಗೆ ಆರ ನಾಮವೆ ಗತಿ ।
ಯೋಗದಿ ನಾರದನಾರ ಭಜಿಪನಯ್ಯ ॥

ರಾಗರಹಿತ ಹನುಮಂತನೊಡೆಯನಾರು ।
ಭಾಗವತರ ಪ್ರಿಯ ಪುರಂದರವಿಠಲ ೫

೫

ಇಂಥ ಹೆಣ್ಣನು ನಾನೆಲ್ಲಿ ಕಾಣೆನೊ ।
ಹೊಂತಕಾರಿ ಕಾಣಿರೊ ಪ

ಸಂತತ ಸುರರಿಗೆ ಅಮೃತವನುಣಿಸಿದ
ಪಂತಿಯೊಳಗೆ ಪರಪಂತಿಯ ಮಾಡಿದ ಅ.ಪ

ಮಂದರಗಿರಿ ತಂದು ಸಿಂಧುವಿನೊಳಗಿಟ್ಟು
ಚೆಂದದಿಂದಲಿ ಕಡೆದಮೃತವ ತೆಗೆದು ॥
ಇಂದುಮುಖಿಯೆ ನೀ ಬಡಿಸೆಂದು ಕೊಟ್ಟರೆ ।
ದಂಧನೆಯನು ಮಾಡಿ ದೈತ್ಯರ ವಂಚಿಸಿದ ೧

ವಿಸುವಾಸದಿಂದಲಿ ಅಸುರಗೆ ವರವಿತ್ತು ।
ತ್ರಿಶುಲಧರನು ಓಡಿ ಬರುತಿರಲು ॥
ನಸುನಗುತಲಿ ಬಂದು ಭಸುಮಾಸುರನಿಗೆ ।
ವಿಷಯದಾಸೆಯ ತೋರಿ ಭಸುಮವ ಮಾಡಿದ ೨

ವಸುಧೆಯೊಳಗೆ ಹೆಣ್ಣು ಒಸಗೆಯಾಗದ ಮುನ್ನ ।
ಬಸುರಿಲ್ಲದೆ ಬೊಮ್ಮನ ಪಡೆದಿಹಳು ॥
ಕುಸುಮನಾಭ ನಮ್ಮ ಪುರಂದರವಿಠಲನ ।
ಪೆಸರ ಪೊತ್ತವಳು ಈ ಹೊಸ ಕನ್ನಿಕೆಯು ೩

೬

ಇಂದಿನ ದಿನ ಸುದಿನವಾಯಿತು ಪ

ಇಂದಿರೇಶ ಮೂಲರಾಮಚಂದ್ರನ ಪದಕಮಲಗಳ–ಸು– ।
ರೇಂದ್ರತೀರ್ಥಮುನಿಯು ತೋರಲು ಅ.ಪ

ಈತನ ಪದಕಮಲಗಳ ವಿಧಾತ ತನ್ನ ಭವನದೊಳಗೆ ।
ಸೀತೆಯ ಸಹ ಪೂಜಿಸಿ ಇಕ್ಷ್ವಾಕು ನೃಪಗಿತ್ತನು ॥
ಆತನನ್ವಯ ನೃಪರೆಲ್ಲರು ಪ್ರೀತಿಯಿಂದಲಿ ಭಜಿಸಿ ರಘು- ।
ನಾಥ ವೇದಗರ್ಭಗಿತ್ತ ಮೂರ್ತಿಯ ಪದಕಮಲ ಕಂಡೆ ೧

ಗಜಪತಿ ಭಾಂಡಾರದಲ್ಲಿ ಅಜಕರಕಮಲಾರ್ಚಿತ ಭೂ – ।
ಮಿಜೆ ಸಹಿತದಿ ರಾಮನಿರಲು ನಿಜಜ್ಞಾನದಿ ತಿಳಿದು ಬೇಗ ॥
ದ್ವಿಜವರಗುರುವೆನಿಸುತಿಪ್ಪ ಸುಜನವಂದಿತ ನರಹರಿಮುನಿ ।
ರಜನಿಯಲ್ಲಿ ತಂದ ಸುಲೋಹಮಯ
ಪ್ರತಿಮೆಯನೆ ಕಂಡು ೨

ಅಂದವುಳ್ಳ ಮೂಲರಾಮಚಂದ್ರನ ಪದಕಮಲಗಳನು ।
ವೃಂದಾರಕವೃಂದ ವಂದ್ಯನೆಂದೆನಿಸುವ ಪವನನಾ ॥
ನಂದನಗುರು ಶ್ರೀಮದಾನಂದತೀರ್ಥರರ್ಚಿಸಿ ನಿಜ ।
ಅಂದದನ್ವಯದೊಳಿಟ್ಟ ಪುರಂದರ ವಿಠಲನ ಕಂಡು ೩

## ೭

ಇನ್ನು ಪುಟ್ಟಿಸದಿರಯ್ಯ ಪುಟ್ಟಿಸಿದಕೆ ಪಾಲಿಸಯ್ಯ
ಎನ್ನ ದಯದಿ ಪಾಲಿಸಯ್ಯ ಪ

ನಿನ್ನ ಚರಣಾಂಬುಜವ ನಂಬಿದೆನೊ ಶ್ರೀ ಹರಿಯೆ
ಬೆನ್ನು ಬಿದ್ದೆನು ಭವಬಂಧನವ ಬಿಡಿಸಯ್ಯ ಅ.ಪ
ಅಮರೇಂದ್ರವಂದಿತನೆ ಅನಂತಮಹಿಮನೆ
ಕಮಲಸಖಾನಂತಕರನೆ ॥
ಕಮಲಾಯತಾಂಬಕನೆ ಕಾಮಿತದಾಯಕನೆ
ವಿಮಲ ಗುಣ ವಿಭೀಷಣಗೆ ಒಲಿದ ದಯದಿಂದಲೆನ್ನ ೧

ಅಜಮಿಳ ಅಂಬರೀಷ ಅಕ್ರೂರ ವಿದುರಗೆ
ಗಜರಾಜ ಗಿರಿಜೇಶಗೆ ॥
ನಿಜಭಕ್ತ ಪ್ರಹ್ಲಾದ ಅಜ ಧ್ರುವ ಅರ್ಜುನಗೆ
ದ್ವಿಜಸುತ ರುಕ್ಮಾಂಗದರಿಗೊಲಿದ ದಯದಿಂದಲೆನ್ನ ೨

ಅವರಂತೆ ನಾನಲ್ಲ ಅವರ ದಾಸರ ದಾಸ
ಸವರಿ ಬಿಸುಟೆನ್ನ ದೋಷ ॥
ಪವಿತ್ರನ್ನ ಮಾಡಯ್ಯ ಪುಂಡಲೀಕ ವರದನೆ
ಅವಸರಕೆ ದ್ರೌಪದಿಗೆ ಒಲಿದ ದಯದಿಂದಲೆನ್ನ ೩

ಎಂದೆಂದು ನಿನ್ನ ಪಾದವೆನಗೆ ನೆಲೆಯಾಯಿತು
ಎಂದೆಂದು ನಿನ್ನ ನಾಮಭಜನೆ ॥
ಎಂದೆಂದು ನೀಯೆನ್ನ ಬಿಡದೆ ಪಾಲಿಸೊ ಸ್ವಾಮಿ
ಅಂದು ಅಂಜನೆಕಂದನಿಗೆ ಒಲಿದ ದಯದಿಂದಲೆನ್ನ ೪

ಅಂತರಂಗದುಬ್ಬಸವ ಅಯ್ಯಾ ನಿನಗುಸಿರುವೆನು
ಚಿಂತೆಗಳ ಪರಿಹರಿಸೊ ॥
ಸಂತತ ಪಾಲಿಸೊ ಪುರಂದರ ವಿಠಲನೆ
ಚಿಂತಿಪ ಗೌತಮನ ಸತಿಗೆ ಒಲಿದ ದಯದಿಂದಲೆನ್ನ ೫

## ೮

ಇವಗೇಕೆ ಪರಿಮಳ ಇವಗೇಕೆ ಶೃಂಗಾರ ।
ನವನೀತ ಚೋರ ನಾರುವ ಗೊಲ್ಲಗೆ ಪ

ಹೊಲಸು ಮೈಯವಗೇಕೆ ಹೊಸ ಕಸ್ತೂರಿಯ ಲೇಪ ।
ತಲೆದೋರದವಗೇಕೆ ದಟ್ಟ ಪುನುಗು ।
ಬಲು ಕೇಶದವಗೇಕೆ ಬಾವನ್ನದ ಲೇಪ ।
ಸಲೆಘೋರರೂಪಿಗೇಕೆ ನೊಸಲ ಸಾದು ೧

ತುಲಸಿಮಾಲೆಯ ಧರಿಸಿದವಗೇಕೆ ಜವ್ವಾಜಿ ।
ಕೊಲೆಗಡುಕಗೇಕೆ ಕುಂಕುಮತಿಲಕ ॥
ಅಲೆದಾಡುವವಗೇಕೆ ಅಂಗರಾಗದ ಸುಖ।
ಕಳವು ಮಾಡುವವಗೇಕನಂಗ ಸೊಬಗು ೨

ಪರಸತಿಯ ಬಯಸುವಗೆ ಪನ್ನಗಶಯನವೇಕೆ
ಹರಿದಾಡುವನಿಗೇಕೆ ಅಡಪ – ಡವಿಕೆ ॥
ಸಿರಿದೇವಿ ಶೃಂಗಾರಗೈದು ವರಿಸಿದ ಬಳಿಕ ।
ಧರೆಗಧಿಕನಾದನೀ ಪುರಂದರ ವಿಠಲ ೩

## ೯

ಎಂದಿಗಾದರು ನಿನ್ನ ನಂಬಿದೆ – ಚೆಲ್ವ – ।
ಮಂದರಧರ ಮದನಜನಕ ।
ವೃಂದಾವನಪತಿ ಗೋವಿಂದ ಪ

ತರುಣಿಯ ಮಾನವನು ಕಾಯ್ದೆ – ಅಂದು – ।
ದುರುಳ ತನ್ನ ಸುತನ ಕೊಲಲು ಒದಗಿ ಕಂಬದಿ ಬಂದೆ ॥
ಕರುಣದಿ ಶಿಲೆಯನುದ್ಧರಿಸಿದೆ ತನ್ನ – ।
ಮರಣಕಾಲಕೆ ನಾಗರನೆಂದರೆ ಮುದದಿ
ಮುಂದೆ ನಿಂದೆ ಗೋವಿಂದ ೧

ಧ್ರುವ – ವಿಭೀಷಣ – ರುಕ್ಮಾಂಗದರು ನಿನ್ನ ವರಿಸಲು ।
ಆ ವ್ಯಾಸ ನಾರದ ಬಲಿ ಮುಖ್ಯ ಕಲಿಪಾರ್ಥನು ॥
ಪವನಸುತನು ಅಂಬರೀಷನು – ತ್ರೈ – ।
ಭುವನವರಿಯೆ ನಿನ್ನ ನೆನೆಯೆ ಪದವನಿತ್ತೆ ಗೋವಿಂದ ೨

ದುರಿತ ವಿನಾಶ ದೋಷದೂರನೆ – ಜಗದ್ – ।
ಭರಿತ ದೈತ್ಯದಳಸಂಹಾರ ಶರಣು ಚಾರುಚರಿತ್ರ ॥
ಕರಿವರದ ಪುರಂದರವಿಠಲ ಕಾಯೊ ।
ಶರಣಹೃದಯ ಸರಸಿಜ ಪರಮಪಾವನ ಗೋವಿಂದ ೩

## ೧೦

ಏನಯ್ಯ ನಿನ್ನ ಸಂಗದ ಪರಿ – ।
ಮಾನಿನಿಯ ಮರುಳು ಮಾಡಿ ನೋಡಿದವಗೆ ಪ

ಶಿರವ ತೂಗುವಳು, ಚಿತ್ರದ ಪ್ರತಿಮೆಯಂತಿಹಳು ।
ಕರವ ಗಲ್ಲದೊಳಿಟ್ಟು ಕಡುಸುಯ್ವಳು ॥
ಇರು ಇರುತಲೊಮ್ಮೊಮ್ಮೆ ಎದುರೆದ್ದು ನೋಡುವಳು ।
ಬರವ ಕಾಣದೆ ಕಂದಿ ಕುಂದಿ ಬಡವಾದಳೈ ೧

ಕಂಬನಿಯ ತುಂಬುವಳು ಕರೆವಳು ಪೆಸಗೊಂಡು ।
ಹಂಬಲಿಸುವಳು ಕಂಡ ಕಾಂತೆಯರೊಳು ॥
ಬೆಂಬಿಡದೆ ಜಡೆ ಮುಡಿಯ ತೊಡಿಗೆ ಬೀಸಾಡುವಳು ।
ಬಿಂಬವರಿತು ಪೊಗಳುವಳು ನಿನ್ನ ಗುಣಗಣವ ೨

ಇನಿತರೊಳೇನಹುದೊ, ನಿನ್ನ ಮೇಲಣ ಸ್ನೇಹ ।
ಘನತಾಪದಿಂದ ಗೋಚರವಾಗಿದೆ ॥
ಅನುತಾಪದಿಂದ ಸಲೆ ಬಳಲಿದ ಮಾನಿನಿಯ ।
ವನಜಾಕ್ಷ ಪುರಂದರ ವಿಠಲ ಬಂದು ಸಂತಯಿಸೊ ೩

## ೧೧

ಏನು ಬೇಡಲಿ ನಿನ್ನ ಹರಿಯೆ ಪ

ಏನ ಬೇಡಲಿ ನಿನ್ನ ಚಂಚಲ ಕಠಿಣನ ।
ಮಾನದಿಂದ ಮೋರೆ ಓರೆಮಾಡುವವನ ಅ.ಪ

ಕರುಳಹರಕನ – ಏನ ಬೇಡಲಿ ।
ತಿರಿದು ತಿಂಬುವನ ॥
ಕೊರಳಗೊಯ್ಕ ಅರಣ್ಯ ತಿರುಗವನ ಮೊ – ।
ಸರು ಬೆಣ್ಣೆ ಕದ್ದು ತಿಂಬವನ ೧

ವಾಸಶೂನ್ಯನ – ಬೇಡಲೇನು ಕತ್ತಿ – ।
ಬೀಸಿ ಸವರುವನ ॥
ಕಾಸುವೀಸವನೆಲ್ಲ ಮೀಸಲು ಮಾಡಿಟ್ಟು ।
ಕೇಸಕ್ಕಿ ಉಂಡುಂಡು ವಾಸಿಸುವನ ೨

ಬೇಡಿದರೆ ಕೊಡನ – ಮೋರೆನೋಡಿ ।
ಭಿಡೆಯ ಹಿಡಿಯದವನ ।
ಬಡವರ ಕರೆತಂದು ಅಡಿಗೆ ಸೇರಿಸಿಕೊಂಡ ।
ಒಡೆಯ ಪುರಂದರವಿಠಲದೊರೆಯ ೩

## ೧೨*

ಏನೆಂತೊಲಿದೆ ಇಂತವರಂತೆ ಕೆಡುಬುದ್ಧಿ – ಎನ್ನೊಳಿಲ್ಲ ಗುಣ ।
ಹೀನರಲ್ಲದ ದೀನ ಜನರ ಪಾಲಿಪ ಬುದ್ಧಿ ನಿನ್ನೊಳಿಲ್ಲ ಪ

ತರಳ ಪ್ರಹ್ಲಾದನಂದದಿ ನಿನ್ನಯ ರೂಪ ಕೆಡಿಸಲಿಲ್ಲ
ನರನಂತೆ ತನ್ನ ಬಂಡಿಯ ಬೋವನ ಮಾಡಿ ಹೊಡಿಸಲಿಲ್ಲ ॥
ಸುರನದೀಸುತನಂತೆ ಪಣೆಯೊಳು ಬಾಣವ ಸಿಡಿಸಲಿಲ್ಲ
ದೊರೆ ಅಂಬರೀಷನಂದದಿ ಈರೈದು ಜನ್ಮವ ಪಡಿಸಲಿಲ್ಲ ೧

ನಾರದನಂತೆ ಕಂಡವರ ಕೊಂಡೆಯವ ನಾ ಪೇಳಲಿಲ್ಲ ।
ಪರಾಶರನಂತೆ ನದಿಯೊಳಂಬಿಗ ಹೆಣ್ಣ ಕೂಡಲಿಲ್ಲ ॥
ಆ ರುಕುಮಾಂಗದನಂತೆ ಸುತನ ಕೊಲ್ಲಲು ಧೃಢಮಾಡಲಿಲ್ಲ
ಮಾರುತನಂತೆ ನೀನುಣುತಿದ್ದ ಎಡೆಯ ಕೊಂಡೋಡಲಿಲ್ಲ ೨

ವಿದುರನಂತೆ ನನ್ನ ಸದನವ ಮುರಿದು ನಾ ಕುಣಿಯಲಿಲ್ಲ
ಮದಕರಿಯಂತೆ ಮಕರಿಯ ಬಾಯೊಳು ಸಿಕ್ಕಿ ಒದರಲಿಲ್ಲ ॥
ಹೆದರದೆ ಬಲಿಯಂತೆ ಭೂಮಿಯ ಧಾರೆಯನೆರೆಯಲಿಲ್ಲ
ಸದರ ಮಾತುಗಳಾಡಿ ಶಿಶುಪಾಲನಂತೆ ನಾ ಜರೆಯಲಿಲ್ಲ ೩

ಸನಕಾದಿ ಮುನಿಯಂತೆ ಅನುದಿನ ಮನದೊಳು ಸ್ಮರಿಸಲಿಲ್ಲ
ಇನಸುತ ಕಪಿಯಂತೆ ವಂಚಿಸಿ ವಾಲಿಯ ಕೊಲಿಸಲಿಲ್ಲ ॥
ಬಿನುಗು ಬೇಡತಿಯಂತೆ ಸವಿದುಂಡ ಹಣ್ಣ ನಾ ತಿನಿಸಲಿಲ್ಲ
ಘನ ಅಜಾಮಿಳನಂತೆ ಸುತನ ನಾರಗನೆಂದು ಕರೆಯಲಿಲ್ಲ ೪

* ಈ ಕೀರ್ತನೆಯ ಮೊದಲಿನ ನಾಲ್ಕು ನುಡಿಗಳು ಕನಕದಾಸರ ಅಂಕಿತದಲ್ಲೂ ಇವೆ.

ವರ ಶೌನಕನಂತೆ ನಿತ್ಯ ಸೂತನ ಕಥೆ ಕೇಳಲಿಲ್ಲ
ಪಿರಿದು ತುಂಬುರುನಂತೆ ನಾಟ್ಯ – ಸಂಗೀತವ ಪೇಳಲಿಲ್ಲ ॥
ಉರಗಾಧಿಪತಿಯಂತೆ ಉದರದೊಳಿಟ್ಟು ನಾ ತೂಗಲಿಲ್ಲ
ಪಿರಿದು ಕುಚೇಲನ ತೆರನಂತೆ ಅವಲಕ್ಕಿ ಈಯಲಿಲ್ಲ ೫

ಭೃಗುಮುನಿಯಂತೆ ಗರ್ವದಿ ನಿನ್ನ ಎದೆಯನು ಒದೆಯಲಿಲ್ಲ
ಅಗಣಿತ ಮಹಿಮ ನೀನಹುದೆಂದು ಧ್ರುವನಂತೆ ಪೊಗಳಲಿಲ್ಲ ॥
ಖಗರಾಜನಂತೆ ನಿನ್ನನು ಪೊತ್ತು ಗಗನದಿ ತಿರುಗಲಿಲ್ಲ
ಅಗಜೆಯರಸನಂತೆ ಮಸಣದಿ ರಾಮನ ಸ್ಮರಿಸಲಿಲ್ಲ ೬

ಅವಹಿತದಲಿ ವಿಭೀಷಣನಂತೆ ಅಣ್ಣನ ಕೊಲಿಸಲಿಲ್ಲ
ಯುವತಿ ದ್ರೌಪದಿಯಂತೆ ಪತ್ರಶಾಕವನುಣಬಡಿಸಲಿಲ್ಲ ॥
ತವೆ ಪುಂಡಲೀಕನಂದದಿ ಇಟ್ಟಿಗೆಯ ಮೇಲೆ ನಿಲಿಸಲಿಲ್ಲ ದೇವ
ಇವರಂತೆ ಪುರಂದರ ವಿಠಲ ನಿನ್ನಯ ಕೃಪೆಯೆನ್ನೊಳಿಲ್ಲ ೭

## ೧೩

ಒಂದೇ ಕೂಗಳತೆ ಭೂವೈಕುಂಠ
ಸಂದೇಹವಿಲ್ಲವು ಸಾಧು ಸಜ್ಜನರಿಗೆ ಪ

ಅಂಬರೀಷನು ದ್ವಾದಶಿವ್ರತ ಮಾಡಲು
ಡೊಂಬೆಯ ಮಾಡಿದ ದುರ್ವಾಸನು ॥
ಕುಂಭಿನೀಪತಿ ಕೃಷ್ಣ ಕಾಯಬೇಕೆನುತಲೆ
ಇಂಬಿಟ್ಟು ಚಕ್ರದಿ ಮುನಿಶಾಪ ಕಳೆದುದು ೧

ಕರಿರಾಜ ವನದಲಿ ಉಳುಹೆಂದು ಕೂಗಲು
ತ್ವರಿತದಿಂದಲಿ ಬಂದು ಕಾಯ್ದ ತಾನು ॥
ಕರುಣ ಸಾಗರ ಕೃಷ್ಣ ಕಾಯಬೇಕೆನುತಲೆ
ತರಳ ಪ್ರಹ್ಲಾದನ ಕಂಬದಿ ಬಂದುದು ೨

ದ್ರುಪದರಾಯನ ಪುತ್ರಿಗಾಪತ್ತು ಬರಲು
ಕೃಪೆಯಿಂದಲಕ್ಷಯವಿತ್ತನು ॥

ಕಪಟನಾಟಕ ಕೃಷ್ಣ ಪುರಂದರ ವಿಠಲನ
ಗುಪಿತದಿ ನೆನೆವರ ಹೃದಯವೇ ವೈಕುಂಠ ೩

## ೧೪

ಒಂದೇ ನಾಮದೊಳಡಗಿದುವೊ ಆ –
ನಂದದಿಂದುಸುರುವ ಅಖಿಳ ವೇದಗಳು ಪ

ಒಂದೇ ನಾಮವು ಪ್ರಹ್ಲಾದನ ಕಾಯ್ತು – ಮ –
ತ್ತೊಂದೆ ನಾಮವೆ ಅಜಮಿಳನ ಸಲಹಿತು ॥
ತಂದೆ ತಾಯಿಯ ಬಿಟ್ಟ ಕಂದ ಧ್ರುವರಾಯಗಾ –
ನಂದಪದವನಿತ್ತ ಅದ್ಭುತಗುಣವೆಲ್ಲ ೧

ಮಚ್ಛ್ಯಾದ್ಯಾನಂತಾವತಾರ ಅಷ್ಟಾದಶ
ಸ್ವಚ್ಛ ಪುರಾಣಗಳಮೃತದ ಸಾರ ॥
ಕಚ್ಛಪನಾಗಿ ತ್ರೈಜಗಕೆ ಆಧಾರ ತ –
ನ್ನಿಚ್ಛೆಯಿಂದಲಿ ತಾನು ಮಾಳ್ಪ ವ್ಯಾಪಾರ ೨

ಒಬ್ಬರೀತಗೆ ಸಮರಿಲ್ಲ ತ –
ನ್ನಬ್ಬರದಿಂದಲಿ ಸಲಹುವನೆಲ್ಲ ॥
ಕಬ್ಬುಬಿಲ್ಲನ ಪಿತ ಪುರಂದರ ವಿಠಲ ವೈ–
ದರ್ಭಿಯ ರಮಣನ ವರಸುಗುಣಗಳೆಲ್ಲ ೩

## ೧೫

ಕೃಷ್ಣೇತಿ ಮಂಗಳಂ ದಿವ್ಯನಾಮ ಪ

ಇಷ್ಟರಿಂದಲಿ ಭವಬಂಧನ
ನಷ್ಟವಾಗಿ ಹೋಪುದೋ ಅ.ಪ

ನಾರದಮುನಿ ತಾನು ನರಕ ಪಟ್ಟಣಕೆ ಹೋಗಿ
ವಾರೀಜನಾಭ ಎಂದು ಒದರಿದಾಗ ॥

ಘೋರ ಪಾತಕವೆಲ್ಲ ದೂರವಾಗಿ ಹೋಯ್ತು
ಸೂರೆಯಾಯಿತು ಸ್ವರ್ಗಲೋಕವೆಲ್ಲ ೧

ಅಜಮಿಳನು ಈ ನಾಮ ಅಂತ್ಯಕಾಲಕೆ ಸ್ಮರಿಸೆ
ನಿಜಪದವಿಯೈದಿದನು ನಿಮಿಷದಲಿ ॥
ಭುಜಗಭೂಷಣನು ತಾ ಶ್ರೀರಾಮನಾಮವ
ನಿಜಕಾಂತೆಯನು ಕರೆದು ಉಪದೇಶವಿತ್ತ ೨

ಪಂಚಪಾಂಡವರನು ಪರಿಪಾಲಿಸಿತು ನಾಮ
ಪಾಂಚಾಲೀ ಮೊರೆ ಕೇಳಿ ಪೊರೆಯಿತು ನಾಮ ॥
ವಂಚನೆ ಮಾಡಿ ಕೌರವರ ಮಡುಹಿ ನಿ –
ಶ್ಚಿಂತೆಯಲಿ ಪಾಂಡವರ ಪಟ್ಟಗಟ್ಟಿದ ನಾಮ ೩

ಸರಸಿಯೊಳಗೆ ಮುಳುಗಿ ಅರಿಯ ಬಾಧೆಗೆ ಸಿಲುಕಿ
ಕರಿರಾಜ ಹರಿಯೆಂದು ಮೊರೆಯಿಡಲು ॥
ತ್ವರಿತದಿಂದಲಿ ಬಂದು ಕರಿಯನುದ್ಧರಿಸುತ
ಕರಿರಾಜವರದನೆಂದೆನಿಸಿಕೊಂಡ ನಾಮ ೪

ಧ್ರುವ ತನ್ನ ತಂದೆ ತೊಡೆಯ ಮೇಲೇರಲು ಪೋಗೆ
ಅವನ ಮಲತಾಯಿ ಗರ್ಜಿಸಿದಳಾಗ ॥
ಧ್ರುವ ಸುಖಬಿಟ್ಟು ವನಕೆ ಪೋಗಿ ತಪ ಮಾಡಿ
ಸವಿಯಾದಚಲಪದವ ಪಡೆದನಾಗ ೫

ಹಿರಣ್ಯಕಶಿಪು ತನ್ನ ಮಗನ ಬಾಧೆಯ ಪಡಿಸೆ
ಗಿರಿಯ ಶಿಖರದಿಂದೀಡಾಡಲು ॥
ನರಹರೆ ನರಹರೆ ರಕ್ಷಿಸೆಂದನ್ನಲು
ನರಸಿಂಹ ರೂಪದಿಂದವನ ಪಾಲಿಸಿದ ೬

ಕಂದನ ಅಪರಾಧವ ಕೇಳದೆ ನೃಪನು ತಾ
ನಂದತಿ ದಾರುಣ ಕಡಹದೊಳು ಕೆಡಹೆ ॥
ಅಂದು ಸುಧನ್ವ ಶ್ರೀಕೃಷ್ಣನೆಂದೆನಲಾಗಿ
ಬೆಂದು ಕುದಿವ ಎಣ್ಣೆ ತಣ್ಣೀರಾಯಿತು ೭

ಅಸುರ ಬಾಧೆಗೆ ಸಿಲುಕಿ ಅಶೋಕವನದಲಿ
ಶಶಿಮುಖಿ ಬೀಜಮಂತ್ರವ ಜಪಿಸೆ ॥
ಅಸುರನ ಕೊಂದು ಅಶೋಕವನವ ಬಿಡಿಸಿ
ವಸುಧೀ ಸುತೆಯ ಸಲಹಿದ ರಾಮನಾಮ ೮

ಪರಿಪರಿ ಭಕ್ತರನು ಪಾಲಿಸಿತು ಈ ನಾಮ
ಪರಮ ಮಂಗಲವು ಪಾವನವು ಈ ನಾಮ ॥
ಸುರರು ಬ್ರಹ್ಮಾದಿಗಳು ಸ್ತೋತ್ರ ಮಾಡುವ ನಾಮ
ಧರೆಯೊಳು ಸಿರಿ ಪುರಂದರ ವಿಠಲ ನಾಮ ೯

## ೧೬

ಕುಣಿತೆಯ ಕೃಷ್ಣ ಕುಳ್ಳಿರ ಕಲಿತೆಯ ।
ಕುಣಿತೆಯ ಎನ್ನೊಡೆಯ ಪ

ಇಳೆಯೊಳು ಭಕುತರ ಹೃದಯ ಕಮಲದೊಳು ।
ಕುಣಿತೆಯ ಎನ್ನೊಡೆಯ ಅ.ಪ

ಜಲಚರರೂಪದಿ ನಿಗಮಗಳೆಣಿಸುತ ಕುಣಿತೆಯ ಎನ್ನೊಡೆಯ ।
ಕುಲಗಿರಿಗಳನೆಲ್ಲ ನೆಗಹಿಕೂರ್ಮನಾಗಿ ಕುಣಿತೆಯ ಎನ್ನೊಡೆಯ ॥
ಛಲದಿ ವರಾಹನಾಗಿ ಭೂಮಿದೇವಿಯ ತಂದು
ಕುಣಿತೆಯ ಎನ್ನೊಡೆಯ
ಖಳಹಿರಣ್ಯಾಖ್ಯನ ಕರುಳಬಗಿವೆನೆಂದು
ಕುಣಿತೆಯ ಎನ್ನೊಡೆಯ ೧

ತೊಡೆ ವಟುವೇಷವ ಸುರರ ರಕ್ಷಿಪೆನೆಂದು
ಕುಣಿತೆಯ ಎನ್ನೊಡೆಯ ।
ಪೊಡವಿಯ ಕ್ಷತ್ರಿಯ ವಂಶ ಸವರುವೆನೆಂದು
ಕುಣಿತೆಯ ಎನ್ನೊಡೆಯ ॥
ಮಡದಿಯ ಒಯ್ದನ ಕೆಡಹಿ ಲಂಕೆಯಲಿ
ಕುಣಿತೆಯ ಎನ್ನೊಡೆಯ ।

ಕಡುಮೂರ್ಖ ಕೌರವನನ್ನು ಕೊಲುವೆನೆಂದು
ಕುಳಿತೆಯ ಎನ್ನೊಡೆಯ ೨

ತ್ರಿಪುರರ ಸತಿಯರ ವ್ರತವ ಕೆಡಿಪೆನೆಂದು
ಕುಳಿತೆಯ ಎನ್ನೊಡೆಯ ।
ಉಪಸನಿಷದ್ವಾಹನ ತೇಜಿಯ ಬೆನ್ನಲಿ
ಕುಳಿತೆಯ ಎನ್ನೊಡೆಯ ।
ಕೃಪೆಯಿಂದಲಿ ಮನದೊಳು ನೆನೆವವರಲಿ
ಕುಳಿತೆಯ ಎನ್ನೊಡೆಯ ।
ಕಪಟನಾಟಕ ಸಿರಿ ಪುರಂದರವಿಠಲ ಕುಳಿತೆಯ ಎನ್ನೊಡೆಯ ೩

## ೧೭

ಕೇಶವ – ಮಾಧವ – ಗೋವಿಂದ ವಿಠಲೆಂಬ
ದಾಸಯ್ಯ ಬಂದ ಕಾಣೆ
ದೋಷರಹಿತ ನರವೇಷವ ಧರಿಸಿದ ದಾಸಯ್ಯ ಬಂದ ಕಾಣೆ ಪ.

ಖಳನು ವೇದವನೊಯ್ಯೆ ಪೊಳೆವ ಕಾನಾದ
ದಾಸಯ್ಯ ಬಂದ ಕಾಣೆ
ಘಳಿಲನೆ ಕೂರ್ಮ ತಾನಾಗಿ ಗಿರಿಯಪೊತ್ತ
ದಾಸಯ್ಯ ಬಂದ ಕಾಣೆ
ಇಳೆಯಕದ್ದಸುರನ ಕೋರೆದಾಡಿಯ ಅಳಿದ
ದಾಸಯ್ಯ ಬಂದ ಕಾಣೆ
ಛಲದಿ ಕಂಬದಿ ಬಂದು ಅಸುರನ ಸೀಳಿದ
ದಾಸಯ್ಯ ಬಂದ ಕಾಣೆ ೧

ಬಲಿಯ ದಾನವಬೇಡಿ ನೆಲವನಳೆದು ನಿಂದ
ದಾಸಯ್ಯ ಬಂದ ಕಾಣೆ
ಮಲೆತ ಕ್ಷತ್ರಿಯರ ಕುಲವ ಸಂಹರಿಸಿದ
ದಾಸಯ್ಯ ಬಂದ ಕಾಣೆ

ಲಲನೆಯನೊಯ್ಯೆ ತಾ ತಲೆ ಹತ್ತರನ
ಕೊಂದ ದಾಸಯ್ಯ ಬಂದ ಕಾಣೆ
ನೆಲಕೊತ್ತಿ ಕಂಸನ ಬಲವನಳಿದ ಮುದ್ದು
ದಾಸಯ್ಯ ಬಂದ ಕಾಣೆ ೨

ಷಂಡತನದಿ ಪೋಗಿ ಪುರವನುರುಪಿ
ಬಂದ ದಾಸಯ್ಯ ಕಾಣೆ
ಲಂಡರ ಸದೆಯಲು ತುರಗವನೇರಿದ ದಾಸಯ್ಯ ಬಂದ ಕಾಣೆ
ಹಿಂಡುವೇದಗಳೆಲ್ಲ ಅರಸಿ ನೋಡಲು ಸಿಗದ
ದಾಸಯ್ಯ ಬಂದ ಕಾಣೆ
ಪಾಂಡುರಂಗ ನಮ್ಮ ಪುರಂದರ ವಿಠಲ
ದಾಸಯ್ಯ ಬಂದ ಕಾಣೆ ೩

## ೧೮

ಕೊಟ್ಟಸಾಲ ಕೊಡದೆ ಭಂಡಾಟ ಮಾಡುತಿಹನೆ ।
ಎಷ್ಟು ಕೇಳಿದರೆನಗೆ ಓಯೆನ್ನದಿಹನೆ ಪ

ಭರದಿ ಕೇಳಲು ಜಲದಿ ಕಣ್ಣ ಬಿಡುತಿಹನೆ ।
ತರುಬಿ ಕೇಳಲು ಕಲ್ಲು ಹೊತ್ತು ನಿಂತಿಹನೆ ॥
ಮರಳಿ ಕೇಳಲು ಊರ ಅಡವಿ ಸೇರುವನೆ ।
ಇರುಳು ಹಗಲೆಲ್ಲ ಕಾಣಿಸಿಕೊಳ್ಳದಿಹನೆ ೧

ಕಂಡು ನಿಲ್ಲಿಸಲೊಂದು ಕಾಲಲಿ ನಿಲುವನೆ ।
ಕೊಂಡ ಸಾಲಕೆ ಕೊಡಲಿ ಪಿಡಿದು ನಿಲ್ಲುವನೆ ॥
ಉಂಡರಾಣೆಯೆಂದು ಉಪವಾಸವಿರುವನೆ ।
ಭಂಡನಂದದಿ ಠಕ್ಕುಟೌಳಿ ನಡಿಸುವನೆ ೨

ಕೆಟ್ಟ ಬಯಲುಲಜ್ಜೆ ಹೇವ ತೊರೆಯುವನೆ ।
ಕೊಟ್ಟು ಪೋಗೆನ್ನಲು ಕಲಿಯು ಆಗುವನೆ ॥
ಸೃಷ್ಟಿಗೊಡೆಯ ಶ್ರೀರಂಗಪಟ್ಟಣದ ಪುರಂದರ ।
ವಿಠಲೇಶನು ನಮ್ಮ ಪಶ್ಚಿಮರಂಗನಾಥನು ೩

## ೧೯

ಕೊಡಬಹುದೇ ಮಗಳ – ಸಮುದ್ರರಾಜ
ಕೊಡಬಹುದೇ ಮಗಳ ಪ

ನಡೆದರೆ ಬಡವಹಳೆಂಬ ಕುಮಾರಿಯ ।
ಹಿಡಿಬಿಟ್ಟಿ ಮಾಡಿ ಹರಿಗೆ ಸಿಂಧುರಾಜನು ಅ.ಪ
ಕುರುಹಬಲ್ಲವರಾರು, ಕುಲಗೋತ್ರವಾವುದೊ ।

ಅರಿತ ರಾಯರೊಳಗೆ ಆರ ಮಗನೊ ಇವ ।
ವರಶುಭಾಂಗಿಗೆ ತಕ್ಕ ವರನಹುದೆ ಇವ ।
ಹಿರಿಯರೆಂಬುದ ನೆರೆಹೊರೆಯೂ ಕಾಣದನಿವ ।
ಪರಪಂತಿಜನಕೆಲ್ಲ ಪ್ರಾಣಘಾತಕನಿವ ।
ನಿರುತ ಮೇಘವ ಪೋಲ್ವ ನೀಲಮೆಯ್ಯವನಿವ,
ಹಿರಿದಾದ ನಾಲ್ಕು ಹಸ್ತಗಳುಳ್ಳವನಿವ ।
ಅರುಣಚ್ಛಾಯೆಯ ರೇಖೆ ಅರಳಿಸಿ ಹಾರುವ ॥
ಗರುಡಹಕ್ಕಿಯ ನೆಚ್ಚಿದ – ಎದೆಯ ಮೇಲೆ ।
ಭರದಿ ಒದೆಯ ಮೆಚ್ಚಿದ – ಘೋರರೂಪ ।
ಧರಿಸಿ ಕೋಪದಿ ಹೆಚ್ಚಿದ – ಕರೆವ ಗೋವ ।
ಕರುಗಳ ಕೊರಳುಚ್ಚಿದ – ಸಂಸಾರದೊಳ್ ।
ಇರುತಿಹ ನಾರಿಯರ ಮನವೆಲ್ಲ ಬಿಚ್ಚಿದ ೧

ಅಡಿಗಡಿಗೆ ಹತ್ತು ಅವತಾರವ ಮಾಡಿದ ।
ಕಡುಕಪಟಿಯಲ್ಲದೆ ಭಾರಿ ಗುಣದವನಲ್ಲ ।
ಗಿಡದ ಮರೆಯಲಿದ್ದು ಕಪಿಯ ಕೊಂದನು ಹೊಲ್ಲ ।
ನಡತೆಯಲಿ ಸಲೆ ಜನಲಜ್ಜೆ ಇವನಿಗಿಲ್ಲ ।
ಹಿಡಿದು ಪೂತನಿ ಮೊಲೆಯುಂಡ ಚೌಪಟಮಲ್ಲ ।
ಮಡುಹಿದ ಮಾವನ ಮಧುರೆಯೊಳಗೆ ಖುಲ್ಲ ।
ಕೊಡೆಮಾಡಿ ಬೆಟ್ಟವ ಗೋಕುಲದೊಳಗೆಲ್ಲ ।
ಮಡದಿಯರುಡುಗೆಯ ಕದ್ದದ್ದು ಹುಸಿಯಲ್ಲ ॥
ಕಡಹದ ಮರವೇರಿದ – ಅವರ ಮಾನ – ।

ಕೆಡಿಸಿ ಭಂಡರ ಮಾಡಿದ – ದಧಿಕ್ಷೀರ – ।
ಗಡಿಗೆ ಸೂರೆಯ ಮಾಡಿದ – ಕಾಳಿಂಗನ – ।
ಮಡುವ ಕಲಕಿ ನೋಡಿದ – ಸ್ಯಂದನವನು ।
ನಡೆಸುವ ಕಾರಣ ನರಗೆ ಸಾರಥಿಯಾದ ೨

ಊದುತ ಕೊಳಲನರಣ್ಯದೊಳ್ ಗೋಗಳ ।
ಕಾದು ಕುಂಚಿಗೆ ಮಾಡಿ ಕಂಬಳಿ ಪೊದೆವನು ।
ಓದನವನು ಬೇಡಿ ಹೊಟ್ಟೆಯ ಹೊರೆದನು ।
ಯಾದವರೊಳಗಾಡಿ ಎಂಜಲನುಂಡನು ।
ಕ್ರೋಧದಿಂದಸುರರ ಕೊಂದು – ಕೊಂದಿಡುವನು ।
ಪಾದರಿ ಪೆಣ್ಣುಗಳೊಳಗಿರುತಿಪ್ಪನು
ಆದಿಯೆ ಇವಗಿಲ್ಲ ಎಂದೆಂದಿಗಿಪ್ಪನು ।
ಭೂದಿವಿಜರ ಕೂಡ ಭಿಕ್ಷಕೆ ಪೋಪನು ॥
ಮೇದಿನಿಯೊಳಗಿರುವ – ಮಸ್ತಕವು ಬೋ – ।
ಳಾದವರೊಳಗಿರುವ – ನೋಡಲು ಭೇದಾ – ।
ಭೇದದಂದದಿ ತೋರುವ – ಸಭೆಯೊಳಗೆ ।
ಬೈದರೆ ಮೈದೋರುವ ಶೇಷಶಾಯಿ – ।
ಯಾದಂಥ ಪುರಂದರ ವಿಠಲನೆಂದರಿಯದೆ ೩

## ೨೦

ದೇವಕಿನಂದ ಮುಕುಂದ ಪ

ನಿಗಮೋದ್ಧಾರ – ನವನೀತ ಚೋರ ।
ಖಗಪತಿವಾಹನ ಜಗದೋದ್ಧಾರ ೧

ಶಂಖ – ಚಕ್ರಧರ – ಶ್ರೀ ಗೋವಿಂದ ।
ಪಂಕಜಲೋಚನ ಪರಮಾನಂದ ೨

ಮಕರಕುಂಡಲಧರ – ಮೋಹನವೇಷ ।
ರುಕುಮಿಣಿವಲ್ಲಭ ಪಾಂಡವಪೋಷ ೩

ಕಂಸಮರ್ದನ – ಕೌಸ್ತುಭಾಭರಣ ।
ಹಂಸವಾಹನ ಪೂಜಿತ ಚರಣ ೪

ವರವೇಲಾಪುರ ಚೆನ್ನಪ್ರಸನ್ನ ।
ಪುರಂದರವಿಠಲ ಸಕಲಗುಣಪೂರ್ಣ ೫

## ೨೧

ಧರಣಿಗೆ ದೊರೆಯೆಂದು ನಂಬಿದೆ – ಇಂಥ – ।
ಪರಮಲೋಭಿಯೆಂದು ಅರಿಯೆ ಶ್ರೀಹರಿಯೆ ಪ

ಕಾಡಿಬೇಡುವರಿಗೆ ಕೊಡಲಾರದೆ ಅಂಜಿ ।
ಓಡಿ ನೀರೊಳು ಸೇರಿಕೊಂಡೆ ಬೇಗ ॥
ಹೇಡಿಯ ತೆರದಲಿ ಮೋರೆಯ ತೋರದೆ ।
ಓಡಿ ಅರಣ್ಯದಿ ಮೃಗಗಳ ಸೇರಿದೆ ೧

ಬಡವರ ಬಿನ್ನಪ ಲಾಲಿಸದಲೆ ಹಲ್ಲ ।
ಕಡುಕೋಪದಲಿ ತೆರೆದಂಜಿಸಿದೆ ॥
ತಡೆಯದೆ ಭಿಕ್ಷುಕನಾದರು ಬಿಡರೆಂದು ।
ಕೊಡಲಿಯ ಪಿಡಿದು ಕೋಡಗ ಹಿಂಡ ಕಾಯ್ದೆಯೊ ೨

ಉತ್ತಮನೆಂದರೆ ಮತ್ತೆ ಚೋರನಾದೆ ।
ಬತ್ತಲೆ ನಿಂತು ತೇಜಿಯನೇರಿದೆ ।
ಎತ್ತಪೋದರು ಬಿಡೆ ಬಿಡೆ ನಿನ್ನ ಪಾದವ ।
ಚಿತ್ತಜಜನಕ ಶ್ರೀ ಪುರಂದರವಿಠಲನೆ ೩

## ೨೨

ನರಸಿಂಹ ಮಂತ್ರ ಒಂದೇ ಸಾಕು –ಮಹಾ – ।
ದುರಿತಕೋಟಿಗಳ ಸಂಹರಿಸಿ ಭಾಗ್ಯವನೀವ ಪ

ಹಸುಳೆ ಪ್ರಹ್ಲಾದನ ತಲೆಗಾಯ್ದುದೀ ಮಂತ್ರ ।
ಅಸುರನೊಡಲ ಬಗೆದ ದಿವ್ಯಮಂತ್ರ ॥

ವಸುಧೆಯೊಳು ದಾನವರ ಅಸುವ ಹೀರಿದ ಮಂತ್ರ ।
ಪಶುಪತಿಗೆ ಪ್ರಿಯವಾದ ಮೂಲಮಂತ್ರ ೧

ದಿಟ್ಟ ಧ್ರುವರಾಯಗೆ ಪಟ್ಟಗಟ್ಟಿದ ಮಂತ್ರ ।
ಶಿಷ್ಟ ವಿಭೀಷಣನ ಪೊರೆದ ಮಂತ್ರ ॥
ತುಟ್ಟತುದಿಯೊಳಜಾಮಿಳನ ಸಲಹಿದ ಮಂತ್ರ ।
ಮುಟ್ಟಿಭಜಿಪರಿಗಿದು ಮೋಕ್ಷಮಂತ್ರ ೨

ಹಿಂಡು ಭೂತವ ಕಡಿದು ತುಂಡು ಮಾಡುವ ಮಂತ್ರ ।
ಕೊಂಡಾಡೆ ಲೋಕಕುದ್ದಂಡ ಮಂತ್ರ ॥
ಗಂಡುಗಲಿ ಪ್ರಚಂಡ ಹಿಂಡುದಾನವರ ।
ಗಂಡ ಪುರಂದರವಿಠಲನ ಮಹಾಮಂತ್ರ ೩

## ೨೩

ನಾರಾಯಣ ಗೋವಿಂದ – ಹರಿಹರಿ
ನಾರಾಯಣ ಗೋವಿಂದ ಪ

ನಾರಾಯಣ ಗೋವಿಂದ ಮುಕುಂದ
ಪರತರ ಪರಮಾನಂದ ಅ.ಪ

ಮೊದಲು ಮತ್ಸ್ಯನಾಗಿ ಉದಿಸಿ ಸೋಮನನು
ಸದೆದು ವೇದಗಳ ತಂದ ೧

ಮಂದರಗಿರಿಯಲಿ ಸಿಂಧುಮಥಿಸಿ ಸುಧೆ
ತಂದು ಭಕ್ತರಿಗುಣಲೆಂದ ೨

ಭೂಮಿಯ ಕದಿದಾ ಖಳನನು ಮರ್ದಿಸಿ
ಆ ಮಹಾಸತಿಯಳ ತಂದ ೩

ದುರುಳ ಹಿರಣ್ಯನ ಕರುಳುಬಗೆದು ತನ್ನ
ಕೊರಲೊಳಗಿಟ್ಟಾನಂದದಿಂದ ೪

ಪುಟ್ಟನಾಗಿ ದಾನಕೊಟ್ಟ ಬಲಿಯ ತಲೆ
ಮೆಟ್ಟಿ ತುಳಿದ ಬಗೆಯಿಂದ ೫

ಧಾತ್ರಿಯೊಳಗೆ ಮುನಿಪುತ್ರನಾಗಿ ಬಂದು
ಕ್ಷತ್ರಿಯರೆಲ್ಲರ ಕೊಂದ ೬

ಮಡದಿಗಾಗಿ ತಾ ಕಡಲನೆ ಕಟ್ಟಿ
ಹಿಡಿದು ರಾವಣನ ಕೊಂದ ೭

ಗೋಕುಲದೊಳು ಹುಟ್ಟಿ ಆಕಳ ಕಾಯ್ದ
ಶ್ರೀಕೃಷ್ಣನು ತಾ ಬಂದ ೮

ಛಲದಲಿ ತ್ರಿಪುರರ ಸತಿಯರ ವ್ರತದ
ಫಲವನಳಿದ ಬಗೆಯಿಂದ ೯

ಧರೆಯೊಳು ಪರಮನೀಚರ ಸವರಲು ಕು –
ದುರೆಯನೇರಿದ ಕಲಿ ಚೆಂದ ೧೦

ದೋಷದೂರ ಶ್ರೀ ಪುರಂದರ ವಿಠಲ
ಪೋಷಿಪ ಭಕ್ತರವೃಂದ ೧೧

## ೨೪

ನಾರಾಯಣ ನಿನ್ನ ನಾಮವನು ನೆನೆದರೆ ।
ಹಾರಿಹೋಹುದು ಪಾಪ ಜನ್ಮಜನ್ಮಾಂತರದಿ ।
ಶ್ರೀ ರಮಣ ನಿನ್ನ ಕೃಪೆಯಿತ್ತೆಮಗೆ ಮುಕ್ತಿಯ –
ದಾರಿ ತೋರಿಸೊ ಮುರಾರಿ ಪ

ಸಕಲ ವೇದ ಪುರಾಣ – ಶಾಸ್ತ್ರವನು ತಿಳಿದೋದಿ ।
ಭಕುತಿಯಿಂ ತಾಯ್ತಂದೆಗಳ ಚಿತ್ತವಿಡಿದರ ।
ರಕುಷಣೆಯ ಮಾಡಿ ಜಗದೊಳಗೆ ವಿಖ್ಯಾತ ಸುಕು –
ಮಾರ ತಾನೆನಿಸಿಕೊಂಡ ೧

ಪ್ರಕೃತಿಯಲಿ ಹೋಮಕೋಸ್ಕರ ಸಮಿಧೆ ತರಹೋಗಿ ।
ಸುಕರುಮಗಳಿಂದ ಚಾಂಡಾಲಿಯ ಕಂಡು ತಾ – ।
ಮೂಕನಾಗಿ ನಿಂದು ಮೈಮರೆದು ಪಾತಕಿಯು ಬಹ –
ದುರಿತವನು ತಾನರಿಯದೆ ೨

ನಿಲ್ಲು ನಿಲ್ಲೆಲೆ ಕಾಂತೆ, ನಿನಗೊಲಿದೆ ನೀನಾರೆ ।
ಸೊಲ್ಲಿಸೆನ್ನೊಡನೆ ಸತಿಯರ ಕುಲಕೆ ಕಟ್ಟಾಣಿ ।
ಚೆಲ್ಲೆನ್ನ ಮೇಲೆ ಕರುಣವನಿಂತು ಕೋಮಲೆಯೆ
ನಿಲ್ಲೆಂದು ಸೆರಗ ಪಿಡಿದ ೩

ಎಲೊ ವಿಪ್ರ ಕೇಳು ನಾ ಕುಲಹೀನೆ ನಮ್ಮ ಮನೆ ।
ಹೊಲನೆನದು ಗೋಮಾಂಸ ಚರ್ಮದಾ ಹಾಸಿಕೆಯು ।
ಎಲುವಿನಾ ರಾಶಿ ಒದರುವ ನಾಯ ಹಿಂಡುಗಳು –
ಬಹು ಘೋರಘೋರ ವಿಹುದು ೪

ಬಲೆಗೆ ಸಿಲ್ಕಿದ ಪಕ್ಷಿ ಬೇಟೆಗಾರನದಲೇ ? ।
ಕುಲವನ್ನು ಕೂಡೆ ನಾ ಕಾಮಿನೀರನ್ನಳೆ ।
ಚಲದಿಂದ ಬದುಕುವೆನು ಸುಖದಿಂದಲಿರುವೆ ನೀ
ಒಲವು ನನಗೊಂದೆ ಎಂದ ೫

ವ್ಯರ್ಥ ಎನ್ನೊಡನೆ ಮಾತೇತಕೆಲೊ ಹಾರುವಾ ।
ಚಿತ್ತ ನನ್ನಲ್ಲಿ ಇದ್ದರೆ ಹೋಗಿ ನೀ ನಿನ್ನ ।
ಹೆತ್ತ ತಾಯ್ತಂದೆಯರ ಕೇಳು ಸಮ್ಮತಿಸಿದರೆ –
ಮತ್ತೆ ನಿನಗೊಲಿವೆನೆನಲು ೬

ಅತ್ತ ಕಾಮಿನಿಯ ಒಡಗೊಡಿ ತನ್ನಯ ಪಿತನ ।
ಹತ್ತಿರಕೆ ಹೋಗಿ ಕೇಳಿದರೆ ಆತನು ಎಂದ ।
ಉತ್ತಮದ ಕುಲವನೀಡಾಡಿ ಈ ಪಾತಕಿಯ –
ಹಸ್ತಕೊಳಗಾಗದಲಿರೈ ೭

ಆಗದಾಗದು ನನ್ನ ಕುಲಬಂಧು – ಬಳಗವನು ।
ನೀಗಿ ನಿನ್ನೊಡನೆ ಕೂಡುವೆನೆಂಬ ಮತವೆನಗೆ ।

ನಾಗಭೂಷಣನ ಪಣೆಗಣ್ಣಿಲುರಿದನ ಬಾಣ
ತಾಗಿತೆನ್ನೆದೆಗೆ ಎಂದ ೮

ಕೂಗಿ ಹೇಳುವೆ ನಿನ್ನ ಕುಲವಳಿಯದಿರು ಎಂದ ।
ಹೋಗಿ ಕೂಡದೆ ನಿನ್ನ ಹೆತ್ತ ತಾಯ್ತಂದೆಗಳಿ – ।
ಗಾಗದಿದ್ದರೆ ಆಚೆಯಾ ಮನೆಯೊಳಗೆ ಹೋಗಿ
ಇಬ್ಬರೂ ಇರುವೆವೆಂದ ೯

ಹಾಲಂತ ಕುಲವ ನೀರೊಳಗದ್ದಿ ಪೂರ್ವದಾ ।
ಶೀಲವನ್ನಳಿದು ಸತಿಯಳ ಕೂಡಿ ತಾನು ಚಾಂ – ।
ಡಾಲಿತಿಗೆ ಹತ್ತು ಮಕ್ಕಳನು ಪಡೆಕೊಂಡವರ
ಲೀಲೆ ನೋಡುತಲಿ ಹಿಗ್ಗಿ ೧೦

ಬಾಳಿನಲ್ಲೀ ರೀತಿ ಅಜಮಿಳನು ಇರುತಿರಲು ।
ಕಾಲ ಬಂದೊದಗಿತ್ತು ಕರೆಯಿರೆನೆ ಪಾತಕನ ।
ಜೋಲುದುಟಿ ಡೊಂಕು ಮೋರೆಯ ಅಬ್ಬರದಿ ಯಮನ –
ಆಳುಗಳು ಬಂದರಾಗ ೧೧

ಎಡಗೈಯೊಳಗೆ ಪಾಶ ಹಿಡಿದು ಚಮ್ಮಟಿಗೆಗಳ ।
ಒಡನೆ ಜಾವಳಿನಾಯಿ ವಜ್ರಮೋತಿಯ ಕಾಯಿ ।
ತುಡಿಕಿರೋ ಕೆಡಹಿ ಕಟ್ಟಿರೋ ಪಾತಕನನೆಂದು
ಘುಡುಘುಡಿಸಿ ಬಂದರಾಗ ೧೨

ಗಡಗಡನೆ ನಡುಗಿ ಕಂಗೆಟ್ಟು ಅಜಮಿಳನು ತಾ ।
ಕಡೆಯ ಕಾಲಕೆ ಅಂಜಿ ಮಗನ ನಾರಗನೆಂದು ।
ಒಡನೊಡನೆ ಕರೆಯಲ್ಕೆ ಯಮನಾಳ್ಗಳೋಡಿದರು
ಮುಟ್ಟಿದುದು ಹರಿಗೆ ದೂರು ೧೩

ಕೊರಳ ತುಳಸಿಯ ಮಾಲೆಯರಳ ಪೀತಾಂಬರದ ।
ವರಶಂಖ ಚಕ್ರದ್ವಾದಶನಾಮಗಳನಿಟ್ಟ ।
ಹರಿಯ ದೂತರು ಅಂಜಬೇಡ ಬೇಡನ್ನುತಲಿ
ಹರಿದೋಡಿಬಂದರಲ್ಲಿ ೧೪

ಪುಂಡರೀಕಾಕ್ಷನೀ ಭೃತ್ಯನನು ಬಾಧಿಸುವ ।
ಲಂಡಿರಿವರಾರು ನೂಕಿರಿ ನೂಕಿರೆಂತೆಂದು ।
ದಂಡವನು ತೆಗೆದು ಬೀಸಾಡಿ ಯಮನವರಿಗು – ।
ದ್ದಂಡರಿವರೆಂದರಾಗ ೧೫

ತಂದೆ ಕೇಳಿರಿ ಒಂದು ಬಿನ್ನಪವ ಲಾಲಿಸಿರಿ ।
ಒಂದು ದಿನ ಹರಿಯೆಂದು ಧ್ಯಾನವನ್ನರಿಯ ನಾವ್ – ।
ಬಂದಾಗ ಆತ್ಮಜನ ನಾರಗನೆ ಎಂದೆನಲು
ಕುಂದಿದುವೆ ಇವನ ಪಾಪ ? ೧೬

ಹಂದೆ – ಕುರಿಗಳಿಗೆ ನಿಮಗಿಷ್ಟು ಮಾತುಗಳೇಕೆ ।
ನಿಂದಿರದೆ ಹೋಗಿ ನಿಮ್ಮೊಡೆಯನಿಗೆ ಪೇಳೆನಲು ।
ಸಂದಲಾ ಯಮಭಟರು ಅಜಮಿಳನ ಹರಿಭಟರು
ತಂದರ್ೈ ವೈಕುಂಠಕೆ ೧೭

ಮದ್ಯಪಾನವ ಮಾಡಿ ಪೆಂಗಳನು ಒಡಗೂಡಿ ।
ಅದ್ದಿದೆನು ನೂರೊಂದು ಕುಲವ ನರಕದೊಳೆಂದು ।
ಹದ್ದಿನಾ ಬಾಯೊಳಗಿನುರಗನಂತಜಮಿಳನು
ಇದ್ದನವ ನೆರೆಮರುಗುತ ೧೮

ವಿಪ್ರಕುಲದಲಿ ಹುಟ್ಟಿ ವೇದಶಾಸ್ತ್ರವನೋದಿ ।
ಮುಪ್ಪಾದ ತಾಯಿ – ತಂದೆಗಳೆಲ್ಲರನು ಬಿಟ್ಟು ।
ಒಪ್ಪಿ ಧಾರೆಯನೆರೆದ ಕುಲಸತಿಯ ಬಿಟ್ಟು ಕಂ –
ದರ್ಪನಾ ಬಲೆಗೆ ಸಿಕ್ಕಿ ೧೯

ವಿಪ್ರ ನಾನಾದರೂ ಜಗದಿ ನಿಂದ್ಯನು ಆಗಿ ।
ಇಪ್ಪನೀಪರಿಯೊಳೆನ್ನಂಥ ಪಾತಕಿಯಿಲ್ಲ ।
ತಪ್ಪಲಿಲ್ಲವೊ ಹಣೆಯಬರೆಹವಿದು ಭುವನದೊಳು
ಬೊಪ್ಪರೇ ವಿಧಿಯೆಂದನು ೨೦

ಇಳೆಯೊಳಗೆ ಶ್ರೀ ಪುರಂದರ ವಿಠಲನಾಮವನು ।
ನೆಲೆಯರಿತು ನೆನೆವರಿಗೆ ಯಮನ ಬಾಧೆಗಳಿಲ್ಲ ।

ಸುಲಭದಿಂದಲ್ಲಿ ಸಾಯುಜ್ಯಪದವಿಯು ಸತ್ಯ
ಬಲುನಂಬಿ ಭಜಿಸಿ ಜನರು ೨೧

## ೨೫

ನೀನೊಲಿದರೇನಾಹುದು – ಶ್ರೀಹರಿಯೆ – ।
ಮುನಿಯೆ ನೀನೆಂತಾಹುದು ಪ

ವಾಲಿ ಬಲ್ಲಿದ ವಾನರರಿಗೆ – ಶ್ರೀಹರಿಯೆ
ನೀ ಮುನಿದು ಎಚ್ಚವನ ಕೊಂದೆ ।
ಮೇಲೆ ಕಿಷ್ಕಿಂಧೆಯ ಪುರದ ಸುಗ್ರೀವನ
ವಾಲಿಯ ಪದದಲ್ಲಿಟ್ಟೆ ೧

ಮೂರು ಲೋಕವನಾಳುವ – ರಾವಣನ
ಊರ ಬೂದಿಯ ಮಾಡಿದೆ ।
ವಾರಿಧಿಯ ಒಳಗಿಪ್ಪ ಲಂಕೆಯ ವಿಭೀಷಣಗೆ
ಸ್ಥಿರಪಟ್ಟವನು ಕಟ್ಟಿದೆ ೨

ಪನ್ನಗವನುದ್ಧರಿಸಿದೆ – ಕೌರವರ –
ಹನ್ನೊಂದಕ್ಷೋಣಿ ಬಲವ ।
ಛಿನ್ನಛಿದ್ರವ ಮಾಡಿ ಅವರನ್ನು ಮಡುಹಿದೆ
ಪಾಂಡವರ ಪದವಿಯಲಿಟ್ಟೆ ೩

ಹಿರಣ್ಯಕನು ಸುತನ ಕೊಲಲು – ಆಗ ನೀ
ಕರುಣದಿಂದೋಡಿ ಬಂದೆ ।
ಮರಣವೈದಿಸಿ ಪಿತನ ತರಳ ಪ್ರಹ್ಲಾದನನು
ಶರಣರೊಳು ಸರಿಮಾಡಿದೆ ೪

ಭಾಷೆ ಪಾಲಿಪನೆನುತಲಿ – ನಾ ಬಹಳ
ಆಸೆ ಮಾಡುತಲಿ ಬಂದೆ ।
ಶೇಷಗಿರಿವಾಸ ಪುರಂದರವಿಠಲ ದಾರಿದ್ರ್ಯ
ನಾಶಮಾಡೆನ್ನ ಸಲಹೊ ೫

## ೨೬

ನೆಲೆಸೆನ್ನ ಹೃದಯ ಮಂದಿರದಿ – ಶ್ರೀ ಹರಿಯೆ ನೀ ।
ಸಲಿಸೆಮ್ಮ ಮನದಿಷ್ಟ ಅನುದಿನ ದಯದಿ ಪ

ಸಿರಿವಿರಂಚಿ ಮರುತ್ಸುಪರ್ಣ ಪು – ।
ರಾರಿವಂದಿತ ಚರಣ ಸರಸಿಜ ॥
ಪರಮಭಕ್ತ ಪ್ರಹ್ಲಾದ ನಾರದ ।
ವರಪರಾಶರ ಮುಖಸುಸನ್ನುತ ಅ.ಪ

ನಾರುವಿ ಭಾರವ ಪೊರುವಿ – ಬಲು – ।
ಬೇರುಗಳನೆ ಕಿತ್ತು ಮೆಲುವಿ – ಕರಿ – ।
ವೈರಿ ರೂಪಗೊಂಡ ಗರುವಿ – ಬ್ರಹ್ಮ – ।
ಚಾರಿ ಖಳರ ಕತ್ತರಿಸುವಿ ।
ವೀರದಶರಥಸುತ ಸುರಾರ್ಚಿತ ।
ಜಾರತನದಲಿ ವ್ರತವ ಕೆಡಿಸುತ ।
ತೋರಿ ಮೆರೆವನೆ ತರಳ ಬಲು ಗಂ – ।
ಭೀರ ಕುದುರೆಯನೇರಿ ಮೆರೆವನೆ ೧

ಅನಿಮಿಷ ಮಂದರೋದ್ಧರಣ – ನೀನಾ – ।
ವನಗಪಂಚಾನನವದನ – ವಾ – ।
ಮನ ದಾನವರ ಕೊಯ್ದು ಕದನ – ಹೀನ – ।
ದನುಜರಾವಣ ಸಂಹರಣ ॥
ಧೇನುಕಾಸುರ ಶಕಟಮರ್ದನ ।
ಜ್ಞಾನದಾನ ವಿಡಂಬನಾನಕ ।
ಭಾನುಮಸ್ತಕ ನೀಲವರಕರ ।
ದೀನಜನಸಂತ್ರಾಣ ನಿಪುಣನೆ ೨

ಮಚ್ಛಕಚ್ಛಪ ಸ್ವಚ್ಛಕಿರನೆ – ಬಲು – ।
ಅಚ್ಚ ಶಿಶುಮೊರೆ ಕೇಳಿದವನೆ ॥
ಸ್ವೇಚ್ಛೆಯ ವಟು ಪರಶುಕರನೆ – ರಾಮ – ।

ವತ್ಸಾಸುರನ ವಧಿಸಿದವನೆ ॥
ತುಚ್ಛ ಜನರಿಗೆ ಕಪಟಕಾರಣ ।
ಹೆಚ್ಚಿನಶ್ವದ ಮೇಲೆ ಹೊಳೆವನೆ ।
ಮೆಚ್ಚಿ ಪುರಂದರ ವಿಠಲನ ಪರ – ।
ಮಾಚ್ಯುತದ ಪದವೀವ ದೇವನೆ ೩

## ೨೭

ನೋಡು ನೋಡು ನೋಡು ಕೃಷ್ಣಾ ।
ಹೇಗೆ ಮಾಡುತಾನೆ ।
ಬೇಡಿಕೊಂಡರೆ ಬಾರ ಕೃಷ್ಣ ।
ಓಡಿ ಹೋಗುತಾನೆ ಪ

ಕಂಡಕಂಡವರ ಮೇಲೆ ಕಣ್ಣು ಹಾಕುತಾನೆ ।
ಉಂಡು ಉಂಡು ಮುಸುಕನಿಟ್ಟು ಮಲಗಿಕೊಳ್ಳುತಾನೆ ॥
ಲಂಡತನವ ಮಾಡಿ ಮಾಡಿ ಮಣ್ಣ ಗೋರುತಾನೆ ।
ಭಂಡು ಮಾಡಿ ಬಾಗಿಲೊಳಗೆ ಚೀರಿಕೊಳ್ಳುತಾನೆ ೧

ಕರುಣವಿಲ್ಲದಲೆ ಬಂದು ಕಾಲಲೊದೆಯುತಾನೆ ।
ಶರಣು ಹೊಕ್ಕರೆಯು ತಾನು ಕೊಡಲಿ ಮಸೆಯುತಾನೆ ॥
ಹರಿಯುವ ವಾನರರ ಕೂಡ ಹಾರಾಡುತಾನೆ ।
ಸಿರಿಕೃಷ್ಣ ಹಾಲು – ತುಪ್ಪ ಸೂರೆಮಾಡುತಾನೆ ೨

ಬಾಲೆಯರಿಗೆ ವರವನಿತ್ತು ಪುರವ ಕೆಡಿಸುತಾನೆ ।
ನೀಲಗುದುರೆಯನೇರಿ ಹಾರಿಸಾಡುತಾನೆ ॥
ಬಾಲಕರ ಕೂಡಿಕೊಂಡು ಕುಣಿದಾಡುತಾನೆ ।
ಲೋಲ ಪುರಂದರ ವಿಠಲ ತಾನು ಕುಣಿಯುತಾನೆ ೩

## ೨೮

ಪವಡಿಸು ಪರಮಾತ್ಮನೆ ಸ್ವಾಮಿ
ಭವರೋಗ ವೈದ್ಯನೆ ಭಕ್ತರ ಪ್ರಿಯನೆ ಪ

ಕುಂದಣದಿ ರಚಿಸಿದ ಸೆಜ್ಜೆಯ ಮನೆಯಲಿ
ಇಂದ್ರನೀಲ ಮಣಿಮಂಟಪದಿ ॥
ಚಂದ್ರಕಾಂತಿಯ ಠಾಣದೀವಿಗೆ ಹೊಳೆಯಲು
ಸಿಂಧುಶಯನ ಆನಂದದಿಂದಲಿ ೧

ತೂಗುಮಂಚದಿ ಹಂಸತೂಲದ ಹಾಸಿಗೆ
ನಾಗಸಂಪಿಗೆಯ ಹೂವಿನ ಒರಗು ॥
ಸಾಗರಸುತೆಯ ಸಮ್ಮೇಳದಲಿ ನಿಜ
ಭೋಗವ ಪಡುತ ಓಲಾಡುತಿರು ೨

ಸದ್ದಡಗಿತು ಗಡಿಯಾರ ಸಾರಿತು ಬೀಗ
ಮುದ್ರೆಗಳಾಗಿವೆ ಬಾಗಿಲಿಗೆ ॥
ತಿದ್ದಿದ ಧವಳ ಶಂಖಗಳ ನಾದದಿಂದ
ಪದ್ಮನಾಭ ಶ್ರೀ ಪುರಂದರವಿಠಲ ೩

## ೨೯

ಬಣ್ಣಿಸಲಳವೇ ನಿನ್ನ ಪ

ಬಣ್ಣಿಸಲಳವಲ್ಲ ಭಕುತವತ್ಸಲ ದೇವ
ಪನ್ನಗಶಯನ ಪಾಲ್ಗಡಲೊಡೆಯನೆ ರಂಗ ಅ.ಪ

ಅಸಮ ಪರಾಕ್ರಮಿ ತಮನೆಂಬ ದೈತ್ಯನು
ಶಶಿಧರನ ವರದಿ ಶಕ್ರಾದ್ಯರಿಗಳುಕದೆ
ಬಿಸಜಸಂಭವನ ಠಕ್ಕಿಸಿ ನಿಗಮವ ಕದ್ದು
ವಿಷಧಿಯೊಳಡಗಿರಲ್ ಒದಗಿ ಬಂದಮರರು
ವಸುಧೀಶ ಕಾಯಬೇಕೆಂದೆನಲವನ ಮ –
ರ್ದಿಸಿ ವೇದಾವಳಿಯ ತಂದು ಮೆರೆದ ದಶ
ದಿಸೆಯೊಳು ಬೊಮ್ಮಗಂದು ವೇದವ ಕರು
ಣಿಸಿದೆ ಕಂಜಾಕ್ಷ ಕೇಶವ ದಯಾಸಿಂಧು ೧

ಇಂದ್ರಾದಿ ಸಕಲ ದೇವತೆಗಳೆಲ್ಲರು ದೈತ್ಯ
ವೃಂದವೊಂದಾಗಿ ಮತ್ಸರವ ಮರೆದು ಕೂಡಿ
ಬಂದು ನೆರೆದು ಮುರಹರ ನಿನ್ನ ಮತದಿಂದ
ಮಂದರಾದ್ರಿಯ ಕಡೆಗೋಲ ಗೈದತುಳ ಫ
ಣೀಂದ್ರನ ತನು ನೇಣಿನಂದದಿ ಬಂಧಿಸಿ ॥
ಸಿಂಧು ಮಥಿಸುತಿರಲು ಘನಾಚಲ
ವಂದು ಮುಳುಗಿ ಪೋಗಲು ಬೆನ್ನಾಂತು ಮು
ಕುಂದ ನೆಗಹಿದೆ ಸುರರು ಜಯ ಜಯವೆನಲು ೨

ಖಳಶಿರೋಮಣಿ ಕನಕಾಕ್ಷನೆಂಬಸುರ ನಿ
ನ್ನೊಳು ಸೆಣಸುವೆನೆಂಬ ಗರುವದಿಂದಲಿ ಬಹು
ಬಲದಿಂದುದ್ಧಟನಾಗಿ ದಿವಿಜರನಂಜಿಸಿ
ಇಳೆಯ ಕದ್ದು ರಸಾತಳದೊಳಗಿರೆ ನಿನ್ನ
ಪೊಳೆವ ಕೋರೆಗಳಿಂದ ತಿವಿದು ರಕ್ಕಸನ ಅ
ಪ್ಪಳಿಸಿ ಕೊಂದವನ ದಿಂಡು ಗೆಡಹಿ ಮಹೀ
ಲಲನೆಯೊಡನೆ ಕೈಕೊಂಡು ಪಾಲಿಸಿದೆ ಪೂ
ಮಳೆಗರೆದರು ಅಮರರು ನೆಲೆಗೊಂಡು ೩

ಹಗಲಿರುಳಳಿವಿಲ್ಲದಸುರ ಕಶಿಪು ತನ್ನ
ಮಗನ ಹರಿಯ ತೋರೆಂದಧಿಕ ಬಾಧಿಸುತಿರೆ
ಬಗಿದು ಕಂಬವನೊಡೆದದಧಿಕ ರೋಷಾಗ್ನಿ ಕಾ
ರ್ಬೊಗೆ ಸೂಸಿ ಗಗನಮಂಡಲ ಧಗ – ಧಗಧಗ
ಧಗಿಪ ಪ್ರಜ್ವಾಲೆಯನುಗುಳಿ ಹಿರಣ್ಯಕನ ಕೂ
ರುಗುರಿಂದೊಡಲ ಸೀಳಿ ಕರುಳಮಾಲೆ
ತೆಗೆದು ಕಂಠದಲಿ ತಾಳಿ ಒಪ್ಪಿದೆ ನರ
ಮೃಗರೂಪೀ ತ್ರಾಹಿಯೆನಲು ಶಶಿಮೌಳಿ ೪

ಕುಲಿಶಧರನ ಗೆದ್ದು ಕುವಲಯದೊಳು ಭುಜ
ಬಲವಿಕ್ರಮದಲಿ ಸೌಭಾಗ್ಯದುನ್ನತಿಯಿಂದ
ಬಲಿ ವಾಜಿಮೇಧ ಗೆಯ್ಯಲು ವಟುವೇಷದಿಂ
ದಿಳಿದು ತ್ರಿಪಾದ ಭೂಮಿಯ ದಾನವ ಬೇಡಿ

ಬಲುಹಮ್ಮ ಮುರಿಯಬೇಕೆಂದವನ ಶಿರಮೆಟ್ಟಿ ॥
ನೆಲನ ಈರಡಿಮಾಡಿದೆ ಚರಣವಿಟ್ಟು
ಜಲಜಜಾಂಡವನೊಡೆದೆ ಅಂಗುಷ್ಟದಿ
ಸುಲಲಿತ ಸುಮನಸ ನದಿಯ ನೀ ಪಡೆದೆ ೫

ಪೊಡವಿಪತಿಗಳೊಳಗಧಿಕ ಕಾರ್ತವೀರ್ಯ
ಕಡುಧೀರ ದೇವ ದೈತ್ಯರಿಗಂಜದವನ ಬೆಂ
ಬಿಡದೆ ಸಂಗ್ರಾಮದೊಳಧಿಕ ಸಮರ್ಥನ
ಹೊಡೆದು ತೋಳ್ಗಳ ಕುಟ್ಟಿ ಕೆಡಹಿ ಆಗಸದೊಳು
ಮೃಢಮುಖ್ಯ ದೇವಸಂತತಿ ನೋಡೆ ಕ್ಷತ್ರಿಯರ
ಪಡೆಯನೆಲ್ಲವ ಸವರಿ ಮಾತೆಯ ಶಿರ
ಕಡಿದು ತತ್ಪತಿಗೆ ತೋರಿ ಪಿಡಿದೆ ಗಂಡು
ಗೊಡಲಿಯ ಕರದಿ ಬಲ್ಲಿದ ದನುಜಾರಿ ೬

ದಶರಥರಾಯ ಕೌಸಲ್ಯಾನಂದನನಾಗಿ
ಋಷಿ ವಿಶ್ವಾಮಿತ್ರನಧ್ವರವ ರಕ್ಷಿಸಿ ಘನ
ವಿಷಕಂಠಧನುವ ಖಂಡಿಸಿ ಜಾನಕಿಯ ತಂದು
ತ್ರಿಶಿರದೂಷಣ ಖರರಳಿದು ವಾಲಿಯನಂದು
ನಿಶಿತಾಸ್ತ್ರದಿಂದ ಸಂಹರಿಸಿ ಸಾಗರವ ಬಂ
ಧಿಸಿ ರಾವಣನ ಶಿರವ ಕತ್ತರಿಸಿ ರಂ
ಜಿಸುವ ಲಂಕಾಪುರವ ವಿಭೀಷಣಗೆ
ಎಸೆವ ಪಟ್ಟವ ಕಟ್ಟಿದೆಲೆ ದೇವಗರುವ ೭

ದೇವಕಿ ವಸುದೇವರಲ್ಲಿ ಜನಿಸಿ ಲೋಕ
ಪಾವನಗೆಯ್ದು ಪನ್ನಗನ ಪೆಡೆಯ ಮೆಟ್ಟಿ
ಗೋವಳನಾಗಿ ಗೋವರ್ಧನ ಗಿರಿಯೆತ್ತಿ
ಮಾವ ಮಲ್ಲರ ಕೊಂದು ಪಾರಿಜಾತವ ತಂದು
ಆ ವಿಪ್ರನಲಿ ಓಡಿಪೋದಪತ್ಯವನಿತ್ತ
ತಾವರೆದಳಸುನೇತ್ರ ತ್ರಿಭುವನ ಸಂ
ಜೀವ ಪರಮ ಪವಿತ್ರ ಶ್ರೀ ರುಕ್ಮಿಣಿ
ದೇವಿ ಮನೋಹರ ಶುಭನೀಲಗಾತ್ರ ೮

ಸರಸಿಜಾಸನ ಭವ ಇಂದ್ರಾದಿಗಳುಕದೆ
ದುರುಳ ದಾನವರಿರಲಂದು ಖೇಚರದೊಳು
ನಿರುಪಮ ನೀನೆ ಒಂದೊಂದು ರೂಪಗಳಿಂದ
ಹರಗೆ ಸಹಾಯವಾಗಿ ದನುಜಸ್ತ್ರೀಯರ ವ್ರತ
ಪರಿಹಾರ ಮಾಡಿ ಆಯಾಸವಿಲ್ಲದಲೆ ಮು
ಪ್ಪುರವ ಅಳಿದ ನಿಸ್ಸೀಮ ಅಖಿಳಶ್ರುತಿ
ಯರಸೆ ಕಾಣದ ಮಹಿಮ ಹೇ ಸಾಮಜ
ವರದ ಸುಪರ್ಣವಾಹನ ಸಾರ್ವಭೌಮ ೯

ಮಣಿಮಯ ಯುಕ್ತ ಆಭರಣದಿಂದೆಸೆವ ಲ
ಕ್ಷಣವುಳ್ಳ ದಿವ್ಯ ವಾಜಿಯನೇರಿ ಧುರದೊಳು
ಕುಣಿವ ಮೀಸೆಯ ಘೋರವದನ ಖಡ್ಗ ಚರ್ಮ
ವನು ಕೊಂಡು ದ್ರುಹಿಣಾದಿಗಳು ಪೊಗಳಲು ಕಲಿ
ದನುಜರೆಲ್ಲರನೊಂದೆ ದಿನದೊಳು ಸವರಿದ ॥
ರಣಭಯಂಕರ ಪ್ರಚಂಡ ಮೂಜಗದೊಳು
ಎಣೆಗಾಣೆನೆಲೊ ಉದ್ದಂಡ ಕಲ್ಕಿ ದಿನ
ಮಣಿಕೋಟಿತೇಜ ದುಷ್ಕೃತಕುಲ ಖಂಡ ೧೦

ಚಿತ್ತಜನಯ್ಯನೆ ಚಿನ್ಮಯ ಗಾತ್ರನೆ
ಉತ್ತಮ ದರ ಚಕ್ರ ಗದೆ ಜಲಜಾಂಕನೆ
ಸುತ್ತಲು ಅರಸಲು ನಿನಗೆಲ್ಲಿ ಸರಿಕಾಣೆ
ಹೊತ್ತು ಹೊತ್ತಿಗಾದಿತ್ಯರ ಬಿನ್ನಪ ಕೇಳಿ
ಹತ್ತವತಾರದಿ ಅಸುರರ ಮಡುಹಿದೆ
ನಿತ್ಯ ತ್ರಿಸ್ಥಾನವಾಸವಾಗಿಹ ಸರ್ವ
ಭಕ್ತರ ಮನೋವಿಲಾಸ ಸಲಹೋ ಪುರು
ಷೋತ್ತಮ ಪುರಂದರ ವಿಠಲ ತಿರುಮಲೇಶ ೧೧

## ೩೦

ಬಂದದೆಲ್ಲವೂ ಬರಲಿ – ಗೋ –
ವಿಂದನ ದಯೆ ನಮಗಿರಲಿ ಪ

ಮಂದರಧರ ಗೋವಿಂದ ಮುಕುಂದನ
ಸಂದರುಶನ ನಮಗೊಂದೇ ಸಾಲದೆ ? ಅ.ಪ

ಆರು ಅರಿಯದಿರಲೆನ್ನ – ಮುರಾರಿಯು ವರದ ಪ್ರಸನ್ನ
ತೋರುವ ದುರಿತದ ಬೆನ್ನ – ಭವಹಾರಿ ಕೃಪಾಂಬುಧಿ ಚೆನ್ನ ॥
ಶ್ರೀರಮಣನ ಶ್ರೀಚರಣ ಸೇವಕರಿಗೆ
ಘೋರಯಮನು ಶರಣಾಗತನಲ್ಲವೆ ? ೧

ಅರಗಿನ ಮನೆಯೊಳಗಂದು ಪಾಂಡವರನು ಕೊಲಬೇಕೆಂದು
ದುರುಳ ಕುರುಪ ಕಪಟದಲಿ ಹಾಕಿರುತಿರೆ ಆ ಕ್ಷಣದಲಿ ॥
ಹರಿಕೃಪೆಯವರಲ್ಲಿದ್ದ ಕಾರಣ
ದುರಿತವೆಲ್ಲ ಬಯಲಾದುದಲ್ಲವೆ ? ೨

ಸಿಂಗನ ಪೆಗಲೇರಿದಗೆ – ಕರಿಭಂಗವೇಕೆ ಮತ್ತವಗೆ ।
ರಂಗನ ದಯವುಳ್ಳವಗೆ – ಭವಭಂಗದ ಭೀತಿಯ ಹಂಗೆ ॥
ಮಂಗಳ ಮಹಿಮ ಶ್ರೀ ಪುರಂದರ ವಿಠಲನ
ಹಿಂಗದ ದಯೆವೊಂದಿದ್ದರೆ ಸಾಲದೆ ? ೩

## ೩೧

ಬಲಿಯ ದಾನವಬೇಡಿ । ಚೆಲುವಾಕಾರವಾಗಿ ।
ನೆಲನಾ ನೀರಡಿ ಮಾಡಿದಡಾ । ಲಲನೆ ತೊಡಿಯಾಲಿಟ್ಟು
ಶಿರ ವನೊರೆಸುತ್ತ । ಮೊಲೆಯಾನೂಡುವಾ ಪುಣ್ಯ ಹೇಗೆ
ಪಡೆದಾಳೋ । ಮಗಾನೆಂದು ಪ

ಮಗನೆಂದಾಡಿಸುವಾಳು । ಮೊಗಾನೋಡಿ ನಗುವಾಳು ।
ಮಿಗೆ ಹರೂಷದಲಿ ಲೋಲಾಡುವಾಳೂ ।
ಜಗಾದುದರನ್ನ । ಮಗನೆಂದು ರಕ್ಷಿಸಿ ।
ಬಿಗಿದಪ್ಪೊ ಪುಣ್ಯ ಹೇಗೆ ಪಡದಳೊ ೧

ಪಶೂಪಾಲೆಯರೂ । ಬ್ರಂಹ್ಮವನೂ ನೂರಮುನಿಗಳು ।
ವಸುಧಯ ಮಲುಳಿದಾವರೆಲ್ಲಾರು । ಶಶಿಮೌಖಿಸಾವಿರಾ ।

ವರಹಾವಿತ್ತವಾನೆಂದೂ । ಕೊಸಾರಾನಿಡುವಾ ಪುಣ್ಯ
ಹೇಗೆ ಪಡದಾಳೊ ೨

ಸಾಗರ ಸುತಿಯಾರು । ಭೋಗಿ ಶಯನನಾ ।
ಯೋಗನಿದ್ರೆಯೊಳಾದ್ಯ ದೇವನಾ ।
ಆಗಮಾ ಶ್ರುತಿಗಳು । ಆರಾರು ಕಾಣದ ವಸ್ತುವ ।
ತೂಗಿದಾಳೆ ಪುಣ್ಯ ಹೇಗೆ ಪಡದಳೋ ೩

ಕಾಲಲಂದುಗೆ ಕಿಂಕಿಣಿ ಹೊನ್ನ ಕಿರುಗೆಜ್ಜೆ ।
ಹಾರಾಸರದ ಕೊರಳಾ ಪದಕಾ । ಬಾಲದೊಡಿಗೆಸಮ್ಮ
ಬಾಲನಯತ್ತಿಕೊಂಡು । ಹಾಲಕುಡಿಸುವಾ ಪುಣ್ಯ
ಹೇಗೆ ಪಡದಳೊ ೪

ತೋಳಂನಾಡೆಲೊ ಕೃಷ್ಣ ತೋಳಂನಾಡಿಸುತಾಲಿ ।
ಭಾಮೆರುಕುಮಿಣಿ ಬಿಗಿದಪ್ಪುವ ।
ಭಾಮೆರುಕುಮಿಣಿ ಬಿಗಿದಪ್ಪುವಾ ಬಾಲನಾ ತೊಳಂನಾಡಿಸುವ
ಪುಣ್ಯ ಹೇಗೆ ಪಡದಾಳೊ ೫

ಆನೆಯಾಡೆಲೊ ಕೃಷ್ಣ । ಆನೆಯಾಡೆನುತಲಿ
ರಾಯರಾಯರೂಗಾಗೆಲಿದಂತ । ರಾಯಾ ರಾಯಾ
ಕೂ ಗಾಲಾ ಪಟ್ಟದಾನೆಯಾಡಿಸುವ ಪುಣ್ಯ
ಹೇಗೆ ಪಡದಾಳೋ ೬

## ೩೨

ಭಯ ನಿವಾರಣವು ಶ್ರೀ ಹರಿಯ ನಾಮ ।
ಜಯಪಾಂಡುರಂಗವಿಠಲ ನಿನ್ನ ನಾಮ ಪ

ಧಾರಿಣೀದೇವಿಗಾಧಾರವಾಗಿಹ ನಾಮ ।
ನಾರದರು ನಲಿನಲಿದು ನೆನೆವ ನಾಮ ।
ಘೋರಪಾತಕಿ ಅಜಾಮಿಳನ ಸಲಹಿದ ನಾಮ ।
ತಾರಕವು ಬ್ರಹ್ಮ - ಭವರಿಗೆ ನಿನ್ನ ನಾಮ ೧

ಮೊರೆಯಲಾಲಿಸಿ ಮುನ್ನ ಗಜವ ಸಲಹಿದ ನಾಮ ।
ಕರುಣದಿಂ ದ್ರೌಪದಿಯ ಕಾಯ್ದ ನಾಮ ।
ಮರುಗುತಿಹ ಧ್ರುವನ ಉನ್ನತನ ಮಾಡಿದ ನಾಮ ।
ಪರತತ್ತ್ವ ಇಹಕಲ್ಲವೇ ನಿನ್ನ ನಾಮ ೨

ಚರಣದಲಹಲ್ಯೆಯನು ಸೆರೆಯ ಬಿಡಿಸಿದ ನಾಮ ।
ಕರುಣದಲಿ ಪ್ರಹ್ಲಾದನನು ಕಾಯ್ದ ನಾಮ ।
ತೊರೆಯಲಕ್ರೂರನಿಗೆ ನಿಜವ ತೋರಿದ ನಾಮ ।
ಸ್ಮರಿಪ ಜನರಿಗೆ ಸಮಸ್ತವನಿತ್ತ ನಾಮ ೩

ಚಂದ್ರಶೇಖರ ಗಿರಿಜೆಗೊರೆದ ಸಿರಿಹರಿನಾಮ ॥
ಬಂದಾ ವಿಭೀಷಣನ ಪಾಲಿಸಿದ ನಾಮ ।
ಕಂದಮುಚುಕುಂದನಿಗೆ ಕಾಮಿತವನಿತ್ತ ನಾಮ ।
ಸಂದ ಪಾಂಡವಪಕ್ಷ ಪಾವನವು ನಾಮ ೪

ಅಖಿಳವೇದಪುರಾಣ ಅರಸಿಕಾಣದ ನಾಮ ।
ಸಕಲ ಯೋಗಿಜನಕೆ ಸೌಖ್ಯ ನಾಮ ॥
ಪ್ರಕಟಿಸಲು ಜಗವ ಪಾವನವ ಮಾಡಿದ ನಾಮ ।
ರುಕುಮಿಣೀಯರಸ ವಿಠಲ ನಿನ್ನ ನಾಮ ೫

ಭಕ್ತಿಯಲಿ ನೆನೆವರನು ಎತ್ತಿ ಸಲಹುವ ನಾಮ ।
ಮುಕ್ತಿ ಮಾರ್ಗಕೆ ಯೋಗ್ಯ ಹರಿ ನಿನ್ನ ನಾಮ ।
ಎತ್ತರಕೆ ಏರಿಪುದು ಸ್ವಾಮಿ ನಿನ್ನಯ ನಾಮ ।
ಚಿತ್ತಜನ ಪೆತ್ತ ಶ್ರೀಹರಿಯ ನಾಮ ೬

ವಾರಿಜಾನನೆ ತುಳಸಿಗೊಲಿದ ಹರಿನಾಮ ಕಾ – ।
ವೇರಿ ಮಧ್ಯದಲಿ ನೆಲಸಿದ ನಿನ್ನ ನಾಮ ॥
ಕ್ಷೀರಸಾಗರದಲ್ಲಿ ಶಯನವಾಗಿಹ ನಾಮ ।
ನಾರಾಯಣಾ ಕೃಷ್ಣ ಹರಿ ನಿನ್ನ ನಾಮ ೭

ಹೊಂದಿದ್ದ ಭಕ್ತವೃಂದವ ಸಲಹಿದಾ ನಾಮ ।
ತಂದು ಅಮೃತವ ಸುರರಿಗೆರೆದ ನಾಮ ॥

ಅಂದಂಬರೀಷನನು ಕಾಯ್ದ ಶ್ರೀ ಹರಿನಾಮ ।
ತಂದೆ ಪುರಂದರವಿಠಲ ಹರಿ ನಿನ್ನ ನಾಮ ೮

## ೩೩

ಮಂದರಧರ ದೇವ ಮೊರೆಹೊಕ್ಕವರ ಕಾಯ್ವ ಪ

ಮಂದಾಕಿನಿಯ ಪಿತ ಮಾವ ಕಂಸನ ಹೃತ ।
ಸುಂದರ ಶಶಿವದನ ರಂಗಯ್ಯ ಅ.ಪ

ಕಣ್ಣು ನೋಟದಿ ಚೆಲುವ, ಕಮಠರೂಪದಿ ನಲಿವ ।
ಹೆಣ್ಣ ಮೊರೆಯ ಕೇಳಿ ಹಿರಣ್ಯನುದರ ಸೀಳಿ ॥
ಮಣ್ಣು ಬೇಡಿ ಬೆಳೆದೆ – ಕೃಷ್ಣಯ್ಯ ॥
ಹೊನ್ನ ಕೊಡಲಿಯ ಪಿಡಿದು ಹತ್ತುಗ್ರೀವನ ಕಡಿದು ।
ಚಿಣ್ಣರ ಒಡಗೂಡಿ ಚಪಲೆಯರ ವ್ರತಗೆಡಿಸಿ ।
ಚೆನ್ನರಾವುತನಾದೆಯೊ – ರಂಗಯ್ಯ ೧

ಗೋಚರನಂದದಲಿ – ಗಿರಿಯ ತಾಳಿದೆ ಬೆನ್ನಿನಲಿ ।
ಭೂಚೋರನ ಕೊಂದು ಬಾಲ ಕರೆಯಲು ಬಂದು ।
ಯಾಚಕ ನೀನಾದೆ – ರಂಗಯ್ಯ ॥
ಸೂಚತನ ಸುತಗೊಲಿದು ಶರಧಿಯ ಕಟ್ಟಿ ಮೆರೆದೆ ।
ಕೀಚಕಹತಪೋಷ ಖೇಚರಪುರವಾಸ ।
ನೀಚಜನರ ತರಿದೆ – ರಂಗಯ್ಯ ೨

ವನವನಲೆದು ಬಂದ – ವನಿತೆರತ್ನವ ತಂದ ।
ಘನಕಂಭದಿಂದ ಬಂದು ಗರುವ ಮುರಿದು ಬಲಿಯ ।
ಜನನಿಯ ಶಿರವರಿದೆ – ರಂಗಯ್ಯ ॥
ಹನುಮವಂದಿತಪಾದ ಹರುಷ ಪಾಂಡವವರದ ।
ಮನಸಿಜವೈರಿಗೊಲಿದು ಮಹಾಕಲಿಕಿಯಾದೆ ।
ಘನಪುರಂದರ ವಿಠಲ – ರಂಗಯ್ಯ ೩

## ೩೪

ಮನಸಿಟ್ಟು ಭ್ರಮಿಸುವರೇನೆ – ಘನ – ।
ಗುಣವಂತನೇನವ ಜಾಣೆ ? ಪ

ಅನುದಿನ ಗೊಲ್ಲಪಳ್ಳಿಗೆ ಕಳ್ಳನೆನಿಸಿದ ।
ದನಗಾಹಿ ನಿನಗೇನ ಮರುಳು ಮಾಡಿದನೆ ? ಅ.ಪ

ಜಲವಾಸಿ ಮುಖವೊಳಸೆಳೆವ – ಇವ ।
ನೆಲವ ಕೆದರಿ ಕಂಬದಿ ಬಾಯ್ ತೆಗೆವ ॥
ಇಳೆಯನಳೆದ ಕೊರಳಗೊಯ್ಕ ವನವಾಸಿಯು ।
ಕೊಳಲಪಿಡಿದ ಕುರುಬಲವನಳಿದಾತಗೆ ೧

ಅಂದು ಮಧುರೆಯಲಿ ಪುಟ್ಟಿದನ – ಆ ।
ನಂದಗೋಪ – ಯಶೋದೆ ಕೋಮಲನ ॥
ಕಂದನಾಗಿ ಮೊಲೆಯುಂಡು ಪೂತನಿಯನು ।
ಕೊಂದು ಕಂಸರ ಪುರ ತಂದೆಗಿತ್ತವಗೆ ೨

ಬತ್ತಲಿರುವ ಶ್ರೀ ನಿರ್ವಾಣಿ – ತೇಜಿ – ।
ಹತ್ತಿ ಪಿಡಿದ ಖಡ್ಗ ಪಾಣಿ ॥
ಮತ್ತರನೆಲ್ಲರ ಮರ್ದಿಸಿ ಬಲವಂತ ।
ಪಾರ್ಥಗೊಲಿದ ಶ್ರೀ ಪುರಂದರವಿಠಲಗೆ ೩

## ೩೫

ಮಲಗಯ್ಯ ಜಲಜನಾಭ ಪ

ಆದಿಶೇಷನು ಬಂದು ಹಾಸಿಗೆಯಾಗಿಹ
ವೇದವಿನುತ ಜಗದಾದಿಪುರುಷ ಕೇಳೊ ೧

ಸಿರಿ ಭೂ ದುರ್ಗೆಯರು ತರುಣಿಯರು ಮೂವರು
ಚರಣವೊತ್ತಲಿಕೆ ಕೈಕಟ್ಟಿ ನಿಂತಿಹರು ೨

ಸರುವಜ್ಞ ಮುನಿವಂದ್ಯ ಸರುವ ಸ್ವತಂತ್ರನೇ
ಪರಮ ಸುಂದರ ಪುರಂದರವಿಠಲರಾಯಾ ೩

## ೩೬

ಯಮನೆಲ್ಲೊ ಕಾಣೆನೆಂದು ಹೇಳಬೇಡ ।
ಯಮನೇ ಶ್ರೀರಾಮನು ಸಂದೇಹ ಬೇಡ ಪ

ನಂಬಿದ ವಿಭೀಷಣಗೆ ರಾಮನಾದ ।
ನಂಬದಿದ್ದ ರಾವಣಗೆ ಯಮನೇ ಆದ ೧

ನಂಬಿದ ಅರ್ಜುನನಿಗೆ ಬಂಟನಾದ ।
ನಂಬಿದಿದ್ದ ಕೌರವನಿಗೆ ಕಂಟಕನಾದ ೨

ನಂಬಿದ ಉಗ್ರಸೇನಗೆ ಮಿತ್ರನಾದ
ನಂಬದಿದ್ದ ಕಂಸನಿಗೆ ಶತ್ರುವಾದ ೩

ನಂಬಿದ ಪ್ರಹ್ಲಾದಗೆ ಹರಿಯಾದ ।
ನಂಬದಿದ್ದ ಹಿರಣ್ಯಕಗೆ ಅರಿಯಾದ ೪

ನಂಬಿದವರ ಸಲಹುವ ನಮ್ಮ ದೊರೆಯು ।
ಅಂಬುಜಾಕ್ಷ ಪುರಂದರವಿಠಲ ಹರಿಯು ೫

## ೩೭

ರಂಗನೊಲಿದ ನಮ್ಮ ಕೃಷ್ಣನೊಲಿದ ।
ಅಂಗನೆ ದ್ರೌಪದಿಗೆ ಅಕ್ಷಯವಸ್ತ್ರವನಿತ್ತು ಪ

ಕರಿಯಪುರದ ನಗರದಲ್ಲಿ ಕೌರವರು ಪಾಂಡವರು ।
ಧರೆಯನೊಡ್ಡಿ ಲೆತ್ತವಿಡಿದು ಜೂಜನಾಡಲು ॥
ಪರಮಪಾಪಿ ಶಕುನಿ ತಾನು ಪಾಸಿನೊಳಗೆ ಪೊಕ್ಕಿರಲು ।
ಧರುಮರಾಯ ಧಾರಿಣಿ – ದ್ರೌಪದಿಯ ಸೋತನು ೧

ಮುದ್ದುಮೊಗದ ದ್ರೌಪದಿಯ ಮುಂದೆಮಾಡಿ ತನ್ನಿರೆಂದು ।
ತಿದ್ದಿ ತನ್ನ ಮನ್ನೆಯರಿಗೆ ತಿಳಿಯಹೇಳಿದ ॥
ಮುದ್ರೆಮನ್ನೆಯರು ಬಂದು ದ್ರೌಪದಿಯ ಮುಂದೆ ನಿಂತು ।
ಬುದ್ಧಿಯಿಂದಲೆಲ್ಲವನು ಬಿನ್ನಹಮಾಡಲು ೨

ಅಮ್ಮ ಕೇಳೆ ಅರಸುಗಳು ಅಚ್ಚ ಪಗಡೆ ಪಂಥವಾಡಿ ।
ಹೆಮ್ಮೆಯಿಂದ ಜೂಜಿಗಿಟ್ಟು ಲೆತ್ತವಾಡಲು ॥
ಧರ್ಮರಾಯ ಸೋತನೆಂದು ಸತ್ಯವಚನಿ ಕೌರವಂಗೆ ।
ನಿಮ್ಮ ನಿಜದಿ ಸೇರಿ ಆಗ ಕೊಟ್ಟರೆಂದರು ೩

ಪಟ್ಟಪದವಿ ಅವರಿಗಾಗಿ ಬಡವರಾಗಿ ಇರುವೆವೆಂದರೆ ।
ಕೆಟ್ಟ ಪಗಡೆ ಪಂಥ ಜೂಜಿದೆಲ್ಲಿ ಒದಗಿತು ? ॥
ದುಷ್ಟ ಕೌರವನು ಎನ್ನ ಲಜ್ಜೆ – ನಾಚಿಕೆಯ ಕೊಂಡು ।
ಭ್ರಷ್ಟ ಮಾಡುವನು ಎಂದು ಬಳಲಿ ದ್ರೌಪದಿ ೪

ಬಾಗಿ ಬಳುಕಿ ಬೆದರಿ ಬಿಕ್ಕಿ ಕಣ್ಣ ನೀರನುದುರಿಸುತಲಿ ।
ಮಾಗಿಯ ಕೋಗಿಲೆಯಂತೆ ಕಾಯ ಒಲೆಯುತ ॥
ಆಗ ಕೃಷ್ಣನಂಘ್ರಿಗಳನು ಅಂತರಂಗದಲಿ ನೆನೆದು ।
ಸಾಗಿಸಾಗಿ ಹೆಜ್ಜೆ ಇಡುತ ಸಭೆಗೆ ಬಂದಳು ೫

ವೀರಕರ್ಣ ಅಶ್ವತ್ಥಾಮ ವಿದುರ ಶಲ್ಯ ಭಗದತ್ತರು ।
ಕ್ರೂರ ಕೌರವ ದುಃಶಾಸನ ಗುರುಹಿರಿಯರು ॥
ಸಾರುತಿಪ್ಪ ಭಟರು ಪರಿವಾರ ರಾವುತರ ಕಂಡು ।
ಧಾರಿಣಿಗೆ ಮುಖವ ಮಾಡಿ ನಾಚಿನಿಂತಳು ೬

ಚೆಂದದಿಂದ ದುರ್ಯೋಧನ ಚದುರಿ ದ್ರೌಪದಿಯ ಕಂಡು ।
ಮುಂದರಿಯದೆ ಮುಗುಳುನಗೆಯ ಮಾತನಾಡಿದ ॥
ಅಂದು ಸ್ವಯಂವರದಲ್ಲಿ ಐವರಿಗೆ ಆದ ಬಾಲೆ ।
ಇಂದು ಎನ್ನ ಪಟ್ಟದರಸಿಗೊಪ್ಪಿದೆಯೆಂದನು ೭

ಮಲ್ಲಿಗೆಯನು ಮುಡಿಯೆ ನಾರಿ ಮುದ್ದುಮೊಗದ ಒಯ್ಯಾರಿ
ಚೆಲ್ಲೆಗಂಗಳ ದ್ರೌಪದಿಯೇ ಬಾರೆ ಎಂದನು ॥

ಬಿಲ್ಲು ಎತ್ತಲಾರದವನೆ ಬಂಡಣ ಕಾದದಿದ್ದವನೇ ।
ಹಲ್ಲುಕೀಳುವರ್‍ಯ್ಯವರು ಬೇಡವೆಂದಳು ೮

ಬಟ್ಟೆಬಡಕರ್‍ಯ್ಯವರಿಗೆ ಮಿತ್ರೆಯಾಗುವುದು ಸಲ್ಲ ।
ಪಟ್ಟೆಮಂಚಕೊಪ್ಪುವಂತೆ ಬಾರೆ ಎಂದನು ॥
ಕೆಟ್ಟಮಾತನಾಡದಿರೊ ಕ್ರೋಧದಿಂದ ನೋಡದಿರೊ ।
ರಟ್ಟೆಕೀಳುವರ್‍ಯ್ಯವರು ಬೇಡವೆಂದಳು ೯

ಅಡವಿತಿರುಕರ್‍ಯ್ಯವರಿಗೆ ಮಡದಿಯಾಗುವುದು ಸಲ್ಲ ।
ತೊಡೆಯ ಮೇಲೆ ಒಪ್ಪುವಂತೆ ಬಾರೆ ಎಂದನು ॥
ಬೆಡಗುಮಾತನಾಡದಿರೊ ಭೀಮಸೇನನ ಗದೆಯು ನಿನ್ನ ।
ತೊಡೆಯ ಮೇಲೆ ಒಪ್ಪುವದು ಬೇಡವೆಂದಳು ೧೦

ಅಚ್ಚ ಪೊಂಬಣ್ಣದ ಬೊಂಬೆ ಆನೆಯಂತೆ ನಡೆವ ರಂಭೆ ।
ಅಚ್ಚ ಮುತ್ತಿನಂತೆ ಬಿಂಬೆ ಬಾರೆ ಎಂದನು ॥
ಹೆಚ್ಚು – ಕುಂದನಾಡದಿರೊ ಪರರ ಹೆಣ್ಣ ನೋಡದಿರೊ ।
ಚಚ್ಚಿ ಹಾಕುವರ್‍ಯ್ಯವರು ಬೇಡವೆಂದಳು ೧೧

ಎಷ್ಟು ಬಿಂಕ – ಬಡಿವಾರವು ಹೆಣ್ಣು ಬಾಲೆಗಿವಳಿಗೆಂದು ।
ಸಿಟ್ಟಿನಿಂದ ದುರ್ಯೋಧನ ಸಾರಿ ಕೋಪಿಸಿ ॥
ಉಟ್ಟ ಸೀರೆ ಸೆಳೆಯಿರಿವಳ ಉಬ್ಬು ಕೊಬ್ಬು ತಗ್ಗಲೆಂದು ।
ದೃಷ್ಟಿಯಿಂದ ದುಃಶಾಸನಗೆ ಸನ್ನೆ ಮಾಡಿದ ೧೨

ದುರುಳ ದುಃಶಾಸನ ಬಂದು ದ್ರೌಪದಿಯ ಮುಂದೆ ನಿಂತು ।
ಕರವ ಪಿಡಿದು ಸೆರಗಹಿಡಿದು ನಿರಿಯ ಸೆಳೆಯಲು ॥
ಮರುಳು ಆಗದಿರೋ ನಿನ್ನ ರಕ್ತದೊಳಗೆ ಮುಡಿಯನದ್ದಿ ।
ಕರುಳ ದಂಡೆಯನ್ನೆ ಮಾಡಿ ಮುಡಿವೆನೆಂದಳು ೧೩

ಗುಲ್ಲುಗಂಟಿ ಹೆಣ್ಣೆ ನಿನ್ನ ಕಾಡಿ ಬಳಲಿಸುವೆನು ಎಂದು ।
ಗಲ್ಲದಲ್ಲಿ ಕೈಯನಿಕ್ಕಿ ನಿರಿಯ ಸೆಳೆಯಲು ॥
ನಿಲ್ಲೊ ನಿಲ್ಲೊ ಪಾಪಿ ನಿನ್ನ ನಾಲಗೆ ಎರಡಾಗಿ ಸೀಳಿ ।
ಪಲ್ಲಿನಲ್ಲಿ ಕೇಶ ಹಿಕ್ಕಿಕೊಂಬೆನೆಂದಳು ೧೪

ಬೆನ್ನಿನಲಿ ಪೆಟ್ಟನಿಕ್ಕಿ ಭಂಡುಮಾಡುವೆನು ಎಂದು ।
ಕೆನ್ನೆಯಲಿ ಕೈಯನಿಕ್ಕಿ ನಿರಿಯ ಸೆಳೆಯಲು ॥
ರನ್ನೆ ವೀರಬೊಬ್ಬೆಯಿಕ್ಕಿ ರಭಸದಿಂದ ಸಾರುತಲಿ ।
ಪನ್ನಗಶಯನ ಕೃಷ್ಣ ಕೃಷ್ಣ ಕಾಯೊ ಎಂದಳು ೧೫

ಮಚ್ಚ ಕೂರ್ಮವರಹ ಕಾಯೊ, ಮುದ್ದು ನಾರಸಿಂಹ ಕಾಯೊ ।
ಹೆಚ್ಚಿನ ವಾಮನನೆ ಕಾಯೊ ಭಾರ್ಗವ ಕಾಯೊ ॥
ಅಚ್ಯುತ ರಾಮಕೃಷ್ಣ ಕಾಯೊ ಬೌದ್ಧ ಕಲ್ಕಿರೂಪ ಕಾಯೊ ।
ಸಚ್ಚಿದಾನಂದ ಸ್ವಾಮಿ ಕಾಯೊ ಎಂದಳು ೧೬

ಸಜ್ಜನರ ಪ್ರಿಯನೆ ಕಾಯೊ ಸಾಧುರಕ್ಷಕನೆ ಕಾಯೊ ।
ನಿರ್ಜರವಂದಿತನೆ ಕಾಯೊ ನರಹರಿ ಕಾಯೊ ।
ಅರ್ಜುನನ ಸಖನೆ ಕಾಯೊ ಆನತಪಾಲಕನೆ ಕಾಯೊ ।
ಲಜ್ಜೆ – ನಾಚಿಕೆಯ ಕಾಯೊ ಸ್ವಾಮಿ ಎಂದಳು ೧೭

ಸಿಂಧು ಸಾಗರದ ಶ್ರಯನ ದ್ರೌಪದಿಯ ಮೊರೆಯ ಕೇಳಿ ।
ಅಂದು ಉಟ್ಟ ವಸ್ತ್ರಗಳು ಅಕ್ಷಯ ವೆಂದನು॥
ಒಂದು ಎರಡು ಮೂರು ನಾಲ್ಕು ಕೋಟ್ಯಸಂಖ್ಯ ಸೀರೆಗಳು ।
ನೊಂದು ಬೆಂದು ದುಃಶಾಸನನು ನಾಚಿಕುಳಿತನು ೧೮

ನೋಡಿದರು ದ್ರೌಪದಿಯ ಮಾನರಕ್ಷ ಲೀಲೆಗಳನು ।
ಮಾಡಿದರು ಮಾಧವನ ಮುದ್ದು ಸ್ತೋತ್ರವ ॥
ಮೂಢ ಕೌರವನ ಕೂಡ ಮಾನಿನಿ ದ್ರೌಪದಿಯು ಪಂಥ – ।
ವಾಡಿ ತನ್ನ ಪತಿಗಳೈವರನ್ನು ಗೆಲಿದಳು ೧೯

ಕೇಶಮುಡಿಗಳನ್ನ ಕಟ್ಟಿ ಕೈಯಕಾಲಮಣ್ಣನೊರಸಿ ।
ಸಾಸಿರನಾಮದ ಕೃಷ್ಣನು ಸುರರ ಪಾಲಿಪ ।
ವಾಸಿಯುಳ್ಳ ಕೃಷ್ಣ ಎನ್ನ ವಹಿಸಿ ಮಾನಕಾಯ್ದನೆಂದು । ಸಂ
ತೋಷದಿಂದ ದ್ರೌಪದಿಯು ಮನೆಗೆ ಬಂದಳು ೨೦

ಇಂತು ಆ ದ್ರೌಪದಿಯ ಮಾನರಕ್ಷ ಲೀಲೆಗಳನು ।
ಸಂತತದಲಿ ಹಾಡಿಕೇಳಿ ನಲಿವ ಜನರಿಗೆ ।

ಸಂತಾನ ಸೌಭಾಗ್ಯ ಸಕಲಭೀಷ್ಟೆಗಳನು ಕೊಡುವ ।
ಕಂತುಜನಕ ನಮ್ಮ ಪುರಂದರವಿಠಲನು ೨೧

## ೩೮

ವಾಸುದೇವ ನಿನ್ನ ವರ್ಮ ಕರ್ಮಂಗಳ
ದೇಶ ದೇಶದೊಳು ಹೇಳಲೆ ? ಪ

ಬೇಸರಿಯದೆ ಎನ್ನ ಹೃದಯ ಕಮಲದಲ್ಲಿ
ವಾಸವಾಗಿ ಸುಮ್ಮನಿರುವೆಯೊ ? ಅ.ಪ

ಮತ್ಸ್ಯರೂಪನಾಗಿ ಮನಸು ಕಾಣಿಸಿಕೊಂಡು ಮಕ್ಕಳ
ತಿದ್ದಿದ್ದು ಹೇಳಲೆ ?
ಉತ್ಸಾಹದಿಂದ ನಿಗಮವ ತಂದು ಬ್ರಹ್ಮಗೆ
ಮೆಚ್ಚಿಕೊಟ್ಟದ್ದು ನಾ ಹೇಳಲೆ ೧

ಕಡಗೋಲು ಮಂಡೆಯಂದದಿ ಕೈಕಾಲು
ಮುದುಡಿಕೊಂಡದ್ದು ನಾ ಹೇಳಲೆ ?
ಕಡಲೊಳಗಿಂದ ಪಾತಾಳಕೆ ಇಳಿದಿಳೆ ಪಡೆದಾತನ
ಸುದ್ದಿ ಹೇಳಲೆ ೨

ಹುಚ್ಚುಮನಸುಮಾಡಿ ಕಚ್ಚುತ ಕೆದರುತ ರಚ್ಚೆಯಿಕ್ಕಿದ
ಸುದ್ದಿ ಹೇಳಲೆ ?
ಮುಚ್ಚಿದ ಭೂಮಿಯ ಹಲ್ಲಿಂದ ಕಿತ್ತಿದ ಹೆಚ್ಚುತನವ
ನಾನು ಹೇಳಲೆ ೩

ಕಂದನ ಮಾತಿಗೆ ಕಡುಕೋಪದಿಂ ಬಂದು
ಕಂಬವನೊಡೆದದ್ದು ಹೇಳಲೆ ?
ಕುಂದದೆ ಹಿರಣ್ಯಕಶಿಪುವಿನುದರ ಸೀಳಿ ಕರುಳ್ಮಾಲೆ
ಧರಿಸಿದ್ದು ಹೇಳಲೆ ೪

ಬಾಲನಾಗಿ ಬ್ರಹ್ಮಚಾರಿ ವೇಷವ ತೋರಿ ಬಲಿಯ
ಬೇಡಿದುದನು ಹೇಳಲೆ ?
ಲೀಲೆಯಿಂದಲಿ ಧರೆಯ ಈರಡಿ ಮಾಡಿದ ಜಾಲತ್ವವನು
ನಾನು ಹೇಳಲೆ ೫

ಹೆಸರಿಲ್ಲದೆ ಹೋಗಿ ಹೆತ್ತತಾಯ್ ತಲೆಕುಟ್ಟಿ ಕೊಡಲಿಯ
ಪಿಡಿದದ್ದು ಹೇಳಲೆ ?
ಸೋಸಿ ದೈತ್ಯರನೆಲ್ಲ ರೋಸಿ ಪ್ರಾಣವ ಕೊಂಡ
ದೋಷತನವ ನಾನು ಹೇಳಲೆ ೬

ತಾಯ ಮಾತನೆ ಕೇಳಿ ತಮ್ಮನ ಒಡಗೂಡಿ
ಅಡವಿಯೊಳಿದ್ದುದು ಹೇಳಲೆ ?
ಮಾಯಾಸೀತೆಗಾಗಿ ರಾವಣನನು ಕೊಂದು ಮಹಿಮೆಯ
ಮೆರೆದದ್ದು ಹೇಳಲೆ ? ೭

ತರಳತನದಲಿ ದುರುಳನಾಗಿ ಬಂದ ಒರಳೆಳೆತಂದದ್ದು ಹೇಳಲೆ
ಬೆರಳಿಂದ ಗಿರಿಯೆತ್ತಿ ಕಂಸನ ಕೊಂದ ಆ ದುರುಳತನದ
ಸುದ್ದಿ ಹೇಳಲೆ ೮

..........................................................................................
.......................................................................................... ೯

ರಾಯ ರಾವುತನಾಗಿ ರಾಯರ ಮನೆ ಪೊಕ್ಕು ಕಡುಗವ
ಪಿಡಿದದ್ದು ಹೇಳಲೆ ?
ಆಯತದಿಂದ ಕಲಿಯಲಿದ್ದು ಮನುಜರ ಮಾಯವ
ತೋರಿದ್ದು ಹೇಳಲೆ ೧೦

ಧರೆಯೊಳಗಧಿಕವಾದ ಉರಗಗಿರಿಯಲ್ಲಿ ಸ್ಥಿರವಾಗಿ
ನಿಂತದ್ದು ಹೇಳಲೆ ?
ಕರುಣದಿಂ ಭಕುತರ ಹೊರೆವ ಪುರಂದರವಿಠಲನೆಂದು
ನಾ ಹೇಳಲೆ ೧೧*

* ಈ ಕೀರ್ತನೆ ಪಾಠ ವ್ಯತ್ಯಾಸಗಳೊಡನೆ "ರಂಗ ವಿಠಲ" ಅಂಕಿತದಲ್ಲೂ ಇದೆ.

## ೩೯

ವಿದುರನ ಭಾಗ್ಯವಿದು ।
ಪದುಮಜಾಂಡ ತಲೆದೂಗುತಲಿದೆಕೊ ಪ

ಕುರುರಾಯನು ಖಳನನುಜನು ರವಿಜನು ।
ಗುರುಗಾಂಗೇಯರು ಎದುರಿರಲು ॥
ಹರಿಸಿ ರಥವ ನಡು ಬೀದಿಯಲ್ಲಿ ಬಹ ।
ಹರಿಯ ತಾನು ಕಂಡನು ಹರುಷದಲಿ ೧

ದಾರಿಯಲಿ ಬಹ ಮುರವೈರಿಯ ಕಾಣುತ ।
ಹಾರುತ ಚೀರುತ ಕುಣಿಯುತಲಿ ॥
ವಾರಿಧಾರೆಯನು ನೇತ್ರದಿ ಸುರಿಸುತ ।
ಬಾರಿಬಾರಿಗೆ ಹಿಗ್ಗುವ ಸುಖದಿ ೨

ಆಟಕೆ ಲೋಕಗಳೆಲ್ಲಾ ಸೃಜಿಸುವ ।
ನಾಟಕಧರ ತನ್ನ ಲೀಲೆಯಲಿ ॥
ನೀಟಾದವರ ಮನೆಗಳ ಜರೆದು ।
ಕುಟೀರದಲಿ ಬಂದು ಹರಿ ಕುಳಿತ ೩

ಅಡಿಗಡಿಗೆ ತನ್ನ ತನುಮನ ಹರಹಿ ।
ಅಡಗೆಡೆಯುತ ಬಲು ಗದ್ಗದದಿ ॥
ನುಡಿಗಳ ತೊದಲಿಸಿ ರೋಮವ ಪುಳಕಿಸಿ ।
ದುಡುದುಡು ಓಡುವ ದಶದಿಶೆಗೆ ೪

ಕಂಗಳುದಕದಿ ಪದಂಗಳ ತೊಳೆದು ।
ಗಂಧವ ಪೂಸಿದ ತನುಪೂರಿಸಿ ॥
ಮಂಗಳ ಮಹಿಮನ ಚರಣಕೆರಗಿ ಪು-
ಷ್ಪಂಗಳಿಂದ ಪೂಜೆಯ ಮಾಡಿದನು ೫

ನೋಡಿದ ಭಕುತನ ಮನದ ಹವಣಿಕೆಯು ।
ಪಾಡುವ ಪೊಗಳುವ ಹರುಷದಲಿ ॥

ನೀಡಿದ ಕರದಲಿ ಬಿಗಿದಪ್ಪಿದ ಕೊಂ –
ಡಾಡಿದ ಕರುಣದಿ ಜಗದೊಡೆಯ ೬

ಕ್ಷೀರವಾರಿಧಿಶಯನಗೆ ವಿದುರನು ।
ಕ್ಷೀರವನುಣಬಡಿಸಿದ ನೋಡಾ ॥
ವಾರಿಜನಾಭನು ಕರಸಂಪುಟದಲಿ ।
ಆರೋಗಣಿಸಿದ ಘನತೆಯನು ೭

ಒಂದು ಕುಡಿತೆ ಪಾಲು ಹರಿ ತಾ ಸವಿದು ।
ಮುಂದಕೆ ನಡೆಸಿದ ಧರೆಮೇಲೆ ॥
ಇಂದಿರೆಯರಸನ ಚರಿತೆ ವಿಚಿತ್ರವು ।
ಚೆಂದದಿ ಹರಿದುದು ಬೀದಿಯಲಿ ೮

ಕರುಣಾಕರ ಸಿರಿಹರಿ ತನ್ನ ಭಕುತರ ।
ಪೊರೆವನು ಅನುದಿನ ಆಯತದಿ ॥
ಸಿರಿಯ ಅರಸು ನಮ್ಮ ಪುರಂದರ ವಿಠಲನ ।
ಶರಣರು ಧನ್ಯರು ಧರೆಮೇಲೆ ೯

## ೪೦

ಹರಿಕುಣಿದ – ನಮ್ಮ – ಹರಿಕುಣಿದ ಪ

ಅಕಲಂಕಚರಿತ – ಮಕರ ಕುಂಡಲಧರ ।
ಸಕಲರ ಪಾಲಿಪ ಹರಿಕುಣಿದ ೧

ಅರಳೆಲೆಮಾಗಾಯಿ ಕೊರಳ ಮುತ್ತಿನಸರ ।
ತರಳರ ಕೂಡಿ ತಾ ಹರಿ ಕುಣಿದ ೨

ಪರಮ ಭಾಗವತ ಪುರದೊಳಗಾಡುವ ।
ಪುರಂದರವಿಠಲ ಹರಿ ಕುಣಿದ ೩

## ೪೧

ಹರಿಯೆ, ಕುಣಿಯೆನುತ – ನರ –
ಹರಿಯೆ, ಕುಣಿಯೆಂದು ಕುಣಿಸಿದರಯ್ಯ ಪ

ಲೋಕವ ತಾಳ್ದನ ಮನೆಯಲಿ ಪುಟ್ಟಿ ।
ತೂಕದ ನುಡಿಗಳ ಕದ್ದವನ ॥
ನಾಕರಿಸಲು ನಿಜ ಗೋಪರೂಪದಿಂದ ।
ಆಕರಿಸಿದನಾ ಕುಣಿಸಿದರಯ್ಯ ೧

ಎಡೆಯಿಲ್ಲದೆ ನಡೆವನ ಕೂಡಿರುವವನ ।
ಹಿಡಿತಿಂಬನ ಒಡಹುಟ್ಟಿದನ ॥
ಒಡೆಯನ ಕಂದನ ವೈರಿಯ ಬಂಡಿಯ ।
ಹೊಡೆದ ಮಹಾತ್ಮನ ಕುಣಿಸಿದರಯ್ಯ ೨

ಒಣಗಿದ ಮರ ಎಲೆಯಿಲ್ಲದ ಬಳ್ಳಿ ।
ಬಣತಿಗೆ ಪುಟ್ಟಿದ ವನದಲ್ಲಿ ॥
ಕ್ಷಣ ಮುನ್ನರಿಯದೆ ಅದರ ಆಹಾರಕೆ ।
ಫಣಿಯ ಮೆಟ್ಟಿದನ ಕುಣಿಸಿದರಯ್ಯ ೩

ಮಾವನೊಡನೆ ಮನೆಮಾಡಿ ಗೋಕರ್ಣದಿ ।
ಆ ವುರಗನ ಮೇಲ್ಮಲಗಿದ್ದನ ॥
ಮೂವರ ಮೊಲೆಯುಂಡ ಮೂಲೋಕವರಿಯದ ।
ಮೂವರಣ್ಣನೆಂದು ಕುಣಿಸಿದರಯ್ಯ ೪

ಗೋಕುಲದೊಳಗಿನ ಗೋಪಿಯರೆಲ್ಲ ।
ಏಕಾಂತದಿ ತಮ್ಮೊಳು ತಾವು ॥
ಶ್ರೀಕಾಂತನ ನಮ್ಮ ಪುರಂದರವಿಠಲನ ।
ಏಕ ಮೂರುತಿಯೆಂದು ಕುಣಿಸಿದರಯ್ಯ ೫

## ೪೨

ಹರಿಯೆ ಗತಿ ಸಿರಿ ವಿರಿಂಚಿ ಶಿವರಿಗೆ ನರ –।
ಹರಿಯೆ ಗತಿ ಸುರಪತಿ ಸುರರಿಗೆ ಪ

ರುಕುಮಿಣಿದೇವಿಯ ಶಿಶುಪಾಲಗೀವೆನೆಂದು ।
ರುಕುಮ ಸಂಭ್ರಮಿಸಲು ಕೃಷ್ಣ ಬಂದು ॥
ಸಕಲ ರಾಯರುಗಳು ಸನ್ನದ್ಧರಾಗಿರೆ ।
ರುಕುಮಿಣಿದೇವಿಯ ವರಿಸಿ ಆಳಿದನಾಗಿ ೧

ಹಯಾಸ್ಯನೆಂಬವ ವೇದವ ಕದ್ದೊಯ್ಯೆ ।
ಹಯಗ್ರೀವನಾಗಿ ಹರಿಯವನ ।
ಕಾಯವ ಖಂಡಿಸಿ ಅಜಗೆ ವೇದವನಿತ್ತು ।
ಕಾಯ್ದ ಕರುಣಿ ಕಮಲಾಕ್ಷನೆ ದೈವವೆಂದು ೨

ಭಸುಮಾಸುರನಿಗೊಂದಸಮದ ವರವಿತ್ತು ।
ತ್ರಿಸೂಲಧರನು ಓಡಿ ಬಳಲುತಿರೆ ।
ಬಿಸಜಸಂಭವನಯ್ಯ ಭಸುಮಾಸುರನನು ।
ಭಸುಮವ ಮಾಡಿ ಭಕ್ತನ ಪಾಲಿಸಿದನಾಗಿ ೩

ಸುರಪನ ರಾಜ್ಯವ ಬಲಿಯಾಕ್ರಮಿಸಲು ।
ಹರಿಯೆ ದಾನವ ಬೇಡಿ ನೀನವನ ॥
ಧರೆಯ ಈರಡಿ ಮಾಡಿ ಪಾತಾಳಕೆ ಮೆಟ್ಟಿ ।
ಸುರಪಗೆ ರಾಜ್ಯವನಿತ್ತು ಸಲಹಿದನಾಗಿ ೪

ಸುರ – ಭೂಸುರರನು ಅಸುರ ಬಾಧಿಸುತಿರೆ ।
ಹರಿಯವತರಿಸಿ ನೀನಸುರರನು ॥
ಶಿರಗಳ ಚಂಡಾಡಿ ಸುರರ ಭೂಸುರರನು
ಪೊರೆಯುತ್ತಲಿಪ್ಪ ನಮ್ಮ ಪುರಂದರವಿಠಲ ೫

## ೪೩

ಹೆಂಡಿರನಾಳುವಳೀ ಕನ್ನಿಕೆ ।
ಗಂಡನಿಲ್ಲದ ಹೆಂಗುಸೀ ಕನ್ನಿಕೆ ಪ

ಅಂಥಿಂಥಿವಳೆಂದು ಅಳವಡಿಸಲು ಬೇಡ ।
ಇಂಥ ಸೊಬಗನಂತ ಏನೆಂಬೆನೊ ॥
ಸಂತತಸುರ – ದನುಜರಿಗೆ ಪ್ರಪಂಚದಿ ।
ಪಂಕ್ತಿಯೊಳಮೃತವ ಬಡಿಸಿದಳು ೧

ಶಿಶುವು ಬೊಂಬೆಯ ತೋರ ಆಲದೆಲೆಯ ಮೇಲೆ ।
ಅಸುಮಯಜಲದಲಿ ಮಲಗಿ ಮೈಮರೆದಳು ॥
ಒಸಗೆಯಾಗದ ಮುನ್ನ ಹೊಕ್ಕುಳ ಹೂವಿನಲಿ ।
ಬಸುರಲಿ ಬೊಮ್ಮನ ಪಡೆದಳೀ ಕನ್ನಿಕೆ ೨

ಬೇಗೆಗಣ್ಣವನಿಗೆ ಬಿಸಿಗೈ ತಾಗುವಾಗ ।
ಭೋಗದ ಸೊಗತೋರಿ ಬೂದಿಯ ಮಾಡಿ ॥
ಭಾಗೀರಥಿಯ ಪಿತ ಬೇಲೂರ ಚೆನ್ನಿಗ ।
ಯೋಗಿ ಪುರಂದರವಿಠಲನೆಂಬ ೩

## ೪೪

ಜ್ಞಾನವಂತರಿಗೆ ವಿಧಿ ಕಾಡುವುದು ಸತ್ಯ – ಅ
ಜ್ಞಾನಿ ಮೂಢರಿಗೆ ಹರಿ ನಿನ್ನ ಬಲವಯ್ಯ ಪ

ಹಿಂದೆ ಹರಿಶ್ಚಂದ್ರನ ಅರಣ್ಯವನೆ ಸೇರಿಸಿತು
ಮುಂದಾಗಿ ಕುಳಿತಿತ್ತು ಕರಿರಾಜಗೆ ॥
ಚೆಂದದಲಿ ಪಾಂಡವರ ಅರಣ್ಯ ಸೇರಿಸಿತು
ಸುಂದರಿಯ ಸೀತೆಯನು ಲಂಕೆಯೊಳಗಿಟ್ಟಿತು ೧

ಚಂದ್ರಂಗೆ ವಿಧಿ ಕಾಡಿ ಸರ್ಪ ತಾ ನುಂಗಿತು
ಇಂದ್ರಂಗೆ ವಿಧಿ ಕಾಡಿ ಅಂಗ ಭಂಗವಾಯಿತು ॥

ಚಂದ್ರಶೇಖರನನ್ನು ಸುಡಗಾಡ ಸೇರಿಸಿತು
ಇಂದಿದನು ತಿಳಿದರೆ ನರರ ಪಾಡೇನು ೨

ವಿಧಿ ಕಾಡುವಾ ಕಾಲಕಿಲ್ಲದ್ದೆಲ್ಲವು ಬಂತು
ವಿಧಿ ಕಳವು ಸುಳ್ಳು ಹಾದರ ಕಲಿಸಿತು ॥
ವಿಧಿ ಬೇನೆ ಚಳಿಯುರಿಯ ರೋಗಂಗಳನೆ ತಂತು
ವಿಧಿಯ ಗೆದ್ದವ ನಮ್ಮ ಪುರಂದರ ವಿಠಲ ೩

# ತತ್ತ್ವ ವಿವೇಚನೆ

## ೪೫

ಅನುದಿನದಲಿ ಬಂದು ತನುವ ಸೂರೆಯಗೊಂಡು ।
ಎನಗೊಂದು ಮಾತ ಪೇಳೊ ಜೀವವೆ ! ಪ

ಘನಕೋಪದಲಿ ಬಂದು ಯಮನವರಳೆದೊಯ್ವಾಗ ।
ನಿನಕೂಡಿನ್ನೇತರ ಮಾತೂ ಕಾಯವೆ! ಅ.ಪ

ಬೆಲ್ಲದ ಹೇರಿನಂತೆ ಬೇಕಾದ ಬಂಧು – ಬಳಗ ।
ನಿಲ್ಲೊ ಮಾತನಾಡತೇನೆ ಜೀವವೆ ॥
ನಿಲ್ಲಗೊಡದೆ ಬಂದು ಯಮನವರೆಳೆದೊಯ್ವಾಗ ।
ಬೆಲ್ಲ ಬೇವಾಯಿತಲ್ಲೋ ಕಾಯವೆ ! ೧

ಸಕ್ಕರೆ ಹೇರಿನಂತೆ ಸವಿದುಂಡು ಪಾಯಸವ ।
ದಿಕ್ಕೆಟ್ಟು ಹೋಗುತೀಯೋ ಜೀವವೆ ॥
ದಕ್ಕಗೊಡದೆ ಬಂದು ಯಮನವರೆಳೆದೊಯ್ವಾಗ ।
ಸಕ್ಕರೆ ವಿಷವಾಯ್ತೋ ಕಾಯವೆ ! ೨

ಅಂದಣದೈಶ್ವರ್ಯ ದಂಡಿಗೆ – ಪಲ್ಲಕ್ಕಿ ।
ಮಂದಗಮನೆಯರು ಜೀವವೆ ॥
ಮಂದಗಮನೆ ಯಾರೊ – ಮಡದಿ – ಮಕ್ಕಳು ಯಾರೋ –
ಬಂದಂತೆ ಹೋಗ್ತೀನಿ ಕಾಯವೆ ! ೩

ಸೋರುವ ಮನೆಯಲಿ ಧ್ಯಾನ – ಮೌನಾದಿಗಳು ।
ಬೇರಿತ್ತು ನಿನ್ನ ಮನಸು ಜೀವವೆ ॥
ನೀರಮೇಲಣ ಗುಳ್ಳೆ ತೋರಿ ಹಾರಿದಂತೆ ।
ಯಾರಿಗೆ ಯಾರಿಲ್ಲ ಕಾಯವೆ ! ೪

ಹುಟ್ಟಿದ್ದು ಹೊಲೆಯೂರು ಬೆಳದದ್ದು ಮೊಲೆಯೂರು ।
ಇಟ್ಟದ್ದು ಈ ಊರು ಜೀವವೆ ॥
ಸೃಷ್ಟಿಗೊಡೆಯ ನಮ್ಮ ಪುರಂದರವಿಠಲನ ।
ಗಟ್ಟಿ ಪೂಜೆಯ ಮಾಡೊ ಕಾಯವೆ ! ೫

## ೪೬

ಅಂದೆ ನಿರ್ಣಯಿಸಿದರು ಕಾಣೋ ।
ಇಂದಿರಾಪತಿ ಪರದೈವತವೆಂಬುದ ಪ

ಅಂದು ಚತುರ್ಮುಖ ನಾರದನಿಗೆ ತನ್ನ ।
ತಂದೆ ಶ್ರೀಹರಿ ಪರದೈವವೆಂದು ॥
ಸಂದೇಹಗಳ ಪರಿಹರಿಸಿಹ ದ್ವಿತೀಯದ
ಸ್ಕಂಧದೊಳಯ್ದನೆಯ ಅಧ್ಯಾಯದಲಿ ೧

ಅಂದು ಕಪಿಲದೇವ ದೇವಹೂತಿಗೆ ತಾನು ।
ಚೆಂದದ ತತ್ತ್ವವನೆಲ್ಲ ಬೋಧಿಸಿದ ॥
ಅಂದದಲರ್ಜುನ – ಉದ್ಧವರಿಗೆ ಅಂದಾ – ।
ನಂದದಿ ಗೀತಾಶಾಸ್ತ್ರವನೊರೆದನೆಂದು ೨

ವೇದೈಶ್ಚ ಸರ್ವೈರಹಮೇವ ವೇದ್ಯಃ ।
ವೇದವಿಧಾಯಕ ನಾಮದವನು ॥
ವೇದಾಕ್ಷರಗಳು ಹರಿನಾಮಗಳೆಂದು ।
ವೇದಾಂತ ಸಿದ್ಧಾಂತಗಳಲಿ ಪೇಳಿದರೆಂದು ೩

ರಾಜಸ – ತಾಮಸ ಪೌರಾಣಗಳಿವು ।
ರಾಜಸ – ತಾಮಸ ಜೀವರಿಗೆ ॥
ರಾಜಸ – ತಾಮಸ ಗತಿಗೋಸ್ಕರ ಮುನಿ – ।
ರಾಜ ವ್ಯಾಸನು ಮೋಹಕವೆಂದು ಪೇಳಿದ ೪

ಬಿಡು ಪಾಷಂಡಮತದ ದುರ್ಬುದ್ಧಿಯ ।
ಬಿಡದೆ ಮಾಡು ವೈಷ್ಣವಸಂಗವ ॥

ಧೃಡಭಕ್ತಿಯಿಂದ ಶ್ರೀಹರಿಯ ಪೂಜಿಸಿದರೆ ।
ಮೃಡಪ್ರಿಯ ಪುರಂದರವಿಠಲನೊಲಿವನೆಂದು ೫

೪೭

ಅಂಬಿಗ ನಾ ನಿನ್ನ ನಂಬಿದೆ – ಜಗ
ದಂಬಾರಮಣ ನಿನ್ನ ಹೊಂದಿದೆ ಪ

ತುಂಬಿದ ಹರಿಗೋಲಂಬಿಗ – ಅದ
ಕೊಂಬತ್ತು ಛಿದ್ರಗಳಂಬಿಗ ॥
ಸಂಭ್ರಮದಿಂದಲಿ ಅಂಬಿಗ ಅದ
ರಿಂಬನರಿತು ನಡೆಸಂಬಿಗ ೧

ಹೊಳೆಯ ಅಬ್ಬರ ನೋಡಂಬಿಗ ಅಲ್ಲಿ
ಸೆಳವು ಬಹಳ ಕಾಣೋ ಅಂಬಿಗ ॥
ಸುಳಿಗೊಳಗಾದೆನು ಅಂಬಿಗ – ಎನ್ನ
ಸೆಳೆದುಕೊಂಡು ಒಯ್ಯೋ ಅಂಬಿಗ ೨

ಹತ್ತು ಬೆಂಬಡಿಗರು ಅಂಬಿಗರು – ಅಲ್ಲಿ
ಒತ್ತಿ ಬರುತಲಿಹರಂಬಿಗ
ಹತ್ತುವರೆತ್ತಲು ಅಂಬಿಗ ಎನ್ನ
ಎತ್ತಿಕೊಂಡು ಒಯ್ಯೋ ಅಂಬಿಗ ೩

ಆರು ತೆರೆಯ ನೋಡಂಬಿಗ ಸುತ್ತಿ
ಮೀರಿ ಬರುತಲಿವೆ ಅಂಬಿಗ ॥
ಆರೆನೆಂತಿಂತು ಅಂಬಿಗ ಮುಂದೆ
ದಾರಿಯ ತೋರಿಸು ಅಂಬಿಗ ೪

ಸತ್ಯವೆಂಬುವ ಹುಟ್ಟು ಅಂಬಿಗ ಸದು
ಭಕ್ತಿಯೆಂಬುವ ಪಾತ್ರ ಅಂಬಿಗ ॥
ನಿತ್ಯಮುಕ್ತ ನಮ್ಮ ಪುರಂದರವಿಠಲನ
ಮುಕ್ತಿಮಂಟಪಕೆ ಒಯ್ಯೋ ಅಂಬಿಗ * ೫

* ಈ ಕೀರ್ತನೆಯು ಅಕ್ಕಮಹಾದೇವಿಯ ಸ್ವರವಚನವನ್ನು ಹೋಲುತ್ತದೆ.

## ೪೮

ಆರೇನ ಮಾಡುವರು ಆರಿಂದಲೇನಹುದು
ಪೂರ್ವಜನ್ಮದ ಕರ್ಮ ವಿಧಿ ಬೆನ್ನಬಿಡದು ಪ

ಐದು ವರುಷದ ತರಳ ತಾನೆತ್ತ ತಪವೆತ್ತ ।
ಬೈದು ಮಲತಾಯಿ ಅಡವಿಗೆ ನೂಕಲು ॥
ಸುಯ್ದು ಕೋಪಾಗ್ನಿಯಲಿ ಪೊರಮಟ್ಟು ಪೋಪಾಗ ।
ಐದೆ ಬಂಧುಗಳಿದ್ದು ಏನ ಮಾಡಿದರು ೧

ನೃಪರೊಳಗೆ ಅತಿ ಶ್ರೇಷ್ಠ ಬಲವಂತ ರಘುರಾಮ ।
ಅಪರಿಮಿತ ಶೂರ ಲಕ್ಷ್ಮಣದೇವರು ।
ಚಪಲಾಕ್ಷಿ ಸೀತೆಯನು ಖಳನು ಕದ್ದೊಯ್ವಾಗ ।
ವಿಪರೀತ ವೀರರಿದ್ದೇನ ಮಾಡಿದರು ? ೨

ಪಾಪಿ ದುಶ್ಶಾಸ ದ್ರೌಪದಿಯ ಸೀರೆಯ ಸೆಳೆದು ।
ಕೋಪದಿಂ ಮಾನಭಂಗವ ಮಾಡಲು ॥
ಆಪತ್ತು ಬೆನ್ನಟ್ಟಿ ಹಾ ಕೃಷ್ಣ । – ಎನುವಾಗ ।
ಭೂಪತಿಗಳೈವರಿದ್ದೇನ ಮಾಡಿದರು ? ೩

ರಣದೊಳಗೆ ಅಭಿಮನ್ಯು ಚಕ್ರವ್ಯೂಹವ ಪೊಕ್ಕು ।
ಸೆಣಸಿ ಷಡುರಥದೊಡನೆ ಹೊಯ್ದಾಡಲು ॥
ಅಣಕವಿಲ್ಲದೆ ಕಾದಿ ಅಸುವಳಿದು ಪೋಪಾಗ ।
ತ್ರಿಣಯಸಖ ಪಾರ್ಥರಿದ್ದೇನ ಮಾಡಿದರು ೪

ಬ್ರಹ್ಮಶಿರ ಕರಕಟ್ಟಿ ಶಿವನ ಪೀಡಿಸುತಿರಲು ।
ಸುಮ್ಮನೇ ಜಗವನೆಲ್ಲವ ತಿರುಗಿದ ॥
ಬೊಮ್ಮಮೂರುತಿಯಾದ ಪುರಂದರವಿಠಲನೇ
ನಮ್ಮ ಅಳವಲ್ಲ ವಿಧಿಮೀರಿ ಬಾಳುವರೆ ೫

## ೪೯

ಆರೇನ ಮಾಡುವರು ಭುವನದೊಳಗೆ ।
ಪೂರ್ವಜನ್ಮದ ಕರ್ಮ ಪಣೆಯಲ್ಲಿ ಬರೆದುದಕೆ ಪ

ಮಾಡಿದಡಿಗೆಯದು ಕೆಡಲು ಮನೆಯ ಗಂಡನು ಬಿಡಲು ।
ಕೂಡಿ ಇದ್ದಾಸತಿಯ ಕುಣಿಸಾಡಲು ॥
ಗೋಡೆಯಲಿ ಬರೆದ ಹುಲಿ ಘುಡುಘುಡಿಸಿ ತಿನಬರಲು ।
ಆಡದಂತಹ ಮಾತ ಅಖಿಳರೂ ನಿಜವೆನಲು ೧

ಹೆತ್ತಾತಾಯ್ ಕರೆದು ಮಕ್ಕಳಿಗೆ ವಿಷ ಹಾಕಿದರೆ ।
ಮತ್ತೆ ತಂದೆಯೆ ಕರೆದು ಹೊರಗೆ ಮಾರಿದರೆ ॥
ತೊತ್ತು ಅರಸಿಗೆ ಪ್ರತಿ – ಉತ್ತರವ ನಡೆಸಿದರೆ ।
ಕತ್ತಲೆ ಕರಡಿಯಾಗಿ ಬೆನ್ನಟ್ಟಿ ಕಟ್ಟಿದರೆ ೨

ಹೊಲಬೇಲಿ ಮೇದರೆ – ಮೊಲ ಎದ್ದು ಇರಿದರೆ
ತಲೆಗೆ ತನ್ನಯ ಕೈಯ ಪೆಟ್ಟು ತಾಗಿದರೆ ॥
ಹೆಳಲು ಹಾವಾದರೆ – ಗೆಳೆಯ ರಿಪುವಾದರೆ ।
ಕಲಿಸಿದ್ದ ಅವಲಕ್ಕಿ ಕಲಪರಟಿ ನುಂಗಿದರೆ ೩

ಕಣ್ಣೊಳಗಿನಾ ಬೊಂಬೆ ಕಚ್ಚಾಡ ಬಂದರೆ ।
ಹೆಣ್ಣಿನಾ ಹೋರಾಟ ಹೆಚ್ಚಾದರೆ ॥
ಅನ್ನ ಉಣ್ಣದ ಮನುಜಗಜೀರ್ಣವಾದರೆ ।
ಪುಣ್ಯತೀರ್ಥಂಗಳಲಿ ಪಾಪ ಘಟಿಸಿದರೆ ೪

ಏರಿ ಕುಳಿತಾ ಕೊಂಬೆ ಎರಡಾಗಿ ಬಿಚ್ಚಿದರೆ ।
ವಾರಿಧಿಗಳು ಉಕ್ಕಿ ಮೇರೆ ಮೀರಿದರೆ ॥
ಆರಿದಾ ಇದ್ದಲಿಯು ಅಗ್ನಿಯಾಗುರಿದರೆ ।
ಧೀರ ಪುರಂದರ ವಿಠಲನ ದಯವು ತಪ್ಪಿದರೆ ೫

## ೫೦

ಇಲ್ಲಿ ನೋಡಲು ರಾಮ ಅಲ್ಲಿ ನೋಡಲು ರಾಮ ।
ಎಲ್ಲೆಲ್ಲಿ ನೋಡಲು ರಾಮಚಂದ್ರನು ಪ

ಮೂಲೋಕದಲ್ಲಿ ತ್ರೈಮೂರ್ತಿರೂಪಗಳಲ್ಲಿ
ಎಲ್ಲೆಲ್ಲಿ ನೋಡಲು ಅಲ್ಲಲ್ಲಿ ರಾಮರೂಪ ಅ.ಪ

ರಾವಣನ ಮೂಲಬಲವ ಕಂಡು ಕಪಿಗಳು
ಆವಾಗಲೆ ಹೊರಟೋಡುತಿರೆ
ಈವಾಗ ನರನಾಗಿ ಇರಬಾರದೆಂದೆನುತ
ದೇವ ರಾಮಚಂದ್ರ ಬಹುರೂಪ ತಾನಾದ ೧

ಅವನಿಗೆ ಇವ ರಾಮ ಇವನಿಗೆ ಅವ ರಾಮ
ಬುವಿಯೊಳಗೆ ಬೇರೆ ರೂಪವುಂಟೆ
ಅವನಿಯೊಳಿರುತಿಪ್ಪ ದುರುಳ ಜನರೆಲ್ಲ
ಅವರವರೆ ಹೊಡೆದಾಡಿ ಹತವಾಗಿ ಹೋದರು ೨

ಹನುಮಂತಾದಿ ಸಾಧುಜನರು ಅಪ್ಪಿಕೊಂಡು
ಕುಣಿದಾಡಿದರು ಅತಿ ಹರುಷದಲಿ
ಕ್ಷಣದಲಿ ಪುರಂದರವಿಠಲರಾಯನು
ಕೊನೆಗೆ ರಾಮಚಂದ್ರನೊಬ್ಬನಾಗಿ ನಿಂತ ೩

## ೫೧

ಇಲ್ಲಿಯೇ ಕುಳಿತಿದ್ದ ಭೂತವು – ಒಂದು
ಹಲ್ಲಿಯು ನುಂತು ಹದಿನಾಲ್ಕು ಲೋಕವ ಪ

ಸೂಳೆಯ ಮನೆಯಲಿ ಇದೆಯೊಂದು ಕೋಳಿ ।
ಕೋಳಿಯ ನಾಲಗೆ ಏಳು ತಾಳೆಯುದ್ಧ ॥
ಕೋಳಿ ನುಂಗಿತು ಏಳು ಕಾಳಿಂಗ ನಾಗನ ।
ಮೇಲೊಂದು ಬೇಡಿತು ಸಿಂಹದ ಮರಿಯ ೧

ಕಾನನದೊಳಗೊಂದು ಇರುವದು ಕೋಣ ।
ಕೋಣನ ಕೊರಳಿಗೆ ಮುನ್ನೂರು ಬಾವಿ ॥
ಕೋಣ ನೀರಿಗೆ ಹೋಗಿ ಕ್ಷೋಣಿ ಕಪಿಯ ಕೊಂದು ।
ಟೊಣ್ಣನ ಮನೆಯೊಳಗೌತನವಯ್ಯ ೨

ವೃಕ್ಷದಮೇಲೊಂದು ಸೂಕ್ಷ್ಮದ ಪಕ್ಷಿ ।
ಪಕ್ಷಿಭಕ್ಷಣವಾದ ಅಮೃತದ ಹಣ್ಣು ॥
ಪಕ್ಷಿ ನೋಡಲು ಬಂದ ರಾಕ್ಷಸ ಬ್ರಾಹ್ಮಣ ।
ಶಿಕ್ಷೆಯ ಮಾಡಿದ ಪುರಂದರವಿಠಲ ೩

## ೫೨

ಊಟಕ್ಕೆ ಬಂದೆವು ನಾವು ನಿನ್ನ –
ಕೋಟಲೆಗಳ ಬಿಟ್ಟು ಅಡಿಗೆ ಮಾಡಮ್ಮ ಪ.

ಕತ್ತಲಿಕ್ಕುತಲಿವೆ ಕಣ್ಣು – ಬಲು –
ಬತ್ತಿ ಬರುತಲಿವೆ ಕೈಕಾಲ ಜುಮ್ಮ ॥
ಹೊತ್ತು ಹೋಗಿಸಬೇಡವಮ್ಮ – ಒಂದು –
ತುತ್ತನಾದರು ಮಾಡಿ ಇಕ್ಕುವುದು ಧರ್ಮ ೧

ಒಡಲೊಳಗುಸಿರಿಲ್ಲವಮ್ಮ – ಗಳಿಗೆ –
ತಡವಾದರೀ ಪ್ರಾಣ ಉಳಿವುದಿಲ್ಲಮ್ಮ ॥
ನುಡಿಯು ಚಿತ್ತಕೆ ಬರಲಮ್ಮ – ಒಂದು –
ಪಿಡಿ ಅಕ್ಕಿ ಅನ್ನದಿ ಕೀರ್ತಿ ಪಡೆಯಮ್ಮ ೨

ಹೊನ್ನರಾಶಿಗಳನು ಸುರಿಯೆ – ಕೋಟಿ –
ಕನ್ನೆ ಧರಿತ್ರಿಯ ಧಾರೆಯನೆರೆಯೆ ॥
ಅನ್ನದಾನಕೆ ಇನ್ನು ಸರಿಯೆ – ನಮ್ಮ –
ಚೆನ್ನ ಪುರಂದರವಿಠಲನೊಳ್ ಬೆರೆಯೆ ೩

## ೫೩

ಏನಾದರೂ ಒಂದಾಗಲಿ – ನಮ್ಮ –
ಮನೆತುಂಬ ದೇವರು ಮರತುಂಡು ಕಲ್ಲು ಪ

ಅತ್ತೆಯ ಕಣ್ಣೊಂದು ಹರಿಯಲಿ ।
ಮತ್ತೆ ಮಾವನ ಕಾಲು ಮುರಿಯಲಿ ॥
ಹಿತ್ತಲಗೋಡೆಯು ಬಿರಿಯಲಿ – ಕಾ –
ಳ್ಗತ್ತಲೆಯಾದರೂ ಕವಿಯಲಿ ಹರಿಯೆ ೧

ಮನೆಯ ಗಂಡ ಮಾಯವಾಗಲಿ ।
ಉಣಬಂದ ಮೈದುನ ಒರಗಲಿ – ಸಿರಿ –
ಮನೆಯು ಹಾಳು ಹಾಳಾಗಲಿ – ನಾ –
ದಿನಿ ಅತ್ತಿಗೆಯರು ಸಾಯಲಿ ಹರಿಯೆ ೨

ಕಂದನ ಕಣ್ಣೊಂದು ಮುಚ್ಚಲಿ । ಆ
ಚಂದ್ರಂಗೆ ಹಾವು ಕಚ್ಚಲಿ ॥
ದ್ವಂದ್ವಾರ್ಥವನು ಬಿಚ್ಚಲಿ ಪು –
ರಂದರವಿಠಲ ಮೆಚ್ಚಲಿ ಹರಿಯೆ ೩

## ೫೪

ಒಂಬತ್ತು ಬಾಗಿಲೊಳು ಒಂದು ದೀಪವ ಹಚ್ಚಿ ।
ನಂಬಿಗಿಲ್ಲದೆ ಒಗತನ ಮಾಡಿದೆನೆ ಸೂವಕ್ಕ ಸುವ್ವಿ ಪ

ತನುವೆಂಬ ಕಲ್ಲಿಗೆ ಮನ ಧಾನ್ಯವನುತುಂಬಿ ।
ಒನೆದೊನೆದು ಒಬ್ಬಳೆ ಬೀಸಿದೆನೆ ೧

ಅಷ್ಟ ಮದಗಳೆಂಬ ಅಷ್ಟಧಾನ್ಯವ ತೆಗೆದು ।
ಕುಟ್ಟಿ ಕುಟ್ಟಿ ಕಾಳು ಮಾಡಿದೆನೆ ೨

ನಷ್ಟ ತರ್ಕವೆಂಬ ಕಟ್ಟಿಗೆ ಉರಿದು ನಾ ।
ನಿಷ್ಠೆಯಿಂದನ್ನವ ಮಾಡಿದೆನೆ ೩

ಅಷ್ಟರೊಳು ಗಂಡಬಂದ ಅಡುವ ಗಡಿಗೆಯ ಒಡೆದ ।
ಹುಟ್ಟು ಮುರಿದು ಮೂಲೆಗೆ ಹಾಕಿದನೆ ೪

ಹುಟ್ಟಿನಲಿ ತಿರುಹುವ ಒಟ್ಟಿನಲಿ ಕುದಿಸುವ ।
ಕಟ್ಟಂಬಲಿಯನೆತ್ತಿ ಕುಡಿಸಿದನೆ ೫

ಉಡುವ ಸೀರೆಯ ಸೆಳೆದು ಗಿಡದ ತೊಪ್ಪಲ ಸುತ್ತಿ ।
ಕಡೆಗೆ ಬಾರದಹಾಗೆ ಮಾಡಿದನೆ ೬

ಮಾಡಿದೆನೆ ಒಗೆತನ ನಂಬಿಗಿಲ್ಲದ ಮನೆಯೊಳು ।
ಕೊಡಿದೆನೆ ಪುರಂದರವಿಠಲನ ೭

## ೫೫

ಕಷ್ಟಪಟ್ಟರೂ ಇಲ್ಲ ಕಳವಳಿಸಿದರಿಲ್ಲ
ಭ್ರಷ್ಟಮಾನವ ಹಣೆಯ ಬರಹವೆನ್ನದೆ ಇಲ್ಲ ಪ

ಸಿರಿವಂತನ ಸ್ನೇಹಮಾಡಿ ನಡೆದರಿಲ್ಲ
ಪರಿಪರಿಯಲಿ ವಿದ್ಯೆ ಕಲಿತರಿಲ್ಲ
ನರಿಯ ಬುದ್ಧಿಯಲಿ ನಡೆದುಕೊಂಡರು ಇಲ್ಲ
ಅರಿಯದೆ ಹಲವ ಹಂಬಲಿಸಿದರಿಲ್ಲ ೧

ಕೊಂಡೆಗಾರಿಕೆಯನ್ನು ಹೇಳಿ ನಡೆದರಿಲ್ಲ
ಕಂಡಕಂಡವರಿಗೆ ಕೈ ಮುಗಿದರಿಲ್ಲ
ಗಂಡುಗತ್ತರಿಯನ್ನು ಕೊರಳಿಗಿಟ್ಟರು ಇಲ್ಲ
ಚಂಡನಾದರೂ ಇಲ್ಲ ಪರಿಹಾಸ್ಯವಲ್ಲ ೨

ಕಟ್ಟಾಳು ಕಡು ಜಾಣನಾಗಿ ಪುಟ್ಟಿದರಿಲ್ಲ
ಬೆಟ್ಟಗಳನು ಕಿತ್ತಿಟ್ಟರಿಲ್ಲ
ಸೃಷ್ಟಿಯೊಳು ಪುರಂದರವಿಠಲರಾಯ
ಕೊಟ್ಟವರಿಗೆ ಉಂಟು ಕೊಡದವರಿಗೆ ಇಲ್ಲ* ೩

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

## ೫೬

ಗಿಳಿಯು ಪಂಜರದೊಳಿಲ್ಲ – ಶ್ರೀ ರಾಮ ರಾಮ ।
ಗಿಳಿಯು ಪಂಜರದೊಳಿಲ್ಲ ಪ.

ಅಕ್ಕ ಕೇಳೆ ಎನ್ನ ಮಾತು ॥
ಚಿಕ್ಕದೊಂದು ಗಿಳಿಯ ಸಾಕಿದೆ ॥
ಅಕ್ಕ ನಾನಿಲ್ಲದ ವೇಳೆ ।
ಬೆಕ್ಕು ಕೊಂಡು ಹೋಯಿತಯ್ಯೋ ೧

ಅರ್ತಿಗೊಂದು ಗಿಳಿಯ ಸಾಕಿದೆ ।
ಮುತ್ತಿನ ಹಾರವನು ಹಾಕಿದೆ ॥
ಮುತ್ತಿನಂಥ ಗಿಳಿಯು ತಾನು ।
ಎತ್ತ ಹಾರಿ ಹೋಯಿತಯ್ಯೋ ೨

ಹಸಿರು ಬಣ್ಣದ ಗಿಳಿಯು ।
ಕುಶಲ ಬುದ್ಧಿಯ ಗಿಳಿಯು ॥
ಹಸಗುಂದಿ ಗಿಳಿಯು ತಾ ।
ಮೋಸ ಮಾಡಿ ಹೋಯಿತಯ್ಯೋ ೩

ಮುಪ್ಪಾಗದ ಬೆಣ್ಣೆಯ ।
ತಪ್ಪದೆ ಹಾಕಿದೆ ಹಾಲು ॥
ಒಪ್ಪದಿಂದ ಕುಡಿದು ತಾನು ।
ಗಪ್ಪನೆ ಹಾರಿ ಹೋಯಿತಯ್ಯೋ ೪

ಒಂಬತ್ತು ಬಾಗಿಲ ಮನೆಯು ।
ತುಂಬಿದ ಸಂದಣಿ ಇರಲು ॥
ಕಂಬ ಮುರಿದು ಡಿಂಬ ಬಿದ್ದು ।
ಅಂಬರಕಡರಿ ಹೋಯಿತಯ್ಯೋ ೫

ರಾಮ ರಾಮ ಎಂಬ ಗಿಳಿಯು ।
ಕೋಮಲ ಕಾಯದ ಗಿಳಿಯು ॥

ಸಾಮಜಪೋಷಕ ತಾನು ।
ಪ್ರೇಮದಿ ಸಾಕಿದ ಗಿಳಿಯು ೬

ಅಂಗೈಯಲಾಡುವ ಗಿಳಿಯು ।
ಮುಂಗೈಯ ಮೇಲಿನ ಗಿಳಿಯು ॥
ರಂಗ ಪುರಂದರವಿಠಲನಂತ ।
ರಂಗದೊಳಿಹ ಗಿಳಿಯು ೭

## ೫೭

ತನುವಿನೊಳಗೆ ಅನುದಿನವಿದ್ದು
ಎನಗೊಂದು ಮಾತ ಪೇಳದೆ ಪೋದೆ ಹಂಸಾ ಪ.

ಜಾಳಾಂಧ್ರವೆಂಬದು ಒಂಬತ್ತು ಬಾಗಿಲ ಮನೆ
ರೂವಾರವೆಂಬ ಒಂಬತ್ತು ಬಾಗಿಲ ದಾಟಿ
ಗಾಳಿ ತಂಪಿನೊಳಿದ್ದು ತಾನು ಹಾರಿ ಪೋಪಾಗ
ಕಾಯಕೆ ಹೇಳದೆ ಹೋಯಿತು ಒಂದು ಮಾತ ೧

ಹಳ್ಳ ಕೊಳ್ಳಗಳಲಿ ತಂಪಿನ ತಡಿಯಲಿ
ಬಳ್ಳಿ ಕಾಯಿ ಕಾತು ಫಲವಾಯಿತು
ಒಳ್ಳೆಯ ತನಿಹಣ್ಣು ಉದುರಿ ತಾ ಪೋಪಾಗ
ಬಳ್ಳಿಗೆ ಹೇಳದೆ ಹೋಯಿತು ಒಂದು ಮಾತ ೨

ಗಟ್ಟಿ – ಬೆಟ್ಟಗಳಲಿ ಶಾಖೆಯ ತುದಿಯಲಿ
ಕಟ್ಟಿತು ಜೇನದು ಸುಖಕಾಗಿ
ಗಟ್ಟಿ ತುಪ್ಪವನುಂಡು ನೊಣ ಹಾರಿ ಪೋಪಾಗ
ಹಿಪ್ಪೆಗೆ ಹೇಳದೆ ಹೋಯಿತು ಒಂದು ಮಾತ ೩

ರವಿವಿಸ್ತಾರವ ಹಂಸ ಕೇಳಿದನೈ ನಿನ್ನ
ಪೆಸರ ಪೇಳಲೆನ್ನಳವಲ್ಲ
ರಸ ವಸ್ತುವನುಂಡು ಜ್ಯೋತಿ ತಾ ಪೋಪಾಗ
ಪಣತಿಗೆ ಪೇಳದೆ ಹೋಯಿತು ಒಂದು ಮಾತು ೪

ಸಿರಿಪುರಂದರ ವಿಠಲನ ಮಾತು ಪುಸಿಯಲ್ಲ
ಹಣೆಯ ಬರೆಹವ ಮೀರಲು ಬಲ್ಲುದೆ ?
ಸರವನಾಣೆಯ ಮುತ್ತು ಆಗಲಿ ತಾ ಪೋಪಾಗ
ಚಿಪ್ಪಿಗೆ ಪೇಳದ್ದೋಯಿತು ಒಂದು ಮಾತ ೫

## ೫೮

ತಾ ಪಡೆದು ಬಂದುದಕುಪಾಯವೇನು ।
ಕೋಪದಲಿ ಶ್ರೀಪತಿಯ ಶಾಪಿಸಿದರೇನು ಪ.

ಅನ್ನವಸ್ತ್ರವಿಲ್ಲವೆಂದು ಅತಿ ಕ್ಲೇಶಪಟ್ಟರೇನು ।
ಧಾನ್ಯಧನಗಳ ಬೇಡಿ ಧರೆಗಿಳಿದರೇನು ।
ಎಣ್ಣೆಯನು ಪೂಸಿ ಹುಡಿಯೊಳಗೆ ಹೊರಳಿದರೇನು ।
ತನ್ನ ತಲೆ ಅಡಿಮಾಡಿ ತಪವ ಮಾಡಿದರೇನು ೧

ಸರಿಯ ಸುಜನರ ಕಂಡು ಕರುಬಿ ಕೊರಗಿದರೇನು ।
ಬರಿಮಾತುಗಳನಾಡಿ ಭ್ರಷ್ಟನಾದರೆ ಏನು ॥
ಇರುಳು ಹಗಲೂ ಹೋಗಿ ಆರ ಮೊರೆಯಿಟ್ಟರೇನು ।
ಅರಿಯದ – ಮನುಜರಿಗೆ ಅಲ್ಪರಿದರೇನು ೨

ಹೋಗದೂರಿನ ದಾರಿ ಕೇಳಿ ಮಾಡುವದೇನು ।
ಮೂಗನ – ಕೂಡ ಏಕಾಂತವೇನು ॥
ಯೋಗೀಶ ಪುರಂದರವಿಠಲನ ನೆನೆಯದವ ।
ತ್ಯಾಗಿಯಾದರೆ ಏನು ಭೋಗಿಯಾದರೆ ಏನು ೩

## ೫೯

ತಾನು ಮಾಡಿದ ಕರ್ಮ ತನಗಲ್ಲದೆ ।
ಏನ ಮಾಡಿದರು ಹಿಂದಿನ ಕರ್ಮವಲ್ಲದೆ ಪ.

ಮರಳಿ ಮರಳಿ ನೀರ ಹೊಕ್ಕು ಹೊರಟರೆ ಇಲ್ಲ ।
ಹೊರೆ ಹೊತ್ತು ತಲೆಪರಟೆಗಟ್ಟಿದರೂ ಇಲ್ಲ ॥

ಬರಿಯೆ ಭೂಮಿಯ ಕೆದರಿ ತೋಡಿ ನೋಡಿದರಿಲ್ಲ ।
ಪರರಿಗೆ ಬಾಯ್ದೆರೆದರೇನೊ ಇಲ್ಲ ೧

ಬಲಿದ ದೇಹವನಲ್ಪ ಮಾಡಿ ಬೇಡಿದರಿಲ್ಲ ।
ನೆಲದಿ ಕೊಲೆಗಡುಕ ತಾನಾದರಿಲ್ಲ ॥
ತಲೆಯಲಿ ಜಡೆಗಟ್ಟಿ ಅಡವಿ ಸೇರಿದರಿಲ್ಲ – ।
ಕೊಳಲೂದಿ ತುರುಗಳನು ಕಾಯ್ದರಿಲ್ಲ ೨

ಧೀರತನ ಬಿಟ್ಟು ದಿಗಂಬರನಾದರು ಇಲ್ಲ ।
ಮೀರಿದ್ದ ರಾಹುತ ತಾನಾದರಿಲ್ಲ ॥
ವರದ ಶ್ರೀ ಪುರಂದರವಿಠಲನ ಚರಣವ ।
ಸ್ಮರಿಸುತ ಅನುದಿನ ಸುಖಿಯಾಗಿರಯ್ಯ ೩

## ೬೦

ತಾರಕ್ಕ ಬಿಂದಿಗೆ ನೀರಿಗೆ ಹೋಗುವೆ ।
ತಾರೆ ಬಿಂದಿಗೆಯ ಪ.

ತರಲಾಗದಿದ್ದರೆ ಬಲಿಯಿಟ್ಟು ಬರುವೆನು ।
ತಾರೆ ಬಿಂದಿಗೆಯ ಅಪ

ಅಚ್ಚುತನೆಂಬುವ ಕಟ್ಟೆಯ ನೀರಿಗೆ
ತಾರೆಬಿಂದಿಗೆಯ – ಅಲ್ಲಿ – ।
ಮತ್ಸರ ಕ್ರೋಧವೆಂಬ ಕೊಡವನು ತೊಳೆವೆನು ತಾರೆ ೧

ರಾಮನಾಮವೆಂಬ ಸಾರದ ನೀರಿಗೆ ತಾರೆ
ಬಿಂದಿಗೆಯ – ಹರಿ – ।
ನಾಮವೆಂಬುವ ಹರಿದು ಹೋಗುವ ನೀರಿಗೆ ತಾರೆ ೨

ಅಜ್ಞಾನವೆಂಬ ನೀರ ಚೆಲ್ಲಿಬಂದೆನು ತಾರೆ ಬಿಂದಿಗೆಯ ।
ಸುಜ್ಞಾನವೆಂಬುವ ನೀರಿಗೆ ಹೋಗುವೆ ತಾರೆ ೩

ಗೋವಿಂದನೆಂಬುವ ಗುಣವುಳ್ಳ ನೀರಿಗೆ ತಾರೆ ಬಿಂದಿಗೆಯ ।
ಚೆಲ್ವ ಬೆಳದಿಂಗಳೊಳು ಚಿಲುಮೆಯ ನೀರಿಗೆ ತಾರೆ ೪

ಬಿಂದು ಮಾಧವನ ಏರಿಯ ನೀರಿಗೆ ತಾರೆ
ಬಿಂದಿಗೆಯ – ಪು –
ರಂದರವಿಠಲನ ಅಭಿಷೇಕಕೆ ಬೇಕು ತಾರೆ ೫

## ೬೧

ದೃಷ್ಟಿ ನಿನ್ನ ಪಾದದಲ್ಲಿ ನೆಡುವ ಹಾಗೆ – ಧರೆಯ
ದುಷ್ಟ ಜನರ ಸಂಗಗಳನು ಬಿಡುವ ಹಾಗೆ ಪ.

ಕೆಟ್ಟ ಮಾತ ಕಿವಿಯಿಂದ ಕೇಳದ ಹಾಗೆ ಮನವ
ಕಟ್ಟು ಸದಾ ನಿನ್ನ ಧ್ಯಾನ ಬಿಡದ ಹಾಗೆ ಅಪ

ದೃಷ್ಟನಾಗಿ ಕೈಯನೆತ್ತಿ ಕೊಡುವ ಹಾಗೆ ಶ್ರೀ
ಕೃಷ್ಣ ನಿನ್ನ ಪೂಜೆಯನ್ನು ಮಾಡುವ ಹಾಗೆ ॥
ಭ್ರಷ್ಟನಾಗಿ ನಾಲ್ವರೊಳು ತಿರುಗದ ಹಾಗೆ ಬಲು
ಶಿಷ್ಟ ಜನರ ಸೇವೆಯನು ಮಾಡುವ ಹಾಗೆ ೧

ಪುಟ್ಟಿಸಿದ ತಾಯಿ – ತಂದೆಯಲ್ಲವೆ ನೀನು – ಒಂದು
ಹೊಟ್ಟೆಗಾಗಿ ದೈನ್ಯ ಪಡಬೇಕೇ ನಾನು ॥
ಪಟ್ಟೆ – ಪಟ್ಟಾವಳಿ ಬೇಡಲಿಲ್ಲ ನಾನು ಎನ್ನ
ಗುಟ್ಟು ಅಭಿಮಾನಗಳ ಕಾಯೋ ನೀನು ೨

ನಟ್ಟನಡು ನೀರೊಳೀಸಲಾರೆ ನಾನು ಎತ್ತಿ
ಕಟ್ಟೆಯ ಸೇರಿಸಬೇಕಯ್ಯ ನೀನು ॥
ಬೆಟ್ಟದಷ್ಟು ಪಾಪ ಹೊತ್ತಿರುವೆ ನಾನು ಅದನು
ಸುಟ್ಟುಬಿಡು ಪುರಂದರ ವಿಠಲ ನೀನು ೩

## ೬೨

ನಡುಮನೆಯೊಳಗೊಂದು ನಾಲ್ಕು ತೆಂಗಿನಮರ –
ಹೇ ಗಿಣಿ – ಹೇ ಗಿಣಿಯೇ ।
ಕಡೆಮೊದಲಿಲ್ಲದೆ ಅದು ಕಾತು ಹಣ್ಣಾಯ್ತು – ಹೇಗಿಣಿ ಪ.

ಕಾಲಿಲ್ಲದವ ಹತ್ತಿ ಕೈಯಿಲ್ಲದವ ಕೊಯ್ದು – ಹೇ ಗಿಣಿ
ತಲೆಯೆಲ್ಲದವ ಬಂದು ಹೊತ್ತುಕೊಂಡುಹೋದ – ಹೇ ಗಿಣಿ ೧

ಕಣ್ಣಿಲ್ಲದವ ನೋಡಿ ಕೆಂಪಿನ ಹಣ್ಣೆಂದ – ಹೇ ಗಿಣಿ
ಬಾಯಿಲ್ಲದವ ನುಂಗಿ ಬಸಿರೊಳಗಿಂಬಿಟ್ಟ – ಹೇ ಗಿಣಿ ೨

ಬಲೆಯ ಹಾಕಿದರು ಬಲೆಯ ದಾಟುವದಯ್ಯ – ಹೇ ಗಿಣಿ
ಚೆಲುವ ಪುರಂದರವಿಠಲನೇ ಬಲ್ಲ – ಹೇ ಗಿಣಿ ೩

## ೬೩

ಪಾಪೋಸು ಹೋದುವಲ್ಲ – ಸ್ವಾಮಿ ಎನ್ನ –
ಪಾಪೋಸು ಹೋದುವಲ್ಲ ಪ.

ಅಪಾರ ಜನುಮದಿ ಆರ್ಜನೆಯ ಮಾಡಿದ ಅಪ

ಉರಗಾದ್ರಿಯಲಿ ಸ್ವಾಮಿಪುಷ್ಕರಣಿ ಮೊದಲಾದ ।
ಪರಿ ಪರಿ ತೀರ್ಥ ಸ್ನಾನಗಳ ಮಾಡೆ ॥
ಹರಿದಾಸರ ಕೂಡಿ ಶ್ರೀನಿವಾಸನ ಸಂ –
ದರುಶನದಲ್ಲಿ ಮೈಮರೆದಿದ್ದೆನೊ ಎನ್ನ ೧

ಪರಮಭಾಗವತರು ಹರಿಕಥೆ ಪೇಳಲು ।
ಪರಮಭಕುತಿಯಲಿ ಕೇಳುತಿದ್ದೆ ॥
ಪರಮಪಾಪಿಷ್ಠರ ಪಾಲಿಗೆ ಪೋದವು ।
ಪರಮಾತ್ಮನ ಮನಸಿಗೆ ಬಂತು ಹೀಗೆ ೨

ಮಾಯೆ ಒಲಿದು ಎನಗೆ ತಂದು ಕೊಟ್ಟಿದ್ದಳು ।
ದಾಯಾದಿಗಳು ನೋಡಿ ಸಹಿಸಲಿಲ್ಲ ॥
ಮಾಯಾರಮಣ ನೋಡಿ ಪುರಂದರವಿಠಲ
ಮಾಯೆಯಿಂದ ಮಟ್ಟಮಾಯವಾದವು ಈಗ ೩

## ೬೪

ಪಿಂಡಾಂಡದೊಳಗಿನ ಗಂಡನ ಕಾಣದೆ ।
ಮುಂಡೆಯರಾದರು ಪಂಡಿತರೆಲ್ಲ ಪ.

ಆಧಾರ ಮೊದಲಾದ ಆರು ಚಕ್ರಮೀರಿ ।
ನಾದಬಿಂದು ಕಳೆಯಳಿದ ಬಳಿಕ ॥
ಶೋಧಿಸಿ ಸುಧೆಯ ಪ್ರಸಾದವನುಣ್ಣದೆ ।
ಓದುತ ಮನದೊಳು ಒಂದನು ತಿಳಿಯದೆ ೧

ನಾದದೊಳಗೆ ಸುನಾದ ಓಂಕಾರದಿ ।
ಪದವ ಬಿತ್ತಿ ಪರಿಣಾಮಿಯಾಗದೆ ॥
ವೇದಾಂತರೂಪ ತದ್ರೂಪ ನಾಲಗೆಯಲಿ ।
ವಾದಿಸಿ ಮನದೊಳು ಒಂದನು ಅರಿಯದೆ ೨

ನವನಾಳ ಮಧ್ಯದಿ ಪವನ ಸುತ್ತಿದ್ದು ಪಣಿ ।
ಶಿವನ ತ್ರಿಪುಟ ಸ್ಥಿತಿ ಸ್ಥಿರವಾಗದೆ ॥
ಭವರೋಗವೈದ್ಯನ ಧ್ಯಾನವ ಮಾಡದೆ ।
ಶವುರಿ ಶ್ರೀ ಪುರಂದರ ವಿಠಲನ ಸ್ಮರಿಸದೆ ೩

## ೬೫

ಪುಟ್ಟಿದವೆರಡು ಜೀವನ ।
ಬಟ್ಟ ಬಯಲು ಬೇಲಿಯ ನುಂಗುತಿದೆಕೋ ಪ.

ಆಸರ ಕಪ್ಪೆಯ ದೇಶವನುಂಗಿತಾ ।
ಕಾಶವನೊಂದು ನೊಣ ನುಂಗಿತು ॥

ದೇಶದ ಹಳ್ಳ ಕೆರೆಕಟ್ಟೆ ಭಾವಿಗಳನೆಲ್ಲಾ ।
ಪೋಶನ ಮಾಡಿತು ಒಂದಿರುವೆ ೧

ಹಲ್ಲಿ ನುಂಗಿತೊಂದು ಕಲ್ಲಮಡಕೆಯನು ।
ಇಲಿ ನುಂಗಿತೀರೇಳು ಭುವನವನು ॥
ಹಾರಿದ್ದ ಕೊಡನೊಂದ ಹಸುಗೂಸು ನುಂಗಿತು ।
ಬಲ್ಲ ಮಹಾತ್ಮರು ಇದ ಪೇಳಿರಯ್ಯ ೨

ಕಾಷ್ಠವು ನುಂಗಿತು ಗಿರಿಪರ್ವತಂಗಳ ।
ಕೃಷ್ಣನ ನುಂಗಿತು ಕಡಲೆಕಾಯಿ ಉಂ – ।
ಗುಷ್ಟದಿಂದಲೆ ಸೀಳ್ದ ಸದ್ಗುರುರಾಯ ಅ
ದೃಷ್ಟ ಮೂರುತಿ ಶ್ರೀ ಪುರಂದರ ವಿಠಲ ೩

## ೬೬

ಪ್ರಾಚೀನಕರ್ಮವು ಬಿಡಲರಿಯದು
ಯೋಚನೆಯ ಮಾಡಿ ನೀ ಬಳಲಬೇಡ ಪ.

ಮುನ್ನಮಾಡಿದ ಕರ್ಮ ಬೆನ್ನಟ್ಟಿ ಬರುತಿರಲು
ತನ್ನಿಂದ ತಾನೆ ತಿಳಿಯಲರಿಯದೆ
ಇನ್ನು ದೇಹವನು ಆಶ್ರಯಿಸಿ ಫಲವೇನು
ಉನ್ನತ ಹರುಷದಲಿ ಮನದಿ ಯೋಚಿಸುವ ೧

ಲೋಕಾದಿ ಲೋಕಗಳ ತಿರುಗುವ ರವಿ ರಥಕೆ
ಏಕಗಾಲಿಗೆ ಏಳು ಕುದುರೆ ಕಟ್ಟಿ
ಆಕಾಶ ಮಾರ್ಗದಲಿ ತಿರುಗುವ ಅರುಣನಿಗೆ
ಬೇಕಾದ ಚರಣಗಳ ಕೊಡಲಿಲ್ಲ ಹರಿಯು ೨

ಸೇತುವೆಯ ಕಟ್ಟಿ ಲಂಕೆಗೆ ಹಾರಿ ಹನುಮಂತ
ಖ್ಯಾತಿಯನೆ ಮಾಡಿ ರಾವಣನ ಗೆದ್ದು
ಸೀತೆಯನು ತಂದು ಶ್ರೀರಾಮನಿಗೆ ಕೊಡಲಾಗಿ
ಪ್ರೀತಿಯಿಂ ಕೌಪೀನವ ಬಿಡಿಸಲಿಲ್ಲ ಹರಿಯು ೩

ನಿತ್ಯದಲಿ ಗರುಡ ಸೇವೆಯ ಮಾಡಿ ವಿಷ್ಣುವನು
ಹೊತ್ತುಕೊಂಡು ಇದ್ದ ಜಗವರಿಯಲು
ಅತ್ಯಂತ ಸೇವಕನೆಂದು ಮೂಗಿನ ಡೊಂಕು
ಎತ್ತಿ ನೆಟ್ಟಗೆ ಮಾಡಲಿಲ್ಲ ಶ್ರೀಕೃಷ್ಣ ೪

ಇಂತೆಂದು ಈಪರಿ ತಮ್ಮೊಳಗೆ ತಾವು ತಿಳಿದು
ಭ್ರಾಂತನಾಗದೆ ಬಯಕೆಗಳನು ಜರಿದು
ಶಾಂತಮೂರುತಿ ಸಿರಿ ಪುರಂದರವಿಠಲನ
ಸಂತತದಿ ಬಿಡದೆ ಭಜಿಸೆಲವೊ ಮನುಜ* ೫

## ೬೭

ಬಯಲಭಾವಿಯ ನೀರಿಗೆ ಬಂದಳೊಬ್ಬಳು ಬಾಲೆ ।
ಬಾಯಾರಿ ಬಿದ್ದಳು ಕೊಡವೊಡೆಯಿತು ನೀರುರುಳಿತು ಪ.

ನೀರಿಲ್ಲದೆ ನೆರಳಿಲ್ಲದೆ ಬೇರಿಲ್ಲದೆ ಸಸಿಹುಟ್ಟಿ
ಹೂವಿಲ್ಲದೆ ಕಾಯಿಲ್ಲದೆ ಅದು ಫಲಕೆ ಬಂದು ॥
ಕರವಿಲ್ಲದೆ ಕಾಲಿಲ್ಲದೆ ಕೊಯ್ವರಯ್ವರು ಆ ಹಣ್ಣನು ।
ಮರುಳಾಯಿತು ಮೂವತ್ತು ಸಾವಿರ ಮಂದಿ ೧

ಕುರುಡ ಕಂಡನು ಸರ್ಪನಡುವಿರುಳು ಬಾಹುದನು ।
ಮೂಕ ಕಂಡನು ಕನಸ ಕಿವುಡನು ಕೇಳಿದ ॥
ಇರವು ಹಾರಿತು ಗಗನಕೆ ಮರವು ಮುರಿಯಿತು ನೋಡಿ ।
ವಿಧಿ ತನ್ನ ಬೇಟೆಗೆ ಹೋಗುವ ಸಡಗರ ನೋಡಿ ೨

ಕಿಚ್ಚಿನ ಕೊಡದವಳೆ ನೀ ಬಂದೆ ತೋರಣಗಟ್ಟಿ ।
ರಚ್ಚೆಗೆ ಬಾಹೋರು ನಾಲುವರೊಳಗೆ
ಉಚ್ಚರಿಸಲೂ ಸಲ್ಲ ಕೇಳು ಪುರುಷನ ಸೊಲ್ಲ
ಅಚ್ಚಪುರಂದರವಿಠಲ ತಾನೆ ಬಲ್ಲ ೩

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

## ೬೮

ಬಲ್ಲವನಾದರೆ ಈ ತಳ್ಳಿಬೇಡ ।
ಅಲ್ಲದ ಪಥ ಇದರಾಸೆಯ ಬಿಡು ನೀನು ಪ.

ಸರ್ಪನ ಪಣೆಯೊಳು ಜೇನುತುಪ್ಪವ ಕಂಡು ।
ಅಪ್ಪನೆ ತಾರೆಂದು ಅಳುತಿರಲು ॥
ತುಪ್ಪದ ಸವಿಯನು ಜನರುಂಡುತೀರಲು ।
ಮುಪ್ಪಾಗಿ ಇರುವುದ ಕಂಡು ಮೂದಲಿಸುವ ೧

ನಂಬಿದ ಮನುಜರ ಹಂಬಲ ಮರೆವುದು ।
ಡೊಂಬಿಯವರು ಕಂಡು ತಡೆಯಲಾಗಿ ॥
ಕುಂಭದ ರೊಕ್ಕದ ಲಂಚವನಿತ್ತಲ್ಲಿ ।
ಅಂಬರವನು ಕಂಡು ನಗುತಿಪ್ಪ ಮನುಜನ ೨

ಅಂಬರವಡಗಿಯೆ ಕುಂಭಿನಿ ಜಾರಿಯೆ ।
ನಂಬಿದ ಮನುಜರು ನಡೆವಡೆಯೆ ॥
ಕುಂಭದ ನೀರನು ಚೆಲ್ಲುತ ಮಗುಳಲ್ಲಿ
ಕಂಬದ ಹಾಗೆಯೆ ನಿಂತಿಹ ನರನು ೩

ಇಟ್ಟಿಹ ಬಾಗಿಲ ಕಾಣದೆ ತಾ ಬಂದು ।
ಹೊಟ್ಟೆಯ ಬಗಿದಲ್ಲಿ ಹೊರವಂಟ ವೇಳೆ ॥
ಕಟ್ಟಿದ್ದು ಕರಗಿಯೆ ಸೆಟ್ಟೆಲೆ ಒಣಗಿಯೆ ।
ದುಷ್ಟನೊಬ್ಬನು ಬಂದು ನಿಂತಿಹನು ೪

ಕಡಹದ ಪಲ್ಲಕ್ಕಿ ಬೆಡಗನು ಕಾಣುತ ।
ಅಡವಿಯ ಮೃಗ ಬಂದು ಕುಳಿತಿರ್ದುದ ॥
ಒಡನೆ ಕಟ್ಟಿದ ವಾಹಕರು ಹದಿನಾರು ಮಂದಿ ।
ಕಡಮೆಯ ಸಂಬಳ ತಡವಿಡುವವರನು ೫

ಅಕ್ಕಿಯ ರಾಶಿಯು ತೀರಲು ಕೊಳಗವು ।
ಬೆಕ್ಕಸ ಬೆರಗಾಗಿ ಕುಳಿತಿಪ್ಪದು ॥

ಬಿಕ್ಕಿದ ಅಕ್ಕಿದ ಹಕ್ಕಿಯು ಹಕ್ಕಿಯೆ ।
ಗಕ್ಕನೆ ಹಾರುವ ಪಕ್ಷಿಯ ನೋಡುತ ೬

ಇರುತಿರೆ ಗಣಿತದಿ ರವಿ ಶಶಿ ಒಂದಾಗಿ ।
ಧರೆಯೊಳು ಸಾವಿರ ಎಲೆ ಬೀಳ್ವುದು ॥
ಎರವಿನಾಭರಣವ ಅವರವರೊಯ್ಯಲು ।
ಪುರಂದರವಿಠಲನ ಮೊರೆಬೀಳು ಕಂಡೆಯ ೭

## ೬೯

ಭಳಿಭಳಿರೆ ಎನ್ನ ಸುಖವೆಂಬುದೇ ಸುಖವು ।
ಹಲಕಾಲಕಿದೆ ಇರಲಿ ಕಾವೇರಿ ರಂಗ ಪ.

ತಂದೆ ನೀನೇ ಕೃಷ್ಣ ತಾಯಿ ಇಂದಿರದೇವಿ ।
ಮಂದಜಾಸನನೆನಗೆ ಹಿರಿಯಣ್ಣನು ॥
ಇಂದು ಶ್ರೀಸರಸ್ವತೀದೇವಿ ಅತ್ತಿಗೆಯು ।
ಎಂದೆಂದಿಗೂ ವಾಯುದೇವರೇ ಗುರುವು ೧

ಗುರುಪತ್ನಿ ಶ್ರೀ ಭಾರತಿಯು ನೋಡೆ ಮೇಲಾಗಿ
ಗರುಡಾಹಿರುದ್ರರಣ್ಣನ ಮಕ್ಕಳು ॥
ಸುರರು ಸನಕಾದಿಗಳು ಪರಮಬಾಂಧವರೆನಗೆ ।
ಸ್ಥಿರವಾದ ವೈಕುಂಠವೆನಗೆ ಮಂದಿರವು ೨

ನಿನ್ನ ಪಾದಾಂಬುಜವ ಭಜಿಸುವುದೆ ಸೌಭಾಗ್ಯ ।
ನಿನ್ನ ನಿರ್ಮಾಲ್ಯಗಳೆ ಭೋಗದ್ರವ್ಯ ॥
ನಿನ್ನ ಕಥೆ ಕೇಳುವುದೆ ಮಂಗಳಸುವಾದ್ಯಗಳು ।
ನಿನ್ನಂಥ ಅರಸೆನಗೆ ಪುರಂದರ ವಿಠಲ ૩

## ೭೦

ಮತದೊಳಗೆ ಒಳ್ಳೆ ಮತ ಮಧ್ವಮತವು – ರಘು – ।
ಪತಿ ಪೂಜಾವಿಧಾನಕೆ ಪಾವನ ಮತವು ಪ.

ನಾರಾಯಣನ ನಾಮ ತುಂಬಿದ ಮತವೇದ – ।
ಪಾರಾಯಣಕೆ ಅನುಕೂಲ ಮತವು ॥
ತಾರತಮ್ಯದಿ ಉದ್ಧರಿಸಿ ಶ್ರುತಿಗಳನೊರೆದ
ಧಾರಿಣೀಸುರರ ಸಂತೋಷದ ಮತವು ೧

ಅಕಲಂಕ ಶ್ರೀಹರಿಗೆ ವಜ್ರಾಂಕಿತ ಮತವು ।
ಸಕಲದೇಶಕೆ ಸನ್ಮತವಾದ ಮತವು ॥
ಅಕುಟಿಲ ಶುಕ – ಸನಕಾದಿ ಮುನೀಂದ್ರರ ।
ನಿಖಿಲಕ್ರಿಯ ಪದವೀವ ನಿರ್ಮಲ ಮತವು ೨

ಸರಸ ಸದ್ಗುಣ ಸತ್ಯಸಾತ್ವಿಕ ಮತವಿದು ।
ಗುರುಶಿಷ್ಯರಿಗೆ ಅನುಕೂಲ ಮತವು ॥
ಪರಮತ ಖಂಡಿಸಿ ಪಂಡಿತರು ಪೇಳಿದ ।
ಪುರಂದರವಿಠಲನ ಮತವೆ ಹನುಮನ ಮತವು ೩

## ೭೧

ಮಧ್ವಮತಕಿನ್ನು ಸರಿಯುಂಟೆ – ಪ್ರ – ।
ಸಿದ್ಧ ವೈಕುಂಠಕಿಂತಧಿಕ ಮತ್ತುಂಟೆ ? ಪ.

ವೃಕ್ಷದೊಳಗೆ ತುಳಸಿ ವೃಕ್ಷಕಧಿಕವಿಲ್ಲ ।
ಪಕ್ಷಿಯೊಳಗೆ ಗರುಡ ಪಕ್ಷಿಗಿಂತ ಮಿಗಿಲಿಲ್ಲ ॥
ದಕ್ಷ ಹನುಮಂತನಂತೆ ಲೋಕದೊಳು ಬಂಟರಿಲ್ಲ ।
ಲಕ್ಷ್ಮಿಗೆ ಸರಿಯಾದ ಸ್ತ್ರೀಯರಿಲ್ಲ – ನೀ ಕೇಳೊ ।
ಪಕ್ಷಿವಾಹನನೆನಿಪ ದೇವ ತಾ ಬಲ್ಲ ೧

ಸಕಲ ಮಣಿಗಳಲಿ ಚಿಂತಾಮಣಿಗೆ ಸರಿಯಿಲ್ಲ ।
ಮಿಕ್ಕ ರತ್ನಮೊಳಗೆ ಮಾಣಿಕತೆ ಮಿಗಿಲಿಲ್ಲ ॥
ಭಕುತರೊಳಗೆಲ್ಲ ಚಂದ್ರಶೇಖರಗೆ ಸರಿಯಿಲ್ಲ ।
ಮುಕುತಿ ಸುಖಗಳಿಗೆಣೆಯಿಲ್ಲ – ನೀ ಕೇಳೊ ।
ಅಖಿಳ ಬ್ರಹ್ಮಾಂಡನಾಯಕ ತಾ ಬಲ್ಲ ೨

ಪ್ರಥಮಯುಗದಲಿ ಹನುಮ , ದ್ವಿತಿಯ ಯುಗದಲಿ ಭೀಮ ।
ತೃತಿಯ ಯುಗದಲಿ ಮಧ್ವಾಚಾರ್ಯರೆಂದೆನಿಸಿ ॥
ಸತುಶಾಸ್ತ್ರಕಿದಿರಿಲ್ಲ ಅಮೃತಕಿಂತಧಿಕವಿಲ್ಲ ।
ರತಿಪತಿಗಿಂತ ಚೆಲುವರಿಲ್ಲ – ನೀ ಕೇಳೊ ।
ಕಥೆಯನು ಪುರಂದರವಿಠಲ ತಾ ಬಲ್ಲ ೩

## ೭೨

ಮಧ್ವಮತದ ಸಿದ್ಧಾಂತದ ಪದ್ಧತಿ ।
ಬಿಡಬೇಡಿ ಬಿಡಬೇಡಿ ಪ.

ಹರಿ ಸರ್ವೋತ್ತಮನಹುದೆಂಬ ಜ್ಞಾನವ ।
ತಾರತಮ್ಯದಲಿ ತಿಳಿವ ಮಾರ್ಗವಿದು ೧

ಘೋರ ಯಮನ ಬಾಧೆ ದೂರಕೆ ಮಾಡಿ ಮು –
ರಾರಿಯ ಚರಣವ ಸೇರುವ ಮಾರ್ಗವು ೨

ಭಾರತೀಶ ಮುಖ್ಯಪ್ರಾಣಾಂತರ್ಗತ ।
ನೀರಜಾಕ್ಷ ನಮ್ಮ ಪುರಂದರವಿಠಲನ ೩

## ೭೩

ಮಂದಿಯಗೊಡವೆ ಇನ್ನೇನು ಮಗಳೆ ।
ಮುಂದೆ ನೋಡಿ ಹಂಜಿ ನೂಲವ್ವ ಪ.

ಕಣ್ಣ ಮುಂದಿನ ಕಸವನು ತೆಗೆದು ।
ಸಣ್ಣಗೆ ನೀ ನೂಲವ್ವ ಅಪ

ವಸುಧೆಯ ದೊಡ್ಡ ಮಣೆಯಮಾಡಿ ।
ಶಶಿರವಿಗಳೆರಡು ಕಂಬವ ಹೂಡಿ ॥
ಆ ಸಿರಿರಂಗರ ಎರಡು ಚಕ್ರವ ಮಾಡಿ ।
ದರ್ಶನವೆಂಬುವ ನುಲಿಯನು ಬಿಗಿದು ೧

ಪರಬ್ರಹ್ಮನ ಅಳವು ಮಾಡಿ ।
ಕುರುಡು ನಾಶಿಕ ಬೆನಕದಿ ತಿಕ್ಕಿ ॥
ಹರಿ ನೀನೆ ಎಂಬ ದಾರವ ಕಟ್ಟಿ ।
ವಿರತಿ ವಿಚಾರದ ಬೆಲ್ಲಗಳಿಕ್ಕಿ ೨

ಜ್ಞಾನವೆಂಬುವ ಕದರನ್ನಿಕ್ಕಿ ।
ಮಾನಮದವೆಂಬ ಹಂಜಿಯ ಹಿಡಿದು ॥
ಧ್ಯಾನವೆಂಬ ಎಳೆಯನು ತೆಗೆದು ।
ಮೌನದಿಂದಲಿ ನೂಲವ್ವ ೩

ಕಕ್ಕುಲಾತಿ ಕಾಂಕ್ಷೆಗಳೆಂಬ ।
ಸಿಕ್ಕುದೊಡಕುಗಳನೆ ಬಿಡಿಸಿ ॥
ಒಕ್ಕುಡಿತೆಯ ಮಾಡಿದ ಮನದಿ ।
ಕುಕ್ಕಡಿನೂಲು ಕೂಡಿ ಹಾಕಮ್ಮ ೪

ಇಪ್ಪತ್ತೊಂದು ಸಾವಿರದ ಮೇ –
ಲಿಪ್ಪ ನೂರು ಎಳೆಯನು ಹೊಡೆದು ॥
ತಪ್ಪದೆ ಹುಂಜವ ಕಟ್ಟಿ ನೀನು ।
ಒಪ್ಪದಿ ಸೀಳು ಇಳುವಮ್ಮ ೫

ಸದ್ಯದಿ ನೀ ಜಾಡರಲ್ಲಿ ।
ಸಿದ್ಧ ಬದ್ಧ ಸೀಳುಗಳ ಹಾಕಿ ॥
ವಿದ್ಯೆಯೆಂಬುವ ಹಚ್ಚಡವನ್ನು ।
ಬುದ್ಧಿಯಿಂದಲಿ ನೇಯಿಸಮ್ಮ ೬

ಒಪ್ಪುವಾತ್ಮ ಪರಮಾತ್ಮನೆಂಬ ।
ಒಪ್ಪ ಎರಡು ಹೋಳುಗಳ ಹಚ್ಚಿ ॥
ತಪ್ಪದೆ ಪುರಂದರವಿಠಲನ ಪಾದಕೆ ।
ಒಪ್ಪಿಸಿ ಕಾಲವ ಕಳೆಯಮ್ಮ ೭

## ೭೪

ಮುತ್ತು ಬಂದಿದೆ ಕೇರಿಗೆ ಜನರು ಕೇಳಿ
ಮುತ್ತು ಬಂದಿದೆ ಪ.

ಭಕ್ತಿಯುಳ್ಳವರೆಲ್ಲ ಕಟ್ಟಿಕೊಳ್ಳಿ ಸೆರಗಿನಲ್ಲಿ ಅಪ

ಥಳಥಳಿಸುವ ಮುತ್ತು ಕಮಲ ನೇತ್ರದ ಮುತ್ತು
ಕಲುಷ ಪರ್ವತಕ್ಕಿದು ಕುಲಿಶವಾಗಿಪ್ಪ ಮುತ್ತು
ಹಲಧರಾನುಜವೆಂಬ ಪವಿತ್ರನಾಮದ ಮುತ್ತು
ಒಲಿದು ಭಜಿಪರ ಭವತರಿದು ಕಾಯುವ ಮುತ್ತು ೧

ಅಂಜದಿದ್ದವರಿಗೆ ಅಂಜಿಕೆ ತೋರುವ ಮುತ್ತು
ಭಂಜಿಸದ ಇತರ ಭಯವ ತೋರುವ ಮುತ್ತು
ಸಂಜೀವರಾಯ ಹೃದಯದೊಳಗಿಹ ಮುತ್ತು
------------------------ ೨

ಜ್ಞಾನವೆಂಬೊ ದಾರದಲ್ಲಿ ಪೋಣಿಸಿ ನೋಡುವ ಮುತ್ತು
ಜ್ಞಾನಿಗಳ ಮನದಲ್ಲಿ ಮೆರೆವ ಮುತ್ತು
ಆನಂದತೀರ್ಥರ ಮನದಲ್ಲೊಪ್ಪುವ ಮುತ್ತು
ಶ್ರೀನಿಧಿ ಪುರಂದರವಿಠಲನೆಂಬೋ ಆಣಿಯ ಮುತ್ತ * ೩

## ೭೫

ಮುಸುಕು ತೆಗೆದರೆ ಬೆನ್ನಲಿ ನಾಲಗೆ ಇದರ
ಹೆಸರು ಬಲ್ಲವರುಂಟೆ ಪೇಳಿರಿ ಜನರೆ ಪ.

ಸತ್ತಿಗೆ ತಲೆಯವಳು ನೆತ್ತಿಲಿ ಬಾಲದವಳು
ಕತ್ತಿನ ಕೆಳಗೆ ಕಪ್ಪಿನ ಕೊಪ್ಪಿನವಳು
ಸುತ್ತೇಳು ಮೈಗೆರಡು ಜೋಡು ಬಂಗಾರ
ಸೃಷ್ಟಿಯೊಳಗೆ ಇದರ ಹೆಸರ ಬಲ್ಲವರುಂಟೆ ೧

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ಜಡೆ ಮೆರಗುವ ಬಾಲೆ ಒಡಲೊಳಗೆ ಕರುಳಿಲ್ಲ
ಬಿಡದೆ ಪಟ್ಟಾವಳಿಯುಟ್ಟು ಬಲ್ಲವಳು
ಅಡವಿಯೊಳಗೆ ಪುಟ್ಟಿ ಪಡೆದಳು ದೇಹವ
ಪೊಡವಿಯೊಳಗೆ ಇದರ ಹೆಸರು ಬಲ್ಲವರುಂಟೆ ೨

ಬೇರಾಗಿ ಬೆರಳೈದು ಮೂರು ತಾನೊಂದಾಗಿ
ಯಾರು ಕಂಡರು ಎಂದು ನಸುನಗುತ
ಸೇರಿದ ಭಕುತರ ಪೊರೆವ ರಂಗಯ್ಯನ
ಸೇರಿ ಮೆಚ್ಚಿಸಿಕೊಳ್ಳೊ ಪುರಂದರವಿಠಲ ೩

## ೭೬

ಯಾರೂ ಸಂಗಡ ಬಾಹೋರಿಲ್ಲ
ನಾರಾಯಣ ನಿಮ್ಮ ನಾಮವೊಂದಲ್ಲದೆ ಪ.

ಹೊತ್ತು ನವಮಾಸ ಪರಿಯಂತರವು ಗರ್ಭದಲಿ
ಹೆತ್ತು ಬಲು ನೋವು ಬೇನೆಗಳಿಂದಲಿ
ತುತ್ತು ಬುತ್ತಿಯ ಕೊಟ್ಟು ಸಲಹಿದಂಥ ತಾಯಿ
ಅತ್ತು ಕಳುಹುವಳಲ್ಲದೆ ನೆರೆ ಬಾಹಳೆ ೧

ದೇವವಿಪ್ರರು ಅಗ್ನಿಸಾಕ್ಷಿಯಿಂದಲಿ ತನ್ನ
ಭಾವಶುದ್ಧಿಯಲಿ ಧಾರೆಯೆರಿಸಿಕೊಂಡ
ದೇವಿ ತನ್ನ ತಲೆಗೆ ಕೈಯಿಟ್ಟುಕೊಂಡು ಇ
ನ್ನಾವ ಗತಿಯೆಂದೆನುತ ಗೋಳಿಡುವಳಲ್ಲದೆ ೨

ಮತ್ತೆ ಪ್ರಾಣನು ತನುವ ಬಿಟ್ಟು ಹೋಗುವಾಗ
ಎತ್ತಿವನ ಹೊರಗೊಯ್ದು ಹಾಕೆಂಬರು
ಎತ್ತಿದ ಕಸಕಿಂತ ಕಡೆಯಾಯಿತೀ ದೇಹ
ವಿತ್ತವೆಷ್ಟಿದ್ದರೂ ಫಲವಿಲ್ಲ ಹರಿಯೆ ೩

ಪುತ್ರಮಿತ್ರರು ಸಕಲ ಬಂಧು ಬಳಗಗಳೆಲ್ಲ
ಹತ್ತಿರ ನಿಂತು ನೋಡುವರಲ್ಲದೆ

ಮೃತ್ಯುದೇವಿಯು ಬಂದು ಅಸುಗಳನು ಸೆಳೆವಾಗ
ಮತ್ತೆ ತನ್ನವರಿದ್ದು ಏನು ಮಾಡುವರು ೪

ಯಮನ ದೂತರು ಬಂದು ಪಾಶಂಗಳನೆ ಎಸೆದು
ಮಮತೆಯಿಲ್ಲದೆ ಪ್ರಾಣ ಎಳೆಯುತಿರಲು
ವಿಮುಖನಾಗಿ ತಾನು ವ್ಯಥೆಯಿಂದ ಪೋಪಾಗ
ಕಮಲಾಕ್ಷ ಪುರಂದರವಿಠಲ ನೀನಲ್ಲದೆ * ೫

## ೭೭

ರಾಗಿ ತಂದಿರಾ – ಭಿಕ್ಷಕೆ –
ರಾಗಿ ತಂದಿರಾ ಪ.

ಯೋಗ್ಯರಾಗಿ ಭೋಗ್ಯರಾಗಿ ।
ಭಾಗ್ಯವಂತರಾಗಿ ನೀವು ಅ.ಪ.

ಅನ್ನದಾನವ ಮಾಡುವರಾಗಿ ।
ಅನ್ನಛತ್ರವನಿಟ್ಟವರಾಗಿ ॥
ಅನ್ಯವಾರ್ತೆಗಳ ಬಿಟ್ಟವರಾಗಿ ।
ಅನುದಿನ ಭಜನೆಯ ಮಾಡುವರಾಗಿ ೧

ಮಾತಾಪಿತರನು ಸೇವಿಪರಾಗಿ ।
ಪಾತಕಕಾರ್ಯವ ಬಿಟ್ಟವರಾಗಿ ।
ಖ್ಯಾತಿಯಲ್ಲಿ ಮಿಗಿಲಾದವರಾಗಿ ।
ನೀತಿಮಾರ್ಗದಲಿ ಖ್ಯಾತರಾಗಿ ೨

ಗುರುಕಾರುಣ್ಯವ ಪಡೆದವರಾಗಿ
ಗುರುವಿನ ಮರ್ಮವ ತಿಳಿದವರಾಗಿ ॥
ಗುರುವಿನ ಪಾದವ ಸ್ಮರಿಸುವರಾಗಿ ।
ಪರಮ ಪುಣ್ಯವನು ಮಾಡುವರಾಗಿ ೩

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ವೇದ ಪುರಾಣವ ತಿಳಿದವರಾಗಿ ।
ಮೇದಿನಿಯಾಳುವಂಥವರಾಗಿ ॥
ಸಾಧುಧರ್ಮವಾಚರಿಸುವರಾಗಿ ।
ಓದಿ ಗ್ರಂಥಗಳ ಪಂಡಿತರಾಗಿ ೪

ಆರರ ಮಾರ್ಗವ ಅರಿತವರಾಗಿ ।
ಮೂರರ ಮಾರ್ಗವ ತಿಳಿದವರಾಗಿ ॥
ಭೂರಿತತ್ವವನು ಬೆರೆತವರಾಗಿ ।
ಕ್ರೂರರ ಸಂಗವ ಬಿಟ್ಟವರಾಗಿ ೫

ಕಾಮಕ್ರೋಧಗಳನಳಿದವರಾಗಿ ।
ನೇಮನಿಷ್ಠೆಗಳ ಮಾಡುವರಾಗಿ ॥
ಆ ಮಹಾಪದದಲಿ ಸುಖಿಸುವರಾಗಿ ।
ಪ್ರೇಮದಿ ಕುಣಿಕುಣಿದಾಡುವರಾಗಿ ೬

ಸಿರಿರಮಣನ ಸದಾ ಸ್ಮರಿಸುವರಾಗಿ ।
ಕುರುಹಿಗೆ ಬಾಗುವಂತವರಾಗಿ ॥
ಕರೆಕರೆಸಂಸಾರ ನೀಗುವರಾಗಿ ।
ಪುರಂದರವಿಠಲನ ಸೇವಿಪರಾಗಿ ೭

## ೭೮

ವಿಧಾತೃದೇವತೆಗಳು ವಿಷ್ಣುವಿನ ಹಿಂದೆ ।
ಇದಕೆ ತಪ್ಪಿದರೆ ಫಣಿಫಣವ ಪಿಡಿವೆ ಪ.

ಸಕಲ ತೀರ್ಥಗಳೆಲ್ಲ ಸಾಲಿಗ್ರಾಮದ ಹಿಂದೆ ।
ಪ್ರಕಟಗ್ರಂಥಗಳೆಲ್ಲ ಭಾರತದ ಹಿಂದೆ ॥
ಸಕಲ ವೃಕ್ಷಗಳೆಲ್ಲ ಶ್ರೀ ತುಳಸಿಯ ಹಿಂದೆ ।
ಸಕಲ ಪರ್ವತಗಳು ಮೇರುವಿನ ಹಿಂದೆ ೧

ಮತಗಳೆಲ್ಲವು ಮಧ್ವಮತದ ಸಾರದ ಹಿಂದೆ ।
ಇತರ ವರ್ಣಗಳೆಲ್ಲ ವಿಪ್ರರ ಹಿಂದೆ ॥

ವ್ರತಗಳೆಲ್ಲವು ಹರಿಯ ದಿನದ ವ್ರತದ ಹಿಂದೆ ।
ಅತಿಶಯದ ದಾನಗಳು ಅನ್ನದಾನದ ಹಿಂದೆ ೨

ಉತ್ತಮಗುಣಗಳೆಲ್ಲ ಉದಾರತ್ವದ ಹಿಂದೆ ।
ಮತ್ತೆ ಕರ್ಮಗಳು ಮಜ್ಜನದ ಹಿಂದೆ ॥
ಪೃಥ್ವಿಯೊಳಗೆ ನಮ್ಮ ಪುರಂದರವಿಠಲನ ।
ಭಕ್ತವತ್ಸಲನೆಂಬ ನಾಮವೇ ಮುಂದೆ ೩

## ೭೯

ಶ್ರೀಪತಿಯು ನಮಗೆ ಸಂಪದವೀಯಲಿ – ವಾ
ಣೀಪತಿಯು ನಮಗೆ ದೀರ್ಘಾಯು ಕೊಡಲಿ ಪ.

ಸುರರ ಗಣವನು ಪೊರೆಯೆ ವಿಷವ ಕಂಠದಲಿಟ್ಟ
ಹರ ನಿತ್ಯ ನಮಗೆ ಸಹಾಯಕನಾಗಲಿ
ಸುರರೊಳುನ್ನತವಾದ ನಿತ್ಯ ಭೋಗಂಗಳನು
ಪುರುಹೂತ ಪೂರ್ಣಮಾಡಿಸಲಿ ನಮಗೆ ೧

ವಿನುತ ಸಿದ್ಧಿಪ್ರದನು ವಿಘ್ನೇಶ ದಯದಿಂದ
ನೆನೆದ ಕಾರ್ಯಗಳೆಲ್ಲ ನೆರವೇರಿಸಲಿ
ದಿನದಿನದಿ ಅಶ್ವಿನಿಗಳಾಪತ್ತುಗಳ ಕಳೆದು
ಮನಕೆ ಹರುಷವನಿತ್ತು ಮನ್ನಿಸಲಿ ಬಿಡದೆ ೨

ನಿರುತ ಸುಜ್ಞಾನವನು ಈವ ಮಧ್ವರಾಯ ।
ಗುರುಗಳಾಶೀರ್ವಾದ ನಮಗಾಗಲಿ
ಪುರಂದರವಿಠಲನ ಕರುಣದಿಂದಲಿ ಸಕಲ
ಸುರರೊಲುಮೆ ನಮಗೆ ಸುಸ್ಥಿರವಾಗಲಿ ೩

## ೮೦

ಸತ್ಯ ಜಗತಿದು ಪಂಚಭೇದವು, ನಿತ್ಯ ಶ್ರೀ ಗೋವಿಂದನ ।
ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ ಪ.

ಜೀವ ಈಶಗೆ ಭೇದ ಸರ್ವತ್ರ ಜೀವ ಜೀವಕೆ ಭೇದವು ।
ಜೀವ ಜಡರೊಳು ಭೇದ ಜಡ ಜಡರೊಳು ಭೇದ
ಜಡ ಪರಮಾತ್ಮಗೆ ೧

ಮಾನುಷೋತ್ತಮರಧಿಕ ಕ್ಷಿತಿಪರು ಮನುಜ ದೇವ ಗಂಧರ್ವರು ।
ಜಾನಪಿತರಜಾನ ಕರ್ಮಜದಾನವಾರಿ ತತ್ತೇಶರು ೨

ಗಣಪ ಮಿತ್ರರು ಸಪ್ತಋಷಿಗಳು ವಹ್ನಿ – ನಾರದ ವರುಣನು ।
ಇನಜಗೆ ಸಮ ಚಂದ್ರ – ಸೂರ್ಯರು ಮನುಸುತೆಯು
ಹೆಚ್ಚು ಪ್ರವಹನು ೩

ದಕ್ಷಸಮ ಅನಿರುದ್ಧ ಗುರು ಶಚಿ ರತಿ ಸ್ವಾಯಂಭುವರಾರ್ವರು
ಕಕ್ಷಪ್ರಾಣನಿಗಿಂತ ಕಾಮನು ಕಿಂಚಿದಧಿಕನು ಇಂದ್ರನು ೪

ದೇವ ಇಂದ್ರನಿಗಧಿಕ ಮಹರುದ್ರ ದೇವರಿಗೆ ಸಮ ಗರುಡನು ।
ಕೇವಲವು ಈ ಶೇಷ – ರುದ್ರರು ದೇವಿ ಹೆಚ್ಚು ಸರಸ್ವತೀ ೫

ವಾಯುವಿಗೆ ಸಮರಿಲ್ಲ ಜಗದೊಳು ವಾಯುದೇವರೆ ಬ್ರಹ್ಮರು ।
ವಾಯುಮುಕ್ತಗೆ ಕೋಟಿಗುಣದಿಂದಧಿಕಶಕ್ತಳು ಶ್ರೀ ರಮಾ ೬

ಅನಂತ ಗುಣದಿಂ ಲಕುಮಿಗಧಿಕನು ಶ್ರೀ ಪುರಂದರವಿಠಲನು ।
ಘನರು ಸಮರೂ ಇಲ್ಲ ಜಗದೊಳು ಹನುಮಹೃತ್ಪದ್ಮವಾಸಗೆ ೭

## ೮೧

ಸದರವಿಲ್ಲವೆ ನಿಜಯೋಗ । ಸಚ್ಚಿದಾನಂದ ।
ಗುರು ದಿನಂಬರನ ಸಂಯೋಗ ಪ.

ಅಡಿಯನಂಬರ ಮಾಡದನಕ । ಅಗ್ನಿ ।
ಕಿಡಿಯೆದ್ದು ಮೇಲಣ ಕೊಡನುಕ್ಕದನಕ ॥
ಒಡನೆರಡೊಂದಾಗದನಕ । ಅಲ್ಲಿ ।
ಒಡಗೂಡಿ ಅಂಗನೆ ನುಡಿ ಕೇಳದನಕ ೧

ನಾಡಿ ಹಲವು ಕಟ್ಟದನಕ । ಬ್ರಹ್ಮ ।
ನಾಡಿಯೊಳು ಪೊಕ್ಕು ಮುಳುಗಾಡದನಕ
ಕಾಡುವ ಕಪಿ ಸಾಯದನಕ । ಸತ್ತ
ಒಡಿನೊಳಗೆ ರಸ ತೊಟ್ಟಿಕ್ಕದನಕ ೨

ಅರಿಕುಂಭ ಕಾಣದನಕ । ಅಲ್ಲಿ ।
ಸಾಧಿಸಿ ಭೇದಿಸಿ ಸವಿಯುಣ್ಣದನಕ ॥
ಭೇದವು ಲಯವಾಗದನಕ । ಬಡ ।
ದಾದಿಕೇಶವ ನಿಮ್ಮ ನೆಲೆಗಾಣದನಕ* ೩

## ೮೨

ಸಂಸಾರವೆಂಬ ಸಾಗರವನುತ್ತರಿಸುವರೆ
ಕಂಸಾರಿಯೆಂಬ ನಾಮವೊಂದೆ ಸಾಕು ಮರುಳೆ ಪ.

ಯತಿಯಾಗಬೇಡ ವೈರಾಗ್ಯವರಿತು ಸಕಲ
ವ್ರತವ ಮಾಡುವೆನೆಂಬ ನೇಮ ಬೇಡ ॥
ಶ್ರುತಿ – ಸ್ಮೃತಿಗಳನರಿತು ನಡೆವೆನೆನಬೇಡ ಶ್ರೀ –
ಪತಿಯ ಶ್ರೀನಾಮವೊಂದೆ ಸಾಕು ಮರುಳೆ ೧

ತನುವ ದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ
ವನಿತೆಯನು ಬಿಟ್ಟು ತಪವಿರಲು ಬೇಡ ॥
ಅನುವರಿತು ನೀರೊಳಗೆ ಬಿಡದೆ ಮುಳುಗಲುಬೇಡ ।
ವನಜಾಕ್ಷನ ನಾಮವೊಂದೇ ಸಾಕು ಮರುಳೆ ೨

ತೀರ್ಥಯಾತ್ರೆಗೆ ನೀನು ತಿರುಗಿ ಝೊಂಪಿಸಿ ಕೃ –
ತಾರ್ಥನಾದೆನೆಂಬ ಹೆಮ್ಮೆ ಬೇಡ ॥
ಧೂರ್ತಭಂಜನ ನಮ್ಮ ಪುರಂದರವಿಠಲ ಸಂ –
ಕೀರ್ತನೆಯ ಮಾಡಿ ಮೋಕ್ಷವನೈದು ಮರುಳೆ** ೩

---

* ಈ ಕೀರ್ತನೆಯು ಪುರಂದರದಾಸರ ಅಂಕಿತದಲ್ಲಿಯೂ ದೊರೆಯುತ್ತದೆ. ಆದರೆ ಇಲ್ಲಿ ಕನಕದಾಸರ ಅಂಕಿತವೇ ಹೆಚ್ಚು ಹೊಂದುತ್ತದೆ.

** ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

## ೮೩

ಸ್ಥಳವಿಲ್ಲವೈ ಭಾಗವತರೇ – ಈಗ
ಒಳಗೆ ಹೊರಗೆ ಸಂದಣಿ ತುಂಬಿದೆ ನೋಡಿ ಪ.

ಅಯ್ದೊಕ್ಕಲಿದರೊಳಗುಂಟು – ಮತ್ತೆ
ಅಯ್ದು ಮಂದಿಯು ಬೇರೆ ಉಂಟು
ಅಯ್ದು ನಾಲ್ಕು ಇದರೊಳಗುಂಟು – ನೀವು
ಬೈದರೆ ಏನು ತೆಗೆಯಿರಿ ನಿಮ್ಮ ಗುಂಟು ೧

ಆರುಮಂದಿ ಕಳ್ಳರುಂಟು – ಮ
ತ್ತಾರು ಮಂದಿಗೆ ಮತ್ತೆ ಪ್ರೇರಕರುಂಟು
ಪ್ರೇರಕರಿಗೆ ಕರ್ತರುಂಟು – ವಿ
ಚಾರಿಸುವುದಕೆ ನಿಮಗೇನುಂಟು ? ೨

ಅತ್ತೆಯವಳು ಬಲು ಖೋಡಿ – ಎನ್ನ
ಒತ್ತಿ ಆಳುವ ಪುರುಷನು ಬಲುಹೇಡಿ
ಮತ್ತೆ ಮಾವನು ಅಡನಾಡಿ – ಸರಿ
ಹೊತ್ತಿಗೆ ಬರುವ ಮೈದುನ ಬಲುಕೇಡಿ ೩

ನೆಗೆಣ್ಣಿ ಎಂಬುವಳು ಕೋಪಿ – ಮಲ
ಮಗಳು ಕಂಡರೆ ಸೇರಳು ಬಲು ಪಾಪಿ
ಹಗೆಗಾತಿ ಅತ್ತಿಗೆ ಶಾಪಿ – ಸುತ್ತ
ಬೊಗಳುವಳು ತಾಳೆನು ನಾನು ಮುಂಗೋಪಿ ೪

ಎಷ್ಟು ಹೇಳಲಿ ನಿಮಗೆಲ್ಲ – ಈ
ಕಷ್ಟ ಸಂಸಾರದೊಳಗೆ ಸುಖವಿಲ್ಲ
ಸ್ಪಷ್ಟವಾಗಿ ಪೇಳ್ವೆ ಸೊಲ್ಲ – ದೇವ
ಸೃಷ್ಟೀಶ ಪುರಂದರವಿಠಲ ಬಲ್ಲ ೫

## ೮೪

ಸಾಕು ಸಾಕು ಸಂಸಾರ ಸಜ್ಜಾಗಿಲ್ಲ ಒಲ್ಲೆ ಒಗೆತನವ ಪ.

ಆರುಮಂದಿ ಗಂಡರಾಳುವರು ಎನ್ನ
ಆರುಮಂದಿಗೆ ಮೂರು ಸುತರೆನಗೆ
ಆರು ಮೂರೇಳ್ವರು ಭಾವ – ಮೈದುನರೆಲ್ಲ
ಆರರೆಂದರೆ ಬಿಡರು ಆರಿಗುಸುರಲಮ್ಮ ೧

ಹತ್ತುಮಂದಿ ಬೆನ್ನ ಮುತ್ತಿಕೊಂಡರೆ
ಮತ್ತೆ ಬಿಟ್ಟೆನೆಂದೆ ಬಿಡಗೊಡರು
ಅತ್ತಿಗೆ ನೆಗೆಣ್ಣೆ ಹೊತ್ತು ಹೊತ್ತಿನೊಳೆಮ್ಮ
ನೆತ್ತಿಯೊಳು ಹಸ್ತವಿಟ್ಟೆನ್ನ ಸೆಣಸುವರಮ್ಮ ೨

ಪಂಚರೈವರು ಎನ್ನ ತೊಂತ ಹಂತಯಂದು
ಸಂಚಿತದ ಕರ್ಮವನುಣಿಸುವರು
ವಂಚನೆಯಳಿದ ಪ್ರಪಂಚವನು ಕಳೆದಿಹ
ಮಿಂಚಿನ ಪರಿಯ ವಿರಿಂಚಿ ಬರೆದಿಹನಮ್ಮ ೩

ಜೇಷ್ಠನಾಗಿಹ ಪುತ್ರ ಧರ್ಮನ ಅಗಲಿಸಿ
ಭ್ರಷ್ಟ ಅತ್ತೆಯು ಮೃತ್ಯುವಾಗಿಹಳು
ಮೆಟ್ಟಿಲಿನ ಹೊರಗೆ ಕಣ್ಣಿಟ್ಟು ಸಾಧುಗಳನು
ದೃಷ್ಟಿಸಿ ನೋಳ್ಪೆನೆಂದರೆ ಕ್ಷಣ ಬಿಡರಮ್ಮ ೪

ಒಂಬತ್ತು ಬಾಗಿಲ ಊಳಿಗವನು ಮಾಳ್ಪ
ಕುಂಭಕದ ನರಕ ಕಾವರ ದಾಳಿ
ಡಂಭಕವನು ಬಿಟ್ಟು ಇಂಬಿನೊಳಿಟ್ಟು ವಿ
ಶ್ವಂಭರ ಪುರಂದರವಿಠಲ ಧ್ಯಾನದ ಗುಟ್ಟು ೫

## ೮೫

ಸ್ನಾನ ಮಾಡಿರಯ್ಯ ಜ್ಞಾನತೀರ್ಥದಲಿ
ನಾನು ನೀನೆಂಬಹಂಕಾರವ ಬಿಟ್ಟು ಪ.

ತನ್ನೊಳು ತಾನೆ ತಿಳಿದರೊಂದು ಸ್ನಾನ
ಅನ್ಯಾಯಗಾರಿ ಕಳೆದರೊಂದು ಸ್ನಾನ
ಅನ್ಯಾಯವಾಡದಿದ್ದರೊಂದು ಸ್ನಾನ
ಚೆನ್ನಾಗಿ ಹರಿಯ ನೆನೆದರೊಂದು ಸ್ನಾನ ೧

ಪರಸತಿಯ ಬಯಸದಿದ್ದರೆ ಒಂದು ಸ್ನಾನ
ಪರನಿಂದೆ ಮಾಡದಿದ್ದರೆ ಒಂದು ಸ್ನಾನ
ಪರದ್ರವ್ಯ ಅಪಹರಿಸದಿರೆ ಒಂದು ಸ್ನಾನ
ಪರತತ್ವ ತಿಳಿದುಕೊಂಡರೆ ಒಂದು ಸ್ನಾನ ೨

ತಂದೆತಾಯಿಗಳ ಸೇವೆ ಒಂದು ಸ್ನಾನ
ಮುಂದಿನ ಮಾರ್ಗ ತಿಳಿದರೊಂದು ಸ್ನಾನ
ಬಂಧನವನು ಬಿಡಿಸಿದರೊಂದು ಸ್ನಾನ
ಸಂಧಿಸಿ ತಿಳಿದುಕೊಂಡರೆ ಸೇತು ಸ್ನಾನ ೩

ಅತ್ತೆ ಮಾವನ ಸೇವೆಯೊಂದು ಸ್ನಾನ
ಭರ್ತನ ಮಾತು ಕೇಳುವುದೊಂದು ಸ್ನಾನ
ಕ್ಷೇತ್ರಪಾತ್ರರ ಸಹವಾಸ ಒಂದು ಸ್ನಾನ
ಪಾರ್ಥಸಾರಥಿ ನಿಮ್ಮ ಧ್ಯಾನವೆ ಸ್ನಾನ ೪

ವೇದಶಾಸ್ತ್ರಗಳನೋದಿದರೊಂದು ಸ್ನಾನ
ಭೇದಾಭೇದ ತಿಳಿದರೊಂದು ಸ್ನಾನ
ಸಾಧು ಸಜ್ಜನರ ಸಂಗ ಒಂದು ಸ್ನಾನ
ಪುರಂದರವಿಠಲನ ಧ್ಯಾನವೆ ಸ್ನಾನ * ೫

## ೮೬

ಸುಣ್ಣವಿಲ್ಲ ಭಾಗವತರೆ ।
ಸುಣ್ಣನೆಯ ಗೋಡೆಗೆ ನಿನ್ನ ತೊಡೆದು ಬಿಟ್ಟೆ ಪ.

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ವೀಳೆಯ ಹಾಕುವನಲ್ಲ ವ್ಯಾಧಿಷ್ಟ ನನಗಂಡ ॥
ಬಾಳುಗೇಡಿ ಎನ್ನ ಬಾಯನೋಡಿ ॥
ಹಾಳಾದ ಮನೆ ಹೊಕ್ಕು ಗೋಳುಗರಿಯತ್ತೇನೆ ।
ಕೇಳಿದ ಬಳಿಕಿನ್ನು ಹೇಳದೆ ಫಲವೇನು ೧

ಮದ್ದು ಮದ್ದು ತಿಂದು ಮನೆಯೆಲ್ಲ ಬರಿದಾಯ್ತು ।
ಹೊದ್ದಿತು ಮೂದೇವಿ ಮೈದುನಗೆ ॥
ಬದ್ಧತನದಿ ಸಂಜೆ ಭಂಗಿಮುಕ್ಕುವ ಭಾವ ।
ಒದ್ದು ಕೊಳ್ಳುತಾನೆ ಒಳಗೆ ಕದವನಿಕ್ಕಿ ೨

ಅನ್ನಕಾರಿ ಅತ್ತೆ ತೊನ್ನುಬಡಕ ಮಾವ ।
ಗನ್ನ ಘಾತಕಿರಂಡೆ ಅತ್ತಿಗೆ ಮುಂಡೆ ॥
ಎನ್ನ ಗೋಳು ತಾಗಿ ಎಂದಿಗೆ ಹೋದಾರು ।
ಪನ್ನಗಶಯನ ಶ್ರೀ ಪುರಂದರವಿಠಲ ೩

## ೮೭

ಸುಲಭವಲ್ಲವೊ ಮಹಾನಂದ ತ –
ನ್ನೊಳಗೆ ತಿಳಿಯಬೇಕು ಗುರುದಯದಿಂದ ಪ.

ಬೆಕ್ಕನು ಇಲಿ ನುಂಗುವನಕ – ಕಡು –
ರಕ್ಕಸಿಯನು ಕಂಡು ಗಿಣಿ ನುಂಗುವನಕ ॥
ಮಕ್ಕಳ ಭಕ್ಷಿಸುವನಕ – ಮದ –
ಸೊಕ್ಕಿದ ಗಜವನು ನರಿ ನುಂಗುವನಕ ೧

ಇಬ್ಬರೊಡನೆ ಕೂಡುವನಕ – ಮೂರು –
ಹಬ್ಬಿದ ಬೆಟ್ಟವ ನೊಣ ನುಂಗುವನಕ ॥
ಒಬ್ಬರೊಡನೆ ಸೇರುವನಕ – ಕೆಟ್ಟ –
ಗುಬ್ಬಿಯ ರಾಜಹಂಸವು ನುಂಗುವನಕ ೨

ಒಳ ಹೊರಗೊಂದಾಗುವನಕ – ತಾನು –
ತಿಳಿದೆನೆಂಬ ಭಾವ ಬಯಲಾಗುವನಕ ॥

ಬೆಳಕಿನೊಳಗೆ ಕಾಣುವನಕ ನಮ್ಮ -
ಚೆಲುವ ಪುರಂದರವಿಠಲನ ದಯವಾಗುವನಕ ೩

## ೮೮

ಹಣ್ಣು ಕೊಂಬುವ ಬನ್ನಿರಿ ಹರಿದಾಸರು
ಹಣ್ಣು ಕೊಂಬುವ ಬನ್ನಿರಿ ಪ.

ಚೆನ್ನ ಬಾಲಕೃಷ್ಣನೆಂಬ
ಕನ್ನೆಗೊನೆಬಾಳೆಹಣ್ಣು ಅಪ

ಸುತ್ತೇಳು ಲೋಕದಿ ಸುರರು ಬಿತ್ತಿದ ಹಣ್ಣು
ಭಕ್ತರ ಬಾಯೊಳು ನೆನೆವ ಹಣ್ಣು
ಅರ್ತಿಯುಳ್ಳವರೆಲ್ಲ ಕೊಳ್ಳಿ ಬೇಕಾದರೆ
ನಿತ್ಯ ಮಾಧವನೆಂಬ ಅಚ್ಚಮಾವಿನ ಹಣ್ಣು ೧

ಅಜನ ಪಡೆದ ಹಣ್ಣು ಗಜವ ಕಾಯ್ದ ಹಣ್ಣು
ನಿಜಮುನಿಗಳಿಗೆ ತೋರಿಸಿದ ಹಣ್ಣು
ತ್ರಿಜಗವಂದಿತ ಪಾಲ್ಗಡಲೊಡೆಯನೆ ಹಣ್ಣು
ಸುಜನಭಕ್ತರೆಲ್ಲ ಕೊಳ್ಳ ಬನ್ನಿರಿ ಹಣ್ಣು ೨

ತುರುವ ಕಾಯ್ದ ಹಣ್ಣು ಉರಗನ ತುಳಿದಾ ಹಣ್ಣು
ಕರೆದರೆ ಕಂಬದೊಳು ಓಯೆಂಬ ಹಣ್ಣು
ಮರುಗುವ ಧ್ರುವನಿಗೆ ಪಟ್ಟಗಟ್ಟಿದ ಹಣ್ಣು
ಕರುಣಾಳು ಪುರಂದರವಿಠಲನ ಹಣ್ಣು *

## ೮೯

ಹರಿಯೆ ಸರ್ವೋತ್ತಮ ಹರಿಯೆ ಪರದೈವತ ।
ಹರಿಯೆ ಸರ್ವಂ ವಿಷ್ಣುಮಯಂ ಜಗತು ಪ.

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ಹರಿಯಲ್ಲದನ್ಯತ್ರ ದೈವಗಳುಂಟೆಂದು ।
ಉರಗನ ಮುಡಿಯನಾರಾದರೆತ್ತಲಿ ಅ.ಪ

ಜಗಂಗಳ ಪುಟ್ಟಿಸುವ ಬೊಮ್ಮ ನಿನ್ನ ಮಗ ।
ಜಗದ ಸಂಹಾರಕ ನಿನ್ನ ಮೊಮ್ಮಗನು ॥
ಜಗದ ಪಾವನೆ ಭಾಗೀರಥಿ ನಿನ್ನ ಮಗಳು ।
ಜಗದ ಜೀವನಮಾತೆ ನಿನ್ನರಸಿಯಲೆ ದೇವ ೧

ವಿಶ್ವತೋಮುಖ ನೀನೆ, ವಿಶ್ವತಶ್ಚಕ್ಷು ನೀನೆ ।
ವಿಶ್ವತೋಬಾಹು ವಿಶ್ವ ಉದರ ನೀನೆ ॥
ವಿಶ್ವವ್ಯಾಪಾರ ವಿಶ್ವಸೂತ್ರಧಾರಕ ನೀನೆ ।
ವಿಶ್ವನಾಟಕ ವಿಶ್ವವಿಷ್ಣುವೇ ನಮೋ ನಮೋ ೨

ಆಗಮನಿಗಮ ಪೌರಾಣ ಶಾಸ್ತ್ರಂಗಳಿಗೆ ।
ಯೋಗಿಜನಕಗಮ್ಯಮೂರ್ತಿ ನೀನೆ ॥
ನಾಗಶಯನ ಸಿರಿ ಭೋಗಿಭೂಷಣವಿನುತ ।
ಭಾಗವತರ ಪ್ರಿಯ ಪುರಂದರವಿಠಲ ೩

## ೯೦

ಹರಿ – ಹರರು ಸರಿಯೆಂಬ ಅರಿಯದಜ್ಞಾನಿಗಳು ।
ಪರನ ಹೃದಯದೊಳಿರುವ ಹರಿಯ ತಾವರಿಯರು ಪ.

ಶರಧಿ ಮಥನದಲಂದು ಸಿಂಧುಸುತೆ ಬಂದಾಗ ।
ಹರಿ – ಹರ – ವಿರಂಚಿ ಮೊದಲಾದ ಸುರರ ॥
ನೆರೆ ಒರೆದು ನೋಡಿ ಶಂಕೆಯ ಬಿಟ್ಟು ಸಿರಿದೇವಿ
ಹರಿ ಸರ್ವಪರನೆಂದು ಮಾಲೆ ಹಾಕಿದಳು ೧

ಹರಿನಾಮಕ್ಷೀರವದು ಹರನಾಮ ನೀರು ಅದು ।
ಕ್ಷೀರ ನೀರೊಂದಾದುದಂತೆ ಇಹುದು ॥
ಒರೆದಾಡಿ ಪರತತ್ತ್ವವರಿಯದಾ ನರ ತಾನು ।
ಹರಿ – ಹರರು ಸರಿಯೆಂದು ನರಕಕೆಳಸುವನು ೨

ಕ್ಷೋಣಿಯೊಳು ಬಾಣನ – ತೋಳುಗಳ ಕಡಿವಾಗ ।
ಏಣಾಂಕಧರ ಬಾಗಿಲೊಳಗೆ ಇರಲು ।
ಕಾಣರೇ ಜನರೆಲ್ಲ ಹರಿ ಪರನು ತಾನೆಂದು ।
ಪೂರ್ಣಗುಣ ಪುರಂದರವಿಠಲನೇ ಪರನು ೩

## ೬೧

ಹೊಡೆಯೊ ನಗಾರಿ ಮೇಲೆ ಕೈಯ ।
ಆನಂದಮದವೇರಿ ಗಡಗಡ ಪ.

ಮೃಡಸಖನ ಪಾದ ಬಿಡದೆ ಭಜಿಪರಸಂಗ ।
ಬಿಡಿಸಿ ಕಾಯ್ವ ಜಗದೊಡೆಯ ಶ್ರೀ ಹರಿಯೆಂದು ೧

ವೇದಗಮ್ಯ ಸಕಾಲಾರ್ತಿನಿವಾರಕ ।
ಮೋದವೀವ ಮಧುಸೂದನ ದೊರೆಯೆಂದು ೨

ಗಾನಲೋಲ ತನ್ನ ಧ್ಯಾನಿಸುವರನೆಲ್ಲ ।
ಮಾನದಿಂದ ಕಾಯ್ವ ಶ್ರೀನಿಧಿ ಪರನೆಂದು ೩

ನಿಷ್ಠೆಯಿಂದಲಿ ಮನಮುಟ್ಟಿ ಭಜಿಸುವರ ।
ಕಷ್ಟವ ಕಳೆವ ಶ್ರೀಕೃಷ್ಣನು ಪರನೆಂದು ೪

ಈ ಪೃಥಿವಿಯೊಳಗೆ ವ್ಯಾಪಕನಾಗಿಪ್ಪ ।
ಶ್ರೀಪತಿ ಪುರಂದರವಿಠಲನು ಧಣಿಯೆಂದು ೫

## ೬೨

ಹೊಯ್ಯಲೊ ಡಂಗುರವ – ಜಗ – ।
ದಯ್ಯನಯ್ಯ ಶ್ರೀ ಹರಿ ಅಲ್ಲದಿಲ್ಲವೆಂದು ಪ.

ಅಷ್ಟೈಶ್ವರ್ಯದ ಲಕುಮಿಯ ಅರಸೆಂದು ।
ಸೃಷ್ಟಿ – ಸ್ಥಿತಿ – ಲಯಕರ್ತನೆಂದು ॥
ಗಟ್ಟಿಯಾಗಿ ತಿಳಿದು ಹರಿ ಎನ್ನದವರೆಲ್ಲ ।
ಭ್ರಷ್ಟರಾದರು ಇಹ – ಪರಕೆ ಬಾಹ್ಯರು ಎಂದು ೧

ಹರಿಯೆಂಬ ಬಾಲನ ಹರಹರ ಎನ್ನೆಂದು ।
ಕರುಣವಿಲ್ಲದೆ ಪಿತ ಬಾಧಿಸಲು ॥
ತರಳನ ಮೊರೆ ಕೇಳಿ ನರಮೃಗರೂಪದಿ ।
ಹರಿಯನಿಂದಕನ ಸಂಹರಿಸಿದ ಮಹಿಮೆಯ ೨

ಕರಿ ಆದಿಮೂಲನೆ ಕಾಯೆಂದು ಮೊರೆಯಿಡೆ ।
ಸುರರನು ಕರೆಯಲು ಒಲ್ಲದಿರೆ ॥
ಗರುಡನನೇರದೆ ಬಂದು ಮಕರಿಯ ಸೀಳ್ದು ।
ಕರಿರಾಜನ ಕಾಯ್ದ ಪರದೈವ ಹರಿಯೆಂದು ೩

ಸುರಪಗೊಲಿದು ಬಲಿಯ ಶಿರವನೊದ್ದಾಗಲೇ ।
ಸುರಸವು ಉದಿಸೆ ಶ್ರೀಹರಿಪಾದದಿ ॥
ಪರಮೇಷ್ಠಿ ತೊಳೆಯಲು ಪವಿತ್ರೋದಕವೆಂದು ।
ಹರ ತನ್ನ ಶಿರದಲ್ಲಿ ಧರಿಸಿದ ಮಹಿಮೆಯ ೪

ಮಾನಸಲಿಂಗಪೂಜೆಗೆ ಮೆಚ್ಚಿ ಶಿವ ಬಂದು ।
ಬಾಣನ ಬಾಗಿಲ ಕಾಯ್ದಿರಲು ।
ದಾನವಾಂತಕ ಸಾಸಿರ ತೋಳ ಕಡಿವಾಗ ।
ಮೌನದಿಂದೊಪ್ಪಿಸಿಕೊಟ್ಟ ಶಿವನು ಎಂದು ೫

ಭಕ್ತಗೊಲಿದು ಭಸ್ಮಾಸುರಗೆ ಶಿವ ವರವಿತ್ತು ।
ಭಕ್ತನ ಭಯದಿಂದ ಓಡುತಿರೆ ॥
ಯುಕ್ತಿಯಿಂದಸುರನ ಸುಟ್ಟು ಶಿವನ ಕಾಯ್ದ ।
ಶಕ್ತನು ಶ್ರೀಹರಿ ಅಲ್ಲದಿಲ್ಲವೆಂದು ೬

ಗರಳಜ್ವಾಲೆಗೆ ಸಿರಿರಾಮ – ರಾಮನೆಂದು ।
ಸ್ಮರಿಸುತಿರಲು ಉಮೆಯರಸನಾಗ ॥
ಕೊರಳು ಶೀತಲವಾಗೆ ಶಿತಿಕಂಠ ತನ್ನಯ ।
ಗಿರಿಜೆಗೆ – ರಾಮಮಂತ್ರವ ಕೊಟ್ಟ ಮಹಿಮೆಯ ೭

ಹರಬ್ರಹ್ಮ ಮೊದಲಾದ ಸುರರನು ದಶಶಿರ ।
ಸೆರೆಹಿಡಿದು ಸೇವೆಯ ಕೊಳುತಿರಲು ॥
ಶರಧಿಯ ದಾಟಿ ರಾವಣನ ಸಂಹರಿಸಿದ ।
ಸುರರ ಲಜ್ಜೆಯ ಕಾಯ್ದು ಪರದೈವ ಹರಿಯೆಂದು ೮

ಜಗದುದ್ಧಾರನು ಜಗವ ಪೊರೆವನೀತ ।
ಜಗ ಬ್ರಹ್ಮಪ್ರಳಯದಿ ಮುಳುಗಲಾಗಿ ॥
ಮಗುವಾಗಿ ಜಗವನುದ್ಧರಿಸಿ ಪವಡಿಸಿ ಮತ್ತೆ ।
ಜಗದ ಜನಕ ಪುರಂದರ ವಿಠಲನೆಂದು ೯

# ಲೋಕನೀತಿ

## ೯೩

ಅಕ್ಕಟಕ್ಕಟೆನ್ನಗಂಡ ವೈಷ್ಣವನಾದ ಕಾರಣ ।
ರಕ್ಕಸಾಂತಕನ ಭಜಿಸಿ ರಚ್ಚೆ ಗೂಡಾಯಿತೆಂನ ಬದುಕು ।
ಅಕ್ಕಟಕ್ಕಟಿಂನ ಗಂಡ ಪ.

ಅಡ್ಡಗಂಧ ಹಚ್ಚುವಾಗ ರುದ್ರದೇವರ ಭಜಿಸಿಲಾಗಿ ।
ಬಡ್ಡಿವಾಸಿಂರೊಳಗೆ ನಾಲು ಸುಖದೊಳಿದ್ದೆವು । ಅಡ್ಡ
ಗಂಧವನು ಬಿಟ್ಟು ಶ್ರೀ ಮುದ್ರೆಯನು ಧರಿಸಲಾಗಿ ।
ಬಡ್ಡಿವಾಸಿಯಲ್ಲ ಹೋಗಿ ಬಾಯೊಳ್ಗೆ ಬಿದ್ದಿಂತಾಯಿತವ್ವ, ಅಕ್ಕಟ ೧

ಹೆಡಿಗೆ ತುಂಬ ದೇವರು ನಮ್ಮ ಮನೆಯೊಳಿರುವ
ಕಾಲದಲ್ಲಿ । ವಡವೆ ವಸ್ತು ಸೌಭಾಗ್ಯ ಸುಖದೊಳಿದ್ದೆವು
ಹಾದಿಯ ತುಂಬ ಕರಿದು ಬಿಳಿದು ಸಾಲಿಗ್ರಾಮ
ಭಜಿಸಲಾಗಿ । ವಡವೆ ವಸ್ತು ಎಲ್ಲ ಹೋಗಿ ಬಾಯೊಳ್ಬುಡಿಯು
ಬಿದ್ದಂತಾಯಿತವ್ವ । ಅಕ್ಕಟ ೨

ಕಾರಹುಣ್ಣಿಮೆ ಕಾಲದಲ್ಲಿ ಮೂಲಂಗಿ ಬೆಳ್ಳುಳ್ಳಿಗೆಡ್ಡೆ ತಂದು
ಕೊಟ್ಟರೆ ದೇವಸುಖವ ಕೊಡುವನೂ ।
ವೀರವಿಷ್ಣುವಿಗೆ ಕೊಟ್ಟು ತ್ರಾಹಿ ತ್ರಾಹಿ ಎನ್ನಲಾಗಿ
ಪಚ್ಚೆ ಕರ್ಪೂರದಂತ ಬದುಕು ನಿಸ್ತುತವಾಗಿ
ಹೋಯಿತವ್ವ । ಅಕ್ಕಟ ೩

ಅತ್ತೆ ಕೇಳೆ ಹಿಂದೆನಂಮ ಮದುವೆ ಮುಂಜಿ
ಕಾಲದಲ್ಲಿ । ಆರ್ತಿಗಾದರು ಒಮ್ಮೆ ಕಚ್ಚೆಕಟ್ಟಿದ್ದೆವೊ

ಹೊನ್ನು ಹಣವುಂಟೆನಗೆ ಸಾಯಲಾರೆನು ಎನಲಾ ।
ತನ್ನ ದೂತರು ಬಂದು ಎಳೆವ ಹೊತ್ತರಿಯೆ ೨

ಹೊಸ ಮನೆಯ ಕಟ್ಟಿದೆನು ಗೃಹಶಾಂತಿ ಮನೆಯೊಳಗೆ ।
ಬಸಿರಿ ಹೆಂಡತಿ ಮಗನ ಮದುವೆಯು ನಾಳೆ ॥
ಹಸನವಾಗಿದೆ ಬದುಕು ಸಾಯಲಾರೆನು ಎನಲು ।
ವಿಷಮ ದೂತರು ಬಂದು ಎಳೆವ ಹೊತ್ತರಿಯೆ ೩

ಪುತ್ರ ಹುಟ್ಟಿದ ದಿವಸ ಹಾಲು ಊಟದ ಹಬ್ಬ
ಮತ್ತೊಬ್ಬ ಮಗನ ಉಪನಯನ ನಾಳೆ ॥
ಅರ್ಥಿಯಾಗಿದೆ ಬದುಕು ಸಾಯಲಾರೆನು ಎನಲು ।
ಮೃತ್ಯು ಹೆಡತಲೆಯಲಿ ನಗುತಿಹುದರಿಯೆ ೪

ಅಟ್ಟಡಿಗೆ ಉಣಲಿಲ್ಲ ಇಟ್ಟ ನೀರ್ಮಿಣಿಯಲಿಲ್ಲ ।
ಕೊಟ್ಟ ಸಾಲವ ಕೇಳ್ವ ಹೊತ್ತ ಕಾಣೆ ॥
ಕಟ್ಟಕಡೆಯ ದಿವಸ ತುಂಬಿದ ಬಳಿಕಿರಲಿಲ್ಲ ।
ಇಷ್ಟರೊಳು ಪುರಂದರವಿಠಲನ ನೆನೆಮನವೆ ೫

## ೯೭

ಅಂತರಂಗದಲಿ ಹರಿಯ ಕಾಣದವ ತಾ ಹುಟ್ಟುಗುರುಡನೊ
ಸಂತತ ಶ್ರೀ ಕೃಷ್ಣಚರಿತೆ ಕೇಳದವ ಜಡಮತಿಯೆ
ಕಿವುಡನೊ ಎಂದೆಂದಿಗೂ ಪ.

ಹರುಷದಿಂದಲಿ ಮುರಹರನ ಪೂಜೆಯ ಮಾಡದವನೆ
ಕೈ ಮುರಿದವನೊ
ಕುರುವೀರ ಸೂತನ ಮುಂದೆ ಕೃಷ್ಣ ಎಂದು
ಕುಣಿಯದವನೆ ಕುಂಟನೊ ॥

ನರಹರಿ ಪಾದೋದಕ ಧರಿಸದ ಶಿರ ನಾಯುಂಡ
ಹಂಚು ಕಾಣೊ
ಸುರವರ ಕೃಷ್ಣ ಪ್ರಸಾದವಿಲ್ಲದ ಊಟ ಸೂಕರ ಭೋಜನವೋ ೧

ಅಮರೇಶ ಕೃಷ್ಣಾರ್ಪಿತವಲ್ಲದ ಕರ್ಮ ಅಸತಿಯ ವ್ರತನೇಮವೊ
ರಮೆಯರಸಗೆ ಪ್ರೀತಿಯಿಲ್ಲದ ವಿತ್ತವು ರಂಡೆ ಕೊರಳ ಸೂತ್ರ
ಕಮಲನಾಭನ ಪೊಗಳದ ಸಾರ ಸಂಗೀತ ಗಾರ್ದಭರೋದನವೊ
ಮಮತೆಯಿಂದಲಿ ಕೇಶವಗೆ ನಮಸ್ಕಾರ ಮಾಡದವನೆ ಮೃಗವೊ ೨

ಜರೆ ಹುಟ್ಟು ಮರಣವ ತಡೆವ ಸುದ್ದಿಯ ಬಿಟ್ಟು
ಸುರೆಯ ಸುರಿಯ ಬೇಡವೊ
ಸುರಧೇನು ಇರಲಾಗಿ ಶ್ವಾನನ ಮೊಲೆಹಾಲ
ಕರೆದು ಕುಡಿಯಬೇಡವೊ
ಕರಿ ರಥ ತುರಗವೇರಲು ಇದ್ದು ಕೆಡಹುವ ಕತ್ತೆ ಏರಲಿಬೇಡವೊ
ಪರಮ ಪುರುಷ ಪುರಂದರವಿಠಲನಿರಲು
ನರರ ಭಜಿಸಬೇಡವೊ ೩

## ೯೮

ಅರಿಯದಧಮನ ಸಂಗ ಕರಗಿದ್ದ ಹಿತ್ತಾಳೆ
ಒರೆದು ನೋಡಲು ಬಣ್ಣ ಬರುವುದೇ ಹೇಳಿ ಪ.

ಮಂಜುನೀರನೆ ತಂದು ಚಂದನವ ಹದಮಾಡಿ
ಒಂದಾಗಿ ಕೂಡಿ ಪರಿಮಳವ ಬೇಗ
ಹಂದಿಯನು ಕರೆದು ಸಲೆ – ಪೂಸಲು ಅದು ತನ್ನ
ಗಂಜಲವ ನೆನೆನೆನೆದು ಹೋಹಂತೆ ರಮಣಿ ೧

ಚೀನಿಕೋಲನೆ ತಂದು ಕೊರೆದು ತುಂಡನೆ ಮಾಡಿ
ಶ್ವಾನನನು ಕರೆದು ಬಾಯೊಳಗಿರಿಸಲು
ತಾನದನು ಸವಿಸವಿದು ನೋಡಲರಿಯದೆ ತನ್ನ
ದನದ ಮೂಳೆಯ ನೆನೆದು ಹೋಹಂತೆ ರಮಣಿ ೨

ಅಂತರವನರಿಯದಲೆ ಮೀಯ ಹೋಗುವುದರಿಂದ
ಅಂತೆ ಇರುವುದೇ ಲೇಸು ಬಹು ಪ್ರೌಢರು
ಚಿಂತಿತಾರ್ಥವನೀವ ಸುಗುಣ ಪುರಂದರವಿಠಲ
ನೆಂತೆಂತು ಭಜಿಸಿದರೆ ಅಂತಂತೊಲಿವನಲ್ಲದೆ ೩

## ೯೯

ಅಜ್ಞಾನಿಗಳ ಕೂಡ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡ ಜಗಳವೇ ಲೇಸು ಪ.

ಡಂಭಕರ ಮನೆಯಪಮಾನದೂಟಕ್ಕಿಂತ
ತುಂಬಿದ ಪಟ್ಟಣದಿ ತಿರಿದುಂಬುವುದೆ ಲೇಸು ।
ಹಂಬಲಿಸಿ ಹಾಳು ಹರಟೆ ಹೊಡೆವುದಕಿಂತ
ನಂಬಿ ಹರಿದಾಸರೊಳಾಡುವುದೆ ಲೇಸು ೧

ಒಡನೆ ಹಂಗಿಸುವರ ಮನೆಯ ಓಗರಕಿಂತ
ಕುಡಿನೀರ ಕುಡಿದುಕೊಂಡಿಹುದೆ ಲೇಸು ।
ಬಿಡದೆ ಕಡಿದಾಡುವರ ನೆರೆಯಲಿಹುದಕಿಂತ
ಅಡವಿಯೊಳಜ್ಞಾತವಾಸವೇ ಲೇಸು ೨

ಮಸೆದು ಮತ್ಸರಿಸುವನ ಬಳಿಯಲಿಹುದಕಿಂತ
ಹಸನಾದ ಹಾಳುಗುಡಿಗಳೆ ಲೇಸು ।
ಬಿಸಜಾಕ್ಷ ಪುರಂದರವಿಠಲನ ನೆನೆನೆನೆದು
ವಸುಧೆಯೊಳು ಚಿರಕಾಲವಿರುವುದೆ ಲೇಸು * ೩

## ೧೦೦

ಆಚಾರವಿಲ್ಲದ ನಾಲಿಗೆ – ನಿನ್ನ – ।
ನೀಚಗುಣವ ಬಿಡು ನಾಲಿಗೆ ಪ

ನಾಚಿಕೆ – ಲಜ್ಜೆಯ ನೀ ಮುನ್ನ ಅರಿಯದೆ ।
ಚಾಚಿಕೊಂಡಿರುವಂಥ ನಾಲಿಗೆ ಅ.ಪ

ಇದ್ದಮಾತನಾಡು ನಾಲಿಗೆ – ಹಿಡಿ – ।
ದೊದ್ದರೂ ಹುಸಿಬೇಡ ನಾಲಿಗೆ ॥

* ಈ ಕೀರ್ತನೆ ಕನಕದಾಸರ ಅಂಕಿತದಲ್ಲೂ ಇದೆ.

ಇದ್ದುಕೊಂಡು ಉಣ್ಣು ಅಮೃತಾನ್ನಗಳನು ।
ಬುದ್ಧಿಯಲಿರು ಕಂಡೆಯ ನಾಲಿಗೆ ೧

ಬಡವರ ಮಾತಿಗೆ ನಾಲಿಗೆ – ನೀ ।
ಕಡುಚತುರ ನುಡಿಯದಿರು ನಾಲಿಗೆ
ಹಿಡಿದು ಕೊಂಡೊಯ್ವರು ಯಮನ ಭಟರು ನಿನ್ನ ।
ನುಡಿ ಕಂಡೆಯ ಹರಿಯೆಂದು ನಾಲಿಗೆ ೨

ಹರಿಪಾದವ ಗತಿಯೆಂದು ನಾಲಿಗೆ – ನಿನಗೆ ।
ಪರರ ಚಿಂತೆಯೇಕೆ ನಾಲಿಗೆ ॥
ಸಿರಿವರ ಪುರಂದರವಿಠಲರಾಯನನು ।
ಮರೆಯದೆ ನೆನೆ ಕಂಡೆಯ ನಾಲಿಗೆ ೩

## ೧೦೧

ಆರ ಹಾರೈಸಿದರೇನುಂಟು – ಬರಿ
ನೀರ ಕಡೆದರಲ್ಲೇನುಂಟು ? ಪ.

ಅಂತರವರಿಯದ ಅಧಮನ ಬಾಗಿಲ
ನಿಂತು ಕಾಯ್ದರಲ್ಲೇನುಂಟು
ಎಂತಾದರಲ್ಲಿಯ ತಪ್ಪ ಸಾಧಿಸಿ ಯಮ
ನಂತೆ ಕೊಲುವರಲ್ಲೇನುಂಟು ? ೧

ಕೊಟ್ಟೆ – ಕೊಟ್ಟೆನೆಂದು ಕೊಡದುಪಚಾರದ
ಭ್ರಷ್ಟನ ಸೇರಿದರೇನುಂಟು
ಬಿಟ್ಟಿಯ ಮಾಡಿಸಿ ಬೆದರಿಸಿ ಬಿಡುವ ಕ
ನಿಷ್ಟನ ಸೇರಿದರೇನುಂಟು ? ೨

ಪಿಸುಣನ ಕುದುರೆಯ ಮುಂದೋಡಲು ಬಲು
ಬಿಸಿಲಿನ ಹಣ್ಣಲ್ಲದೇನುಂಟು
ವಸುಧೆಯೊಳಗೆ ಪುರಂದರವಿಠಲನ ಭ
ಜಿಸಲು ಮುಕ್ತಿಸಾಧನವುಂಟು ೩

## ೧೦೨

ಆರು ಒಲಿದರೇನು ನಮಗಿನ್ನಾರು ಮುನಿದರೇನು
ಕ್ಷೀರಸಾಗರ ಶೇಷಶಯನನ ಒಲುಮೆಯುಳ್ಳ ಹರಿದಾಸರಿಗೆ ಪ.

ಪಡೆದ ತಾಯಿ – ತಂದೆ ನಮ್ಮೊಳು ಅಹಿತವ ಮಾಡಿದರೇನು
ಮಡದಿ ಮಕ್ಕಳು ನೆಂಟರಿಷ್ಟರು ಮುನಿಸು ಮಾಡಿದರೇನು
ಒಡನೆ ತಿರುಗುವ ಗೆಳೆಯರು ನಮ್ಮೊಳು ವೈರವ ಬೆಳೆಸಿದರೇನು
ಕಡಲಶಯನನ ಕರುಣಾಂಬುಧಿಯ ಒಲುಮೆಯುಳ್ಳ ಹರಿದಾಸರಿಗೆ ೧

ಊರನಾಳುವ ದೊರೆಗಳು ನಮ್ಮನು ಹೊರಗೆ ನೂಕಿದರೇನು
ಮಾರಿಯ ಹಿಂಡು ಮುಸಲರ ದಂಡು ಮೈಗೆ ಮುತ್ತಿದರೇನು ॥
ಅರಣ್ಯದಿ ಹರಿದಾಡುವ ಮೃಗಗಳು ಅಡ್ಡಗಟ್ಟಿದರೇನು
ವಾರಿಜನಾಭನ ವಸುದೇವಸುತನ ಒಲುಮೆಯುಳ್ಳ ಹರಿದಾಸರಿಗೆ ೨

ಕಾನನದೊಳು ಹರಿದಾಡುವ ಸರ್ಪವು ಕಾಲಿಗೆ ಸುತ್ತಿದರೇನು
ಜೇನಿನಂದದಿ ಕ್ರಿಮಿಕೀಟಂಗಳು ಚರ್ಮಕೆ ಮುತ್ತಿದರೇನು ॥
ಭಾನು ಮಂಗಳ ಬುಧ ಶುಕ್ರಂಗಳ ಬಲವು ತಪ್ಪಿದರೇನು
ಮಾಣದೆ ಭಜಿಸುವ ಪುರಂದರವಿಠಲನ
ಒಲುಮೆಯುಳ್ಳ ಹರಿದಾಸರಿಗೆ ೩

## ೧೦೩

ಆರು ಹಿತವರು ಮನವೆ ಮೂರು ಮಂದಿಗಳೊಳಗೆ
ನಾರಿಯೋ ಧಾರಿಣಿಯೊ ಧನದ ಬಲು ಸಿರಿಯೊ ? ಪ.

ಅನ್ಯರಲಿ ಜನಿಸಿರ್ದ ಅಂಗನೆಯ ಕರೆತಂದು
ತನ್ನ ಮನೆಯಲ್ಲಿ ಯಜಮಾನಿಯೆನಿಸಿ
ಭಿನ್ನವಿಲ್ಲದೆ ಅರ್ಧ ದೇಹವೆನಿಸುವ ಸತಿಯು
ಕಣ್ಣಿನಲಿ ನೋಡಲಂಜುವಳು ಕಾಲನೊಯ್ವಾಗ ೧

ಮುನ್ನ ಶತಕೋಟಿ ರಾಯರುಗಳಾಳಿದ ನೆಲನ
ತನ್ನದೆಂದು ಶಿಲೆಯ ಶಾಸನವ ಬರೆಸಿ
ಬಿನ್ನಣದಿ ಮನೆಗಟ್ಟಿ ಕೋಟೆ – ಕೊತ್ತಳವಿಕ್ಕಿ
ಚೆನ್ನಿಗನೆ ಅಸುವಳಿಯೆ ಊರಹೊರಗಿಕ್ಕುವರು ೨

ಉದ್ಯೋಗ – ವ್ಯವಹಾರ ನೃಪಸೇವೆ ಮೊದಲಾಗಿ
ಕ್ಷುದ್ರತನ ಕಳವು ಪರದ್ರೋಹದಿಂದ
ಬುದ್ಧಿಯಿಂದಲಿ ಧನವ ಗಳಿಸಿಕ್ಕಿ ಅಸುವಳಿಯೆ
ಸದ್ಯದಲಿ ಆರುಂಬವರು ಹೇಳು ಮನುಜಾ ೩

ಶೋಕಗೈದಳುವವರು ಸತಿ – ಸುತರು ಭಾಂದವರು
ಜೋಕೆ ತಪ್ಪಿದ ಬಳಿಕ ಅರ್ಥವ್ಯರ್ಥ
ಲೋಕದಲಿ ಸ್ಥಿರವಾದ ಕೀರ್ತಿ ಅಪಕೀರ್ತಿಗಳು
ಸಾಕಾರವಾಗಿ ಸಂಗಡ ಬಾಹುವಲ್ಲದೇ ? ೪

ಅಸ್ಥಿರದ ದೇಹವನು ನೆಚ್ಚಿ ನೀ ಕೆಡಬೇಡ
ಸ್ವಸ್ಥದಲಿ ನೆನೆಕಾಣೊ ಪರಮಾತ್ಮನ
ಚಿತ್ತಶುದ್ಧಿಯಲಿ ಶ್ರೀ ಪುರಂದರವಿಠಲನ
ಭಕ್ತಿಯಿಂದಲಿ ನೆನೆದು ಮುಕ್ತಿಪಡೆ ಮನವೆ ೫

## ೧೦೪

ಆವ ಕುಲವಾದರೇನು ಪ.

ಭಾವದ ಎಲ್ಲಾನ ತಿಳದವನಿಗೆ ಮತ್ತೇ ಅಪ

ಹಸಿಕಬ್ಬುಡೊಂಕು ಇರಲು – ಅದರೊಳಗಿದ್ದ
ರಸ ತಾನು ಡೊಂಕೇನಲೊ – ಮರುಳೆ
ವಿಷಯಭಾವನೆ ಬಿಟ್ಟು ನೀ ಹೋಗಿ ಗುರುಗಳ
ಹಸನಾಗಿ ಕೇಳು ಕಾಣೋ – ಮನುಜಾ ೧

ನಾನಾವರ್ಣದ ಆಕಳ – ಕ್ಷೀರದಲಿ
ನಾನಾವರ್ಣಗಳಹುದೆ – ಮನುಜಾ

ಹೀನ ಭಾವನೆಗಳನಿಂದಿಟ್ಟು ನೀ ಪೋಗಿ
ಜ್ಞಾನಿಗಳ ಕೇಳು ಕಾಣೋ – ಮನುಜಾ ೨

ಶರಧಿಯೊಳ ತೆರೆನೊರೆಗಳಾ – ಪರಿಯಂತೆ
ಶರೀರವಲ್ಲದೆ ಬೇರಿಹುದೇ ?
ವರಪುರಂದರವಿಠಲನ ಸ್ಮರಿಸುತಿರಲು ನಿನಗೆ
ಸಿರಿಯು ಮುಕುತಿಯಹುದು – ಮನುಜಾ ೩

## ೧೦೫

ಆವಗಂ ನೆನೆಮನವೆ ಸಕಲ ಚಿಂತೆಯ ಕಡಿದು ।
ಕಾವುದಿದು ಕೃಷ್ಣನಾಮ ಪ.

ಭಾವಿಸಲು ಯಮದೂತ ಮದಕರಿಗೆ ಕೇಸರಿಯು ।
ಶ್ರೀಕೃಷ್ಣ ದಿವ್ಯನಾಮ ಅಪ

ವರವೇದ – ಶಾಸ್ತ್ರಗಳ ವ್ಯಾಸಮುನಿ ಮಥಿಸಲು
ಸುಧೆಯಾದ ಕೃಷ್ಣನಾಮ ।
ಪರಮಭಕುತರು ಸವಿದು ಉಂಡು ಮುನಿಗಳ ಕಿವಿಗೆ
ಎರೆದ ಶ್ರೀಕೃಷ್ಣನಾಮ ॥
ಗುರುದ್ರೋಣ – ಭೀಷ್ಮ – ಅಶ್ವತ್ಥಾಮ – ಜಯದ್ರಥನ
ಜಯಿಸಿತ್ತೈ ಕೃಷ್ಣನಾಮ ।
ಕುರುಸೇನೆಶರಧಿಯನು ಪಾಂಡವರ ದಾಟಿಸಿತು
ಶ್ರೀಕೃಷ್ಣ ದಿವ್ಯನಾಮ ೧

ದ್ರೌಪದೀ ದೇವಿಯಭಿಮಾನವನು ಕಾಯ್ದುದಿದು
ಶ್ರೀಕೃಷ್ಣದಿವ್ಯ ನಾಮ ।
ಆಪತ್ತು ಪರಿಹರಿಸಿ ಕುಕ್ಷಿಯೊಳು ಪರಿಕ್ಷೀತನ
ರಕ್ಷಿಸಿತು ಕೃಷ್ಣನಾಮ ॥
ಗೋಪವನಿತೆಯರೆಲ್ಲ ಕುಟ್ಟುತಲಿ – ಬೀಸುತಲಿ
ಪಾಡುವುದು ಕೃಷ್ಣನಾಮ ।

ತಾಪಸನು ಸಾಂದೀಪ ಮುಚುಕುಂದರಿಗೆ ಮನೋ –
ರಥವು ಶ್ರೀಕೃಷ್ಣನಾಮ ೨

ಸುಖದ ಅವಸಾನದಲಿ ಈ ನಾಮ ಗಾಯನವು
ಶ್ರೀಕೃಷ್ಣದಿವ್ಯನಾಮ ।
ದುಃಖಾವಸಾನದಲಿ ಈ ನಾಮವೇ ಜಪವು
ಶ್ರೀಕೃಷ್ಣದಿವ್ಯನಾಮ ॥
ಸಕಲ ಸುಖಗಳ ಕೊಟ್ಟು ಸದ್ಗತಿಯ ನೀವುದಿದು
ಶ್ರೀಕೃಷ್ಣದಿವ್ಯನಾಮ ॥
ಸುಖವನಧಿ ಅರವಿಂದನಾಭ ಪುರಂದರವಿಠಲ
ನೊಲುಮೆಯಿದು ದಿವ್ಯನಾಮ ೩

## ೧೦೬

ಆವನಾವನ ಕಾಯ್ವ ಅವನಿಯೊಳಗೆ
ದೇವದೇವೇಶ ಶ್ರೀಹರಿಯಲ್ಲದೆ ಪ.

ಆವ ತಂದೆಯು ಸಲಹಿದನು ಪ್ರಹ್ಲಾದನ
ಆವ ತಾಯಿ ಸಲಹಿದಳು ಧ್ರುವರಾಯನ
ಆವ ಸುತ ಸಲಹಿದನು ಆ ಉಗ್ರಸೇನನ
ಜೀವರಿಗೆ ಪೋಷಕನು ಹರಿಯಲ್ಲದೆ ೧

ಆವ ಬಂಧುವು ಸಲಹಿದನು ಗಜರಾಜನನು
ಆವ ಪತಿ ಕಾಯ್ದ ದ್ರೌಪದಿಯ ಮಾನ ॥
ಆವ ಸೋದರರು ಸಲಹಿದರು ವಿಭೀಷಣನ
ಜೀವರಿಗೆ ದಾತೃ ಶ್ರೀಹರಿಯಲ್ಲದೆ ೨

ಆವನಾಧಾರ ಅಡವಿಯೊಳಿಪ್ಪ ಮೃಗಗಳಿಗೆ
ಆವ ರಕ್ಷಕ ಪಕ್ಷಿಜಾತಿಗಳಿಗೆ
ಆವ ಪೊಷಕನು ಗರ್ಭದಲ್ಲಿದ್ದ ಶಿಶುಗಳಿಗೆ
ದೇವ ಶ್ರೀ ಪುರಂದರವಿಠಲನಲ್ಲದಲೆ ೩

## ೧೦೭

ಆಜ್ಞೆಯಿಂದಾಳಬೇಕಣ್ಣ – ಗಂಡ
ನಾಜ್ಞೆಯ ಮೀರಿ ನಡೆವ ಲಂಡಹೆಣ್ಣ ಪ.

ಅತ್ತೆ – ಮಾವನಿಗಂಜದವಳ – ತನ್ನ
ಉತ್ತಮ ಪುರುಷನ ಜರಿದು ಝಂಕಿಪ
ಭೃತ್ಯರ ಕಂಡು ಬಾಧಿಪಳ – ನಡು
ನೆತ್ತಿಯಿಂದಲೆ ಮೂಗ ಕೆತ್ತಬೇಕವಳ ೧

ಹಟ್ಟಿ – ಹಟ್ಟಿ ತಿರುಗುವಳ – ತನ್ನ
ಗಟ್ಟಿತನದಿ ಮಾತು ಮಲೆತು ನುಡಿಯುವಳ
ಬಿಟ್ಟಕುಚವ ತೋರಿಸುವಳ – ಇನ್ನು
ಹುಟ್ಟು ಹುಟ್ಟಿಲಿ ಬಾಯಿ ಕುಟ್ಟಬೇಕವಳ ೨

ಎಂದೂ ಈ ಪರಿಯಿರುವವಳ – ಇನ್ನು
ಕೊಂದು ಮಾಡುವುದೇನು ಬಿಡಬೇಕವಳ
ಒಂದಿಷ್ಟು ಗುಣವಿಲ್ಲದವಳ – ಪು
ರಂದರವಿಠಲರಾಯನಗಲ್ಲದವಳ ೩

## ೧೦೮

ಇಕ್ಕಲಾರೆ ಕೈಯೆಂಜಲು – ಚಿಕ್ಕ
ಮಕ್ಕಳು ಅಳುತಾವೆ ಹೋಗೋ ದಾಸಯ್ಯ ಪ.

ಮಡಿಕೆ ತೊಳೆಯುತೇನೆ ಮನೆಯ ಸಾರಿಸುತೇನೆ
ಒಡೆಯರಿಲ್ಲ ಕಾಣೋ ಹೋಗೋ ದಾಸಯ್ಯ
ತೊಡೆಯ ಮೇಲಣ ಕೂಸು ಮೊಲೆ ಹಾಲನುಣ್ಣುತಿದೆ
ನಡೆನಡೆ ಕರಕರೆ ಮಾಡದೆ ದಾಸಯ್ಯ ೧

ಅಟ್ಟದ ಮೇಲಿನ ಅಕ್ಕಿ ತೆಗೆಯಲಾರೆ
ಹೊಟ್ಟೆನೋವು ಕಾಣು ಹೋಗೋ ದಾಸಯ್ಯ

ಮುಟ್ಟಾಗಿ ಕುಳಿತೇನೆ ಮನೆಯವರಿಲ್ಲವೊ
ಕಟ್ಟುಗ್ರ ಮಾಡದೆ ಹೋಗೋ ದಾಸಯ್ಯ ೨

ವೀಸದ ಕಾಸಿನ ದವಸವ ತಂದಾರೆ
ಕೂಸಿಗೆ ಸಾಲದು ಹೋಗೋ ದಾಸಯ್ಯ
ಆಸೆ ಮಾಡಲು ದೋಷಕಾರ್ತಿ ಬೇಡ ನಾನು
ಶೇಷಾದ್ರಿ ಪುರಂದರವಿಠಲದಾಸಯ್ಯ ೩

## ೧೦೯

ಇಂತು ಶ್ರುತಿ – ಸ್ಮೃತಿ ಸಾರುತಿದೆ ಕೋ ।
ಕಂತುಪಿತನ ಗುಣಗಳ ತಿಳಿಯಬೇಕೆಂದು ಪ.

ಮನವ ಶ್ರೀಹರಿಯ ಚರಣಕೆ ಸಮರ್ಪಿಸಬೇಕು ।
ತನುವ ತೊಂಡರಿಗಡ್ಡ ಕೆಡವಬೇಕು ॥
ವನಿತೆಯರ ಚೆಲುವಿಕೆಗೆ ಮರುಳಾಗದಿರಬೇಕು ।
ಘನತೆಯಲಿ ಹರಿಚರಣ ಸ್ಮರಿಸುತಿರಬೇಕು ೧

ಕಂದರ್ಪನಟ್ಟುಳಿಗೆ ಕಳವಳಿಸದಿರಬೇಕು ।
ಇಂದ್ರಿಯಂಗಳನು ನಿಗ್ರಹಿಸಬೇಕು ।
ಚಂದಲೀಲೆಗಳಿಂಗೆ ಮನವೆಳಸದಿರಬೇಕು ।
ಇಂದಿರೇಶನ ಪದದ ಪಥವರಿಯಬೇಕು ೨

ಒಂಟಿಯಲಿ ಮುನಿಗಳಾಶ್ರಮದಿ ನೆಲೆಸಲುಬೇಕು ।
ಹೆಂಟೆ ಬಂಗಾರ ಸಮ ತಿಳಿಯಬೇಕು ॥
ಕಂಟಕದ ಭಯಗಳನು ನೀಗುತಿರಬೇಕು ವೈ – ।
ಕುಂಠ ಪುರಂದರವಿಠಲನೊಲಿಸಬೇಕು ೩

## ೧೧೦

ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯ
ಪದುಮನಾಭನ ಪಾದ ಭಜನೆ ಸುಖವಯ್ಯ ಪ.

ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ
ಬಿಲ್ಲಾಗಬೇಕು ಬಲ್ಲವರ ಒಳಗೆ ॥
ಮೆಲ್ಲನೇ ಮಾಧವನ ಮನದಿ ಮೆಚ್ಚಿಸಬೇಕು
ಬೆಲ್ಲವಾಗಿರಬೇಕು ಭಕುತಜನರೊಳಗೆ ೧

ಬುದ್ಧಿಯಲಿ ತನ್ನ ಮನ ತಿದ್ದುತ್ತಲಿರಬೇಕು
ಮುದ್ದಾಗಬೇಕು ಮುನಿಯೋಗಿಗಳಿಗೆ ॥
ಮಧ್ವಮತದಬ್ಧಿಯೊಳು ಮೀನಾಗಿ ಇರಬೇಕು
ಶುದ್ಧ ಭಕುತಿಯ ಸುಕೃತ ಉಣಲುಬೇಕು ೨

ವಿಷಯ ಭೋಗದ ತೃಣಕೆ ಉರಿಯಾಗಿ ಇರಬೇಕು
ಕುಶಲದಲಿ ಶ್ರೀಹರಿಯ ನೆನೆಯಬೇಕು ॥
ವಸುಧೆಯೊಳು ನಮ್ಮ ಪುರಂದರವಿಠಲನ
ಹಸನಾಗಿ ನೆನೆನೆನೆದು ಸುಖಿಯಾಗಬೇಕು ೩

## ೧೧೧

ಇನ್ನಾದರೂ ಹರಿಯ ನೆನೆಯೊ ನೀ ಮನುಜಾ ।
ಮುನ್ನಾದ ದುಃಖಗಳು ನಿಜವಾಗಿ ತೊಲಗುವುವು ಪ.

ಊರೂರ ನದಿಗಳಲಿ ಬಾರಿ ಬಾರಿಗೆ ಮುಳುಗಿ ।
ತೀರದಲಿ ಕುಳಿತು ನೀ ಪಣೆಗೆ ನಿತ್ಯ ॥
ನೀರಿನಲಿ ಮಟ್ಟಿಯನು ಕಲಸಿ ಬರೆಯುತ ಮೂಗು – ।
ಬೇರನ್ನು ಪಿಡಿದು ಮುಸುಕಿಕ್ಕಲೇನುಂಟು ೧

ನೂರಾರು ಕರ್ಮಂಗಳನ್ನು ಡಂಭಕೆ ಮಾಡಿ ।
ಆರಾರಿಗೋ ಹಣವ ದಾನಕೊಟ್ಟು ।
ದಾರಿದ್ರ್ಯವನು ಪಡೆದು ತಿರಿದುಂಬುವುದಕೀಗ ।
ದಾರಿಯಾಯಿತೆ ಹೊರತು ಬೇರೆ ಫಲವುಂಟೇ? ೨

ಕಾಡುದೈವಗಳನ್ನು ಚಿನ್ನ – ಬೆಳ್ಳಿಗಳಿಂದೆ ।
ಮಾಡಿಕೊಂಡವರ ಪೂಜೆಯನೆ ಮಾಡಿ ।

ಕಾಡುಕಳ್ಳರು ಬಂದು ಅವುಗಳನು ಕೊಂಡೊಯ್ಯೆ ।
ಮಾಡಿಕೊಂಡಿರ್ದುದಕೆ ಬಾಯಬಡಕೊಳ್ಳುವೆ ೩

ಮಗನ ಮದುವೆಯು ಎಂದು ಸಾಲವನು ಮಾಡಿ ನೀ ।
ಸುಗುಣಿಯೆನ್ನಿಸಿಕೊಳಲು ವ್ಯಯ ಮಾಡಿದೆ ॥
ಹಗರಣವ ಪಡಿಸಿದರೆ ಸಾಲಗಾರರು ಬಂದು ।
ಬಗೆಬಗೆಯೊಳವರ ಕಾಲ್ಗೆರಗಿ ಬಿದ್ದಿರುವೆ ೪

ಕೆಟ್ಟುವೀ ಕೆಲಸಗಳ ಮಾಡಿದರೆ ಫಲವೇನು ? ।
ತಟ್ಟನೇ ಶ್ರೀಹರಿಯ ಪದವ ನಂಬಿ ॥
ದಿಟ್ಟ ಪುರಂದರವಿಠಲನೆ ಎಂದರೆ ।
ಸುಟ್ಟು ಹೋಗುವುವಯ್ಯ ನಿನ್ನ ಕಷ್ಟಗಳು ೫

## ೧೧೨

ಇರಬೇಕು – ಹರಿದಾಸರ ಸಂಗ
ವರ ಜ್ಞಾನಿಗಳ ದಯ ಸಂಪಾದಿಸಬೇಕು ಪ.

ಅತಿಜ್ಞಾನಿಯಾಗಿ ಹರಿಕಥೆಯ ಕೇಳಬೇಕು
ಯತಿಗಳ ಪಾದಕ್ಕೆ ಎರಗಬೇಕು
ಸತಿಸುತರಿದ್ದು ಮಮತೆಯನು ಬಿಡಬೇಕು
ಗತಿಯೆಂದು ಬಿಡದೆ ಹರಿಯ ಪೋಪರಸಂಗ ೧

ನಡೆ ಯಾತ್ರಿಯನಬೇಕು ನುಡಿ ನೇಮವಿರಬೇಕು
ಬಿಡದೆ ಹರಿಯ ಪೂಜೆಯ ಮಾಡಬೇಕು
ಅಡಿಗಡಿಗೆ ಬಂದು ಹರಿಗಡ್ಡ ಬೀಳಬೇಕು
ಬಿಡದೆ ಹರಿಭಜನೆಯ ಮಾಡುವರ ಸಂಗ ೨

ಹರಿ – ಹರ – ವಿರಂಚಿಯರ ಪರಿಯ ತಿಳಿಯಬೇಕು
ತರತಮದಿ ರುದ್ರ – ಇಂದ್ರಾದಿಗಳ
ಅರಿಯದಿದ್ದರೆ ಗುರುಹಿರಿಯರ ಕೇಳಬೇಕು
ಪರಮಾನಂದದಲಿ ಓಲಾಡುವರ ಸಂಗ ೩

ಷಟ್ಕರ್ಮ ಮಾಡಬೇಕು ವೈಷ್ಣವನೊಲಿಸಬೇಕು ಉ –
ತ್ಕೃಷ್ಟ ವೈರಾಗ್ಯಬೇಕು ದುಷ್ಟಸಂಗ ಬಿಡಬೇಕು
ವಿಷ್ಣುವಿನ ದಾಸರ ದಾಸನಾಗಲುಬೇಕು
ಎಷ್ಟು ಕಷ್ಟಬಂದರೂ ಹರಿಯ ಭಜಿಪರ ಸಂಗ ೪

ಏಕಾಂತ ಕುಳ್ಳಿರಬೇಕು ಲೋಕವಾರ್ತೆ ಬಿಡಬೇಕು
ಲೋಕೈಕನಾಥನ ಭಜಿಸಬೇಕು
ಸಾಕು ಸಂಸಾರವೆಂದು ಕಕ್ಕುಲತೆ ಬೀಡಬೇಕು
ಶ್ರೀಕಾಂತ ಪುರಂದರ ವಿಠಲರಾಯನ ಸಂಗ ೫

## ೧೧೩

ಇರಬೇಕು ಇರದಿರಬೇಕು ಶ್ರೀ – ।
ಹರಿದಾಸರು ಸಂಸಾರದೊಳು ಪ.

ಕುಲಸತಿಯಾದರೆ ಕೂಡಿರಬೇಕು ।
ಸುಲಭದಿಂದ ಸ್ವರ್ಗ ಸೂರಾಡಬೇಕು ॥
ಕಲಹಗಂಟಿ ಸತಿ ಕರ್ಕಶೆಯಾದರೆ ।
ಹಲವು ಪರಿಯಿಂದಲಿ ಹೊರಗಾಗಬೇಕು ೧

ಮಕ್ಕಳು ತಾವು – ಮತಿವಂತರಾದರೆ ।
ಅಕ್ಕರೆಯಿಂದಲಿ ಕೂಡಿರಬೇಕು ॥
ಚಿಕ್ಕತನದಿ ಬುದ್ಧಿ ತೇರುಂಡರಾದರೆ ।
ಗಕ್ಕನೆ ಅಲ್ಲಿಂದ ಹೊರಗಾಗಬೇಕು ೨

ದುಷ್ಟರ ಕಂಡರೆ ದೂರವಿರಬೇಕು ।
ಶಿಷ್ಟರ ಕಂಡರೆ ಕೈಮುಗಿಯಬೇಕು ॥
ದಿಟ್ಟ ಶ್ರೀ ಪುರಂದರವಿಠಲರಾಯನ ।
ಗಟ್ಟಿಯಾಗಿ ಆತನ ನೆರೆನಂಬಬೇಕು ೩

## ೧೧೪

ಇರಲೇ ಬಾರದು – ಇಂಥಲ್ಲಿ
ಇರಲೇಬಾರದು ಪ.

ಇರಬಾರದಿಂದ ......... ವರೆ ಭಯಂಕರ
ಹರಿತಾಪರಿಹರಿಸುವ ಅ.ಪ

ದುರುಳ ಜನ ಸಹವಾಸದಲ್ಲಿ ದುಷ್ಟಮೃಗವಿದ್ದಡವಿಯಲ್ಲಿ
ಉರಗಗಳು ಸೇರಿಕೊಂಡ ಸದನಗಳಲ್ಲಿ
ಕರುಬರಿದ್ದ ಊರುಗಳಲಿ ಕಲಹ ಹೆಚ್ಚಿದ ರಾಜ್ಯದಲ್ಲಿ
ಪರಹಿಂಸೆಯ ಮಾಡಲಂಜದ ಪಾಪಿಗಳಿದ್ದಲ್ಲಿ ೧

ಅವಿವೇಕದ ಪ್ರಭುಸೇವೆಯಲ್ಲಿ ಆತ್ಮಸೌಖ್ಯವಿಲ್ಲದಲ್ಲಿ
ಲವಶೇಶವು ಸದ್ವಿದ್ಯಾ ಮಾತ್ರ ಲಾಭವಿಲ್ಲದಲ್ಲಿ
ನವಯೌವನಭರಿತ ನಾರಿ ತಾನೊಬ್ಬಳಿದ್ದಲ್ಲಿ
ಅವನಿಯೊಳಗರ್ಥ ಪ್ರಾಪ್ತಿ ಇಲ್ಲದಂಥಲ್ಲಿ ೨

ಮಾನವಲ್ಲದ ಸಭೆಯಲ್ಲಿ ಮಾತ ಕದಿವನ್ಯಾಯದಲ್ಲಿ
ನೂನ್ಯಪೂರ್ಣ ಎನ್ನುವವನ ಉಟ್ಟಕಾಲದಲ್ಲಿ
ಶ್ರೀನಾಥ ಶ್ರೀ ಪುರಂದರವಿಠಲ ರೂಪಗಳು
ಅನಂತಾನಂತವೆಂದು ಅರಿಯದ ಅದ್ವೈಷ್ಣವರಲ್ಲಿ ೩

## ೧೧೫

ಇಲ್ಲೇ ವೈಕುಂಠ ಕಾಣಿರೊ – ಸಿರಿ ।
ವಲ್ಲಭನಂಘ್ರಿಯ ನೆರೆನಂಬಿದವರಿಗೆ ಪ.

ನುಡಿಯೆರಡಾಗದೆ ಕಡುಕೋಪ ಮಾಡದೆ ।
ಬಡತನ ಬಂದರು ಲೆಕ್ಕಿಸದೆ ॥
ಬೆಡಗು ಹೆಣ್ಣುಗಳ ಕಡೆಗಣ್ಣೊಳು ನೋಡದೆ ।
ಧೃಡಚಿತ್ತದಲಿ ಶ್ರೀಹರಿಯ ನಂಬಿದವರಿಗೆ ೧

ಪಕ್ಷಪಾತವಿಲ್ಲದನ್ನದಾನಂಗಳನು - ।
ಪೇಕ್ಷೆಯ ಮಾಡದೆ ಗುರುಹಿರಿಯರನು ।
ಮೋಕ್ಷವ ಬಯಸುತ ಅನ್ಯಾಯವಳಿಯುತ ।
ಲಕ್ಷ್ಮೀನಾರಾಯಣನ ಬಿಡದೆ ಧೇನಿಪರಿಗೆ ೨

ಪರಹಿತವನು ಮಾಡಿ ಕೆರೆಬಾವಿಗಳ ।
ಅರವಟಿಗೆಯ ಸಾಲುಮರವ ಹಾಕಿ ॥
ಸಿರಿಪುರದರಸು ಶ್ರೀ ಪುರಂದರವಿಠಲನ ।
ಸ್ಥಿರಚಿತ್ತದಲಿ ಬಿಡದೆ ಸ್ಮರಿಸುತಲಿಹರಿಗೆ ೩

## ೧೧೬

ಈಗಲೆ ಭಜಿಸಲೆ ಜಿಹ್ವೆ - ನೀ - ।
ಜಾಗುಮಾಡದೆ ಶ್ರೀ ಹರಿಪಾದಾಂಬುಜವ ಪ.

ದೇಹ ದೇಹಸಂಬಂಧಿಗಳು - ಅವರು ।
ಮೋಹಬದ್ಧರಾಗಿ ಕುಳಿತಿಹರು ॥
ಆಹಾರ ಗುಹ್ಯೇಂದ್ರಿಯವೆಂಬ ಎರಡರ ।
ವೀಹಾರದಲಿ ನೀನು ಮುಳುಗಿಸದಲೆ ಮನ ೧

ಮರಣ ತೊಡಗಿ ನಾಲಿಗೆಯುಡುಗಿ - ನಿನ್ನ - ।
ತರುಣಿ ಪುತ್ರ ಮಿತ್ರರಳುತಿರಲು ॥
ಕೊರಳೊಳು ಗುರುಗುರು ಗುರುಗುಟ್ಟುವಾಗ ನರ - ।
ಹರಿಯ ನಾಮವೆನ್ನಗೊಡದಲೊ ಪ್ರಾಣಿ ೨

ಅಸಿಪತ್ರವನದೊಳು ಹೊಗಿಸಿ - ನಿನ್ನ - ।
ಬಸೆವಸೆಖಂಡ ಹೊರವೊಡಿಸಿ ।
ಬಿಸಿಬಿಸಿ ನೆತ್ತರು ಬಸಿದು ಹೋಗುವಾಗ ।
ಕುಸುಮನಾಭನ ನಾಮ ನೆನೆಯಗೊಡದು ಮನ ೩

ತಪ್ತಲೋಹದ ಮೋಲೊರಗಿಸಿ - ನಿನ್ನ - ।
ಕತ್ತರಿಸಿದ ಖಂಡ ಬೇಯಿಸುವರು ॥

ನೆತ್ತಿಯ ಕೊರೆದು ನಾಲಿಗೆ ಹಿರಿದೊಗೆವಾಗ ।
ಚಿತ್ತಜನಯ್ಯನ ನೆನೆಯಗೊಡದು ಮನ ೪

ಕುಂಭೀಪಾಕದೊಳಗೆ ಕುದಿಸಿ – ನಿನ್ನ ।
ಅಂಬುಮೊನೆಗಳಿಂದಿರಿಯಿಸಿ ॥
ಅಂಬರಕೊಗೆಯೆ ಕಾಗೆಯು ಕಚ್ಚಿ ಕಡಿವಾಗ ।
ಅಂಬುಜಾಕ್ಷನ ನಾಮ ನೆನೆಯಗೊಡದು ಮನ ೫

ದುರುಳ ಯಮದೂತರಾರ್ಭಟಿಸಿ – ನಿನ್ನ – ।
ಎರಕದ ಕಾಯ್ದ ಕಂಬಕೆ ತಕ್ಕೆಗೆಯ್ಸಿ ॥
ಪರಿಪರಿ ಭವದೊಳು ಬಳಲಿಸುತಿರುವಾಗ ।
ಪುರುಷೋತ್ತಮನ ನಾಮ ನೆನೆಯಗೊಡದು ಮನ ೬

ದುರಿತಕೋಟಿಗಳ ಹರಿಸುವ – ನಿನ್ನ – ।
ನರಕಬಾಧೆಗಳ ತಪ್ಪಿಸುವ ॥
ಪರಮಪುರುಷ ನಮ್ಮ ಪುರಂದರವಿಠಲನ ।
ನಿರುತದಿ ನೆನೆದು ನೀ ಸುಖಿಯಾಗೋ ಮನವೆ ೭

## ೧೧೭

ಈ ಜೀವ ನಿಂದು ಫಲವೇನು ।
ರಾಜೀವಲೋಚನನ ಮರೆದಿಹ ತನುವಿನಲಿ ಪ.

ಅರುಣನುದಯಲೆದ್ದು ಹರಿಸ್ಮರಣೆಯ ಮಾಡಿ ।
ಗುರು – ಹಿರಿಯರ ಚರಣಕಮಲಕೆರಗಿ ॥
ಪರಮಶುಚಿಯಾಗಿ ನದಿಯಲಿ ಮಿಂದು ರವಿಗರ್ಘ್ಯ ।
ವೆರೆಯದೆ ಮರೆತ ಈ ಪಾಪಿತನುವಿನಲಿ ೧

ಹೊನ್ನಗಿಂಡಿಯಲಿ ಅಗ್ರೋದಕವನೆ ತಂದು ।
ಚೆನ್ನಾಗಿ ಹರಿಗೆ ಅಭಿಷೇಕ ಮಾಡಿ ॥
ರನ್ನದುಡಿಗೆಯುಡಿಸಿ ರತುನಗಳಳವಡಿಸಿ ।
ಕಣ್ಣಿರಲು ನೋಡಲರಿಯದ ಪಾಪಿತನುವಿನಲಿ ೨

ನಳನಳಿಸುವ ನಾನಾ ಪುಷ್ಪಗಳು ಶ್ರೀತುಳಸಿ ।
ಹೊಳೆವ ಕಿರೀಟ ಕೊರಳಲಿ ಪದಕ ॥
ನಳಿನಾಕ್ಷನಿಗೆ ಕರ್ಪೂರದಾರತಿಯನೆತ್ತಿ ।
ಕಳೆಯ ನೋಡಲರಿಯದ ಪಾಪಿತನುವಿನಲಿ ೩

ವರಭಕ್ಷ್ಯಗಳು ಪರಮಾನ್ನ ಶಾಲ್ಯನ್ನವು ।
ವರವಾದ ಮಧು ಘೃತ ಕ್ಷೀರವನ್ನು ॥
ಸಿರಿನಾರಾಯಣಗೆ ಸಮರ್ಪಣೆ ಮಾಡಿ ತಾ – ।
ಎರಡು ಕೈ ಮುಗಿಯದ ಪಾಪಿತನುವಿನಲಿ ೪

ಉರಗಾದ್ರಿ – ಸ್ವಾಮಿಪುಷ್ಕರಣಿಗಳು ಮೊದಲಾದ ।
ಪರಿಪರಿ ತೀರ್ಥಗಳನೆಲ್ಲ ಮಿಂದು ॥
ತಿರುವೆಂಗಳಪ್ಪ ಶ್ರೀ ಪುರಂದರವಿಠಲನ ।
ಚರಣವನು ಭಜಿಸಲರಿಯದ ಪಾಪಿತನುವಿನಲಿ ೫

## ೧೧೮

ಈಸಬೇಕು ಇದ್ದು ಜಯಿಸಬೇಕು
ಹೇಸಿಕೆ ಸಂಸಾರದಲ್ಲಿ ಲೇಶ ಆಶೆ ಇಡದ ಹಾಗೆ ಪ.

ತಾಮರಸ ಜಲದಂತೆ ಪ್ರೇಮವಿಟ್ಟು ಭವದೊಳು
ಸ್ವಾಮಿರಾಮನೆನುತ ಪಾಡಿ ಕಾಮಿತವ ಕೈಕೊಂಬರೆಲ್ಲ ೧

ಗೇರು ಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ
ಮೀರಿ ಆಶೆ ಮಾಡದ ಹಾಗೆ ಧೀರ ಕೃಷ್ಣನ ನೆನೆಯುವರೆಲ್ಲ ೨

ಮಾಂಸದಾಶೆಗೆ ಮತ್ಸ್ಯವು ಸಿಲುಕಿ ಹಿಂಸೆ ಪಟ್ಟಪರಿಯೊಳು
ಮೋಸ ಹೋಗದೆ ಪುರಂದರವಿಠಲ ಜಗದೀಶನೆನುತ
ಕೊಂಡಾಡುವರೆಲ್ಲ ೩

## ೧೧೯

ಈ ಸಿರಿಯ ನಂಬಿ ಹಿಗ್ಗಲಿ ಬೇಡ ಮನವೇ ಪ.

ವಾಸುದೇವನ ಭಜಿಸಿ ಸುಖಿಯಾಗು ಮನವೇ ಅಪ

ಮಡದಿ ಮಕ್ಕಳು ಎಂದು ವಡವೆ ವಸ್ತುಗಳೆಂದು
ಸಡಗರದಿ ತಾ ಕೊಂಡು ಭ್ರಮಿಸಲೇಕೆ
ಬಿಡದೆ ಯಮನಾಳುಗಳು ಬಾ ಎಂದು ಎಳೆವಾಗ
ಮಡದಿ ಮಕ್ಕಳು ಕಡೆಗೆ ತೊಲಗುವರೊ ಮರುಳೆ ೧

ನೆಂಟರೊಳಗೆ ಪೋಗಿ ನಾಲ್ಕುದಿನವಿದ್ದರೆ
ಎಂಟುದಿನದಾಯಾಸ ಪೋಗುವಂತೆ
ಉಂಟು ಸೌಭಾಗ್ಯವೆಂತೆಂಬ ಧೈರ್ಯವ ಬಿಟ್ಟು
ವೈಕುಂಠನ ಭಜಿಸು ನೀ ಭ್ರಷ್ಟ ಮನವೆ ೨

ಉಂಟು ಆಶ್ರಯವೆಂದು ಬಡವನ ಕರೆತಂದು
ಕೊಟ್ಟು ಮಾಡಿದ ಧರ್ಮ ಫಲ ನಿನ್ನದು
ಇಷ್ಟಮೂರುತಿ ನಮ್ಮ ಪುರಂದರವಿಠಲನ
ನಿಷ್ಠೆಯಿಂದಲಿ ಭಜಿಸು ದುಷ್ಟಮನವೆ * ೩

## ೧೨೦

ಈ ಶರೀರದ ಭ್ರಾಂತಿ ಇನ್ನೇಕೆ ಮನವೆ ।
ವಾಸುದೇವನ ನೆನೆದು ಸುಖಿಯಾಗು ಮನವೆ ಪ.

ಕಾಲು ಜವಗುಂದಿದುವು ದೃಷ್ಟಿಗಳು ಹಿಂಗಿದುವು ।
ಮೇಲೆ ಜವ್ವನ ಹೋಗಿ ಜರೆಯೊದಗಿತು ॥
ಕಾಲ – ಕರ್ಮಾದಿಗಳು ಕೂಡಿದಾಕ್ಷಣದಲಿ ।
ಬೀಳುವೀ ತನುವಿನೊಳ್ ಇನ್ನಾಸೆಯೆ ಮನವೆ ೧

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ದಂತಗಳು ಸಡಿಲಿದುವು ಧಾತುಗಳು ಕುಂದಿದುವು ।
ಕಾಂತೆಯರು ಜರಿದು ಓಕರಿಸುವರು ॥
ಭ್ರಾಂತಿ ಇನ್ನೇಕೆ ಈ ತನುವು ಬೀಳದ ಮುನ್ನ ।
ಸಂತತ ಶ್ರೀಹರಿಯ ನೆನೆಕಾಣೊ ಮನವೆ ೨

ನೀರಬೊಬ್ಬುಳಿಯಂತೆ ನಿತ್ಯವಲ್ಲ ಈ ದೇಹ ।
ಸಾರುತಿದೆ ನೀ ಮೆಚ್ಚಿ ಮರುಳಾಗದೆ ॥
ಶ್ರೀರಮಣ ಪುರಂದರವಿಠಲನ ನೆನೆನೆನೆದು ।
ಸೂರೆಗೊಳ್ಳಿರೊ ಸ್ವರ್ಗ ಸುಮ್ಮನಿರಬೇಡಿ ೩

## ೧೨೧

ಉದರವೈರಾಗ್ಯವಿದು – ನಮ್ಮ – ।
ಪದುಮನಾಭನಲ್ಲಿ ಲೇಶಭಕುತಿ ಇಲ್ಲ ಪ.

ಉದಯಕಾಲದಲೆದ್ದು ಗಡಗಡ ನಡುಗುತ ।
ನದಿಯಲಿ ಮಿಂದೆನೆಂದು ಹಿಗ್ಗುತಲಿ ॥
ಮದ ಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು ।
ಬದಿಯಲಿದ್ದವರಿಗಾಶ್ಚರ್ಯದೋರುವುದು ೧

ಕರದಲಿ ಜಪಮಣಿ ಬಾಯಲಿ ಮಂತ್ರವು ।
ಅರಿವೆಯ ಮುಸುಕನು ಮೋರೆಗೆ ಹಾಕಿ ॥
ಪರಸತಿಯರ ರೂಪ ಮನದಲಿ ಗುಣಿಸುತ ।
ಪರಮವೈರಾಗ್ಯಶಾಲಿಯೆನಿಸುವುದು ೨

ಕಂಚುಗಾರನಾ ಬಿಡಾರದಿಂದಲಿ ।
ಕಂಚು ಹಿತ್ತಾಳೆಯ ಪ್ರತಿಮೆಯ ನೆರಹಿ ॥
ಮಿಂಚಬೇಕೆಂದು ಬಹುಜ್ಯೋತಿಗಳನೆ ಹಚ್ಚಿ
ವಂಚಕತನದಲಿ ಪೂಜೆಯ ಮಾಳ್ಪುದು ೩

ಬೂಟಕತನದಲಿ ಬಹಳ ಭಕುತಿ ಮಾಡಿ ।
ಸಾಟಿಯಿಲ್ಲವು – ಎನಗೆಂದೆನಿಸಿ ॥

ನಾಟಕಸ್ತ್ರೀಯಂತೆ ಬಯಲಡಂಬವ ತೋರಿ ।
ಊಟಕೆ ಸಾಧನೆ ಮಾಡಿಕೊಂಬುದಿದು ೪

ನಾನು ಎಂಬುದ ಬಿಟ್ಟು ಜ್ಞಾನಿಗಳೊಡನಾಡಿ ।
ಏನಾದುದು ಹರಿ ಪ್ರೇರಣೆಯೆಂದು ।
ಶ್ರೀನಿಧಿ ಪುರಂದರವಿಠಲರಾಯನನು ।
ಕಾಣದೆ ಮಾಡಿದ ಕಾರ್ಯಗಳೆಲ್ಲ ೫

## ೧೨೨

ಎಚ್ಚರದಲಿ ನಡೆ ಮನವೆ – ನಡೆಮನವೆ – ಮುದ್ದು
ಅಚ್ಯುತನ ದಾಸರ ಒಡಗೂಡಿ ಬರುವೆ ಪ.

ಧರ್ಮವ ಮಾಡುವುದಿಲ್ಲಿ – ಇನ್ನು
ಬ್ರಹ್ಮನ ಸಭೆಯ ತೋರುವರು ಮುಂದಲ್ಲಿ
ಕರ್ಮಯೋಜನೆಗಳು ಇಲ್ಲಿ – ಬೆನ್ನ
ಚರ್ಮವ ಸುಲಿಸಿ ತಿನ್ನಿಸುವರು ಅಲ್ಲಿ ೧

ಅನ್ನದಾನವ ಮಾಳ್ಪುದಿಲ್ಲಿ – ಮೃ
ಷ್ಟಾನ್ನವ ತಂದು ಮುಂದಿಡುವರು ಅಲ್ಲಿ
ಅನ್ಯಾಯ ನುಡಿಯುವುದಿಲ್ಲಿ – ಭಿನ್ನ
ಭಿನ್ನವ ಮಾಡಿ ತಿನ್ನಿಸುವರು ಅಲ್ಲಿ ೨

ಮೋಸವ ಮಾಡುವುದಿಲ್ಲಿ – ಸೀಸ
ಕಾಸಿ ಬಾಯೊಳಗೆ ಹೊಯ್ಯುವರಲ್ಲಿ
ದಾಸರ ಪೂಜಿಪುದಿಲ್ಲಿ – ಉ
ರ್ವೀಶಾಧಿಪತಿ ಬಂದನೆಂಬರು ಅಲ್ಲಿ ೩

ವಂಚನೆ ಮಾಡುವುದಿಲ್ಲಿ – ಕಾದ
ಹಂಚಿನ ಪುಡಿಯ ತಿನ್ನಿಸುವರು ಅಲ್ಲಿ
ಪಂಚಾಮೃತದ ಪೂಜೆ ಇಲ್ಲಿ ನಿನಗೆ
ಕಂಚು – ಕಾಳಾಂಜಿಯ ಪಿಡಿದಿಹರಲ್ಲಿ ೪

ಚಾಡಿಯ ನುಡಿವುದು ಇಲ್ಲಿ ಅದ –
ನಾಡಿದ ನಾಲಿಗೆ ಸೀಳುವರಲ್ಲಿ
ಬೇಡಬಂದರೆ ಬಯ್ವುದಿಲ್ಲಿ ನಿನ್ನ –
ಓಡಾಡುವ ಕಾಲು ಕತ್ತರಿಪರಲ್ಲಿ ೫

ಮದ್ದಿಕ್ಕಿ ಕೊಲ್ಲುವುದಿಲ್ಲಿ ಒದ್ದು –
ಹದ್ದು ಕಾಗೆಗಳಿಗೆ ಈಯುವರಲ್ಲಿ
ಕ್ಷುದ್ರ ಬುದ್ಧಿಯ ನಡೆಪುದಿಲ್ಲಿ ದೊಡ್ಡ –
ಗುದ್ದಲಿ ಬೆನ್ನೊಳು ಎಳೆಯುವರಲ್ಲಿ ೬

ಕೊಟ್ಟಭಾಷೆಗೆ ತಪ್ಪುವುದಿಲ್ಲಿ ಕೈಯ –
ಕಟ್ಟಿ ಈಟಿಯಿಂದ ಇರಿಯುವರಲ್ಲಿ
ಕೊಟ್ಟ ಧರ್ಮವ ನಡೆಸುವುದಿಲ್ಲಿ ಬಲು
ಶ್ರೇಷ್ಠ ನೀನೆಂದು ಕೊಂಡಾಡುವರಲ್ಲಿ ೭

ಆಲಯದಾನವು ಇಲ್ಲಿ ವಿ –
ಶಾಲ ವೈಕುಂಠನ ಮಂದಿರವಲ್ಲಿ
ಆಲಯ ಮುರಿಯುವುದಿಲ್ಲಿ ನಿನ್ನ –
ಶೂಲದ ಮೇಲೇರಿಸಿ ಕೊಲುವರಲ್ಲಿ ೮

ತಂದೆ ಮಾತನು ಮೀರುವುದಿಲ್ಲಿ ಹುಲ್ಲು –
ದೊಂದೆಯ ಕಟ್ಟಿ ಸುಡಿಸುವರಲ್ಲಿ
ತಂದೆ ತಾಯ್ಗಳ ಪೂಜೆ ಇಲ್ಲಿ ದೇ –
ವೇಂದ್ರನ ಸಭೆಯ ತೋರುವರು ಮುಂದಲ್ಲಿ ೯

ಗಂಡನ ಬೈಯ್ಯುವುದಿಲ್ಲಿ ಬೆಂಕಿ
ಕೆಂಡವ ತಂದು ಬಾಯಲಿ ತುಂಬುವರಲ್ಲಿ
ಕೊಂಡೆಯ ನುಡಿಸುವುದಿಲ್ಲಿ ಬೆಂಕಿ
ಕುಂಡವ ತಂದು ತಲೆಯಲಿಡುವರಲ್ಲಿ ೧೦

ಹೊನ್ನು ಹೆಣ್ಣನು ಬಯಸುವುದಿಲ್ಲಿ ನಿನ್ನ
ಕಣ್ಣಿಗೆ ಸುಣ್ಣವ ತುಂಬುವರಲ್ಲಿ

ಕನ್ಯಾದಾನವ ಮಾಳ್ಪುದಿಲ್ಲಿ ನಮ್ಮ
ಚೆನ್ನ ಪುರಂದರ ವಿಠಲನೊಲಿವನು ಅಲ್ಲಿ ೧೧

## ೧೨೩

ಎಚ್ಚರಿಕೆ ಎಚ್ಚರಿಕೆ ಮನವೆ – ನಮ್ಮ
ಅಚ್ಯುತನ ಪಾದಾರವಿಂದ ಧ್ಯಾನದಲಿ ಪ.

ಆಶಾಪಾಶದೊಳಗೆ ಸಿಲುಕಿ – ಬಹು
ಕ್ಲೇಶಪಟ್ಟು ತುಚ್ಛ ಸುಖದಿ ಮರುಳಿಕ್ಕಿ
ಹೇಸಿ ಸಂಸಾರದಲಿ ಸಿಲ್ಕಿ – ಮಾಯಾ
ಕ್ಲೇಶ ಅಂಬರ ಕೆಳಗೆ ಮೈಮರೆತು ಸೊಕ್ಕಿ ೧

ಹಣ – ಹೆಣ್ಣು – ಮಣ್ಣಾಸೆ ವ್ಯರ್ಥ – ಈ
ತನುವಿಗೆ ಯಮಪುರ ಪಯಣವೇ ನಿತ್ಯ
ಮೂರು ಶೃಂಗಾರಗಳು ಮಿಥ್ಯ – ಅಂತ
ಕನ ಯಾತನೆಗಳಿಗೆ ಹರಿನಾಮ ಪಥ್ಯ ೨

ತೊಗಲ ಚೀಲ ಒಂಬತ್ತು ಹರುಕು – ನರ
ಬಿಗಿದು ಕಟ್ಟಿ ಒಳಗೆ ಎಲುವುಗಳ ಸಿಲುಕು
ಬಗೆರಕ್ತ – ಮಾಂಸದ ಹುಳುಕು – ಒ
ಳಗೆ ಮಲ – ಕಫ – ವಾತ – ಪಿತ್ತದ ಸರಕು ೩

ದುಷ್ಟರ ಸಹವಾಸ ಹೀನ – ಬಲು
ಇಷ್ಟ ಜನಸಂಗವು ಹರಕೆ ಬಹುಮಾನ
ಎಷ್ಟು ಓದಿದರಷ್ಟು ಜ್ಞಾನ – ಆದರ
ಲ್ಲಿಟ್ಟು ಭಕುತಿಯ ತಿಳಿಯೆಲೊ ಸಾವಧಾನ ೪

ನಾಲಿಗೆಯ ಹರಿಯ ಬಿಡಬೇಡ – ತಿಂಡಿ
ವಾಳರ ರುಚಿಪಾಕಗಳನೂರಿಸಬೇಡ
ಹಾಳು ಮಾತು ಆಡಬೇಡ –ಶ್ರೀ
ಲೋಲ ಪುರಂದರವಿಠಲನ ಬಿಡಬೇಡ ೫

## ೧೨೪

ಎಂತಹುದೊ ನಿನ್ನ ಭಕುತಿ ? ।
ಸಂತತ ನಿನ್ನ ದಾಸರ ಸಂಗವಿರದೆನಗೆ ಪ.

ವ್ರಣವನಾಶಿಪ ಕುರುಡು ನೊಣ ಮೊಸರ ಕಂಡಂತೆ ।
ಧನಿಕರ ಮನೆಗೆ ಕ್ಷಣಕ್ಷಣಕ್ಕೆ ಪೋಗಿ ॥
ತನುಬಾಗಿ ತುಟಿಯೊಣಗಿ ಅಣಕನುಡಿ ಕೇಳ್ವ – ಕೃ – ।
ಪಣ ಮನಕೆ ಎಂತಹದು ನಿನ್ನಯ ಭಕುತಿ ೧

ಅಡಿಯಾಡಿ ಮುಖಬಾಡಿ ನುಡಿಯಡಗಿ ಬಡವನೆಂದು ।
ಒಡಲ ತೋರಿಸಿದೆನೊ ಕಡುದೈನ್ಯದಿ ॥
ಒಡೆಯ ನೀನಹುದೆಂದು ಮಡದಿ – ಮಕ್ಕಳಿಗೆ ಹೆಸ – ।
ರಿಡುವ ಅವರಡಿಗೆ ಎರಗುವನ ಮನಕೆ ೨

ಹೋಗಿಬಾರೈ ಎಂದು ಅತಿಗಳೆದರು ತಲೆ – ।
ಬಾಗಿ ನಿಂತು ಅಲ್ಲಿ ಮೌನವಾಗಿ ॥
ಒಗರಕೆ ಮನೆಮನೆ ತಪ್ಪದೆ ತಿರುಗುವ ।
ಜೋಗಿಯ ಕೈಯಕೋಡಗದಂಥ ಮನಕೆ ೩

ಅನ್ನವ ತೋರಿ ಚೆಟಿಕಿರಿಯೆ ಬಾಲವ ಬೀಸಿ ।
ಕುನ್ನಿ ಸುಳಿದಾಡಿ ಕಾಲ್ಗೆರಗುವ ತೆರದಿ ॥
ಹೆಣ್ಣಿನಾಶೆಗೆ ಬಾಯಬಿಡುವ ಸ್ತ್ರೈಣನ ಪರಿ – ।
ಘನ್ನವಯ್ಯ ಘನ್ನವಯ್ಯ ಬನ್ನಬಡುವ ಕುನ್ನಿಮನಕೆ ೪

ವಟುವಾಗಿ ಬಲಿಯ ದಾನವನು ಬೇಡಹೋದ ।
ಕಟು ಕಷ್ಟಗಳನೆಲ್ಲ ನೀನೆ ಬಲ್ಲೆ ॥
ವಟಪತ್ರಶಾಯಿ ಶ್ರೀಫಣಿವರದ ಪುರಂದರ – ।
ವಿಠಲ ನಿನ್ನ ದಾಸರ ಸಂಗಸುಖವಿರದೆ ೫

## ೧೨೫

ಎಲ್ಲವನು ಬಲ್ಲೆನೆನ್ನುವಿರಲ್ಲ
ಸಲ್ಲದ ಗುಣ ಬಿಡಲಿಲ್ಲ ಪ.

ಸೊಲ್ಲಿಗೆ ಶರಣರ ಕಥೆಗಳ ಪೇಳುತ
ಅಲ್ಲದ ನುಡಿಗಳ ನುಡಿಯುವಿರಲ್ಲ ಅಪ

ಕಾವಿಯನುಟ್ಟು ತಿರುಗುವಿರಲ್ಲ
ಕಾಮವ ಬಿಡಲಿಲ್ಲ
ನೇಮ – ನಿಷ್ಠೆಗಳ ಮಾಡುವಿರಲ್ಲ
ತಾಮಸ ಬಿಡಲಿಲ್ಲ
ತಾವೊಂದರಿಯದೆ ಪರರಲಿ ತಿಳಿಯದೆ
ಕೀವದ ಕುಳಿಯಲಿ ಬೀಳುವಿರಲ್ಲ ೧

ಗುರುಗಳ ಸೇವೆಯ ಮಾಡಿದಿರಲ್ಲ
ಗುರುತಾಗಲೆ ಇಲ್ಲ
ಪರಿಪರಿ ದೇಶವ ತಿರಿಗಿದಿರಲ್ಲ
ಪೊರೆಯುವರಿನ್ನಿಲ್ಲ
ಅರಿವೊಂದರಿಯದೆ ಆಗಮ ತಿಳಿಯದೆ
ನರಕಕೂಪದಲಿ ಬೀಳುವಿರಲ್ಲ ೨

ಬ್ರಹ್ಮಜ್ಞಾನಿಗಳೆನಿಸುವಿರಲ್ಲ
ಹಮ್ಮನು ಬಿಡಲಿಲ್ಲ
ಸುಮ್ಮನೆ ಯಾಗವ ಮಾಡುವಿರಲ್ಲ
ಹೆಮ್ಮೆಯ ಬಿಡಲಿಲ್ಲ
ಗಮ್ಮನೆ ಪುರಂದರವಿಠಲನ ಪಾದಕೆ
ಒಮ್ಮೆಯಾದರು ನೀವೆರಗಲೆ ಇಲ್ಲ ೩

## ೧೨೬

ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ ಪ.

ವೇದ ಶಾಸ್ತ್ರ ಪಂಚಾಗ ಓದಿಕೊಂಡು ಪರರಿಗೆ
ಬೋಧನೆಯ ಮಾಡುವುದು
ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೧

ಚಂಡ ಭಟರಾಗಿ ನಡೆದು ಕತ್ತಿಢಾಲು ಕೈಲಿ ಹಿಡಿದು
ಖಂಡ ತುಂಡು ಮಾಡುವುದು
ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೨

ಅಂಗಡಿಗಳನ್ನೆ ಹೂಡಿ ವ್ಯಂಗ್ಯ ಮಾತುಗಳಾಡಿ
ಭಂಗಬಿದ್ದು ಗಳಿಸುವುದು
ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೩

ಕುಂಟೆ ತುದಿಗೆ ಕೊರಡುಹಾಕಿ ಹೆಂಟೆಮಣ್ಣು ಸಮಮಾಡಿ
ರೆಂಟೆ ಹೊಡೆದು ಬೆಳೆಸುವುದು
ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೪

ಬೆಲ್ಲದಂತೆ ಮಾತನಾಡಿ ಎಲ್ಲರನ್ನು ಮರುಳು ಮಾಡಿ
ಸುಳ್ಳು ಬೊಗಳಿ ತಿಂಬುವುದು
ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೫

ಕೊಟ್ಟಣವ ಕುಟ್ಟಿಕೊಂಡು ಕಟ್ಟಿಗೆಯ ಹೊತ್ತುಕೊಂಡು
ಕಷ್ಟಮಾಡಿ ತಿಂಬುವುದು
ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೬

ತಾಳದಂಡಿಗೆ ಶ್ರುತಿ ಮೇಳ ತಂಬೂರಿ ಹಿಡಿದುಕೊಂಡು
ಸೂಳೆಯಂತೆ ಕುಣಿಯುವುದು
ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೭

ಸನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಭೈರಾಗಿ
ನಾನಾ ವೇಷ ಹಾಕುವುದು
ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೮

ಹಳ್ಳದಲ್ಲಿ ಕುಳಿತು ಕೊಂಡು ಕಲ್ಲು ದೊಣ್ಣೆ ಹಿಡುದುಕೊಂಡು
ಕಳ್ಳತನವ ಮಾಡುವುದು
ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೯

ಅಂದಣ ಪಲ್ಲಕ್ಕಿ ಏರಿ ಮಂದಿ ಮಾರ್ಬಲ ಕೂಡಿ
ಚಂದದಿಂದ ಮೆರೆಯುವುದು
ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೧೦

ಉನ್ನಂತ ಪುರಂದರವಿಠಲ ರಾಯನ ಧ್ಯಾನವನು
ಮನಮುಟ್ಟಿ ಮಾಡುವುದು
ಮುಕ್ತಿಗಾಗಿ ಆನಂದಕಾಗಿ* ೧೧

## ೧೨೭

ಎಲ್ಲಿರುವನೋ ರಂಗನೆಂಬ ಸಂಶಯ ಬೇಡ ।
ಎಲ್ಲಿ ಭಕುತರು ಕರೆದರಲ್ಲಿ ಬಂದೊದಗುವನು ಪ.

ತರಳ ಪ್ರಹ್ಲಾದ ಶ್ರೀಹರಿ ವಿಶ್ವಮಯನೆಂದು ।
ಬರೆದೋದಲವನ ಪಿತ ಕೋಪದಿಂದ ॥
ಸ್ಥಿರವಾದೊಡೀ ಕಂಬದಲಿ ತೋರು – ತೋರೆನಲು ।
ಭರದಿ ಬರಲಾಗ ವೈಕುಂಠವಲ್ಲಿಹುದೊ ? ೧

ಕುರುಪತಿಯು ದ್ರೌಪದಿಯ ಸೀರೆ ಸೆಳೆಯುತಿರೆ ।
ತರುಣಿ ಹಾ ಕೃಷ್ಣ ಎಂದೊದರೆ ಕೇಳಿ ॥
ಭರದಿಂದಲಕ್ಷಯಾಂಬರವೀಯೆ ಹಸ್ತಿನಾ ।
ಪುರವು ದ್ವಾರಾವತಿಗೆ ಕೂಗಳತೆಯೆ ೨

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ಕರಿರಾಜನನು ನೆಗಳು ನುಂಗುತಿರೆ ಭಯದಿಂದ ।
ಹರಿಯೆ ಕಾಯೆಂದು ಮೊರೆಯಿಡಲು ಕೇಳಿ ॥
ಕರುಣದಿಂ ಬಂಧನವ ಬಿಡಿಸಲಾ ಗಜರಾಜ – ।
ನಿರುವ ಸರಸಿಗೆ ಅನಂತಾಸನ ಮುಮ್ಮನೆಯೆ ೩

ಪಾಪಕರ್ಮವ ಮಾಡಿದಜಮಿಳನ ಯಮಭಟರು ॥
ಕೋಪದಿಂದಲಿ ಸೆಳೆಯೆ ಭೀತಿಯಿಂದ ॥
ತಾ ಪುತ್ರನನು ಕರೆಯೆ ಕೇಳಿ ರಕ್ಷಿಸಿ ಶ್ವೇತ –
ದೀಪವೀ ಧರೆಗೆ ಸಮೀಪವಾಗಿಹುದೆ ? ೪

ಅಣು – ಮಹತ್ತುಗಳಲ್ಲಿ ಪರಿಪೂರ್ಣನೆಂದೆನಿಸಿ ।
ಎಣೆಯಿಲ್ಲದ ಮಹಾಗುಣಪೂರ್ಣನು ॥
ಘನಮಹಿಮನಾದ ಶ್ರೀ ಪುರಂದರವಿಠಲನು ।
ನೆನೆದವರ ಮನದೊಳಗೆ ಇಹನೆಂಬ ಬಿರುದುಂಟು ೫

## ೧೨೮

ಎಲೆ ಮನವೇ ಕೇಳು ಕೇಶವನ ನಾಮವ ನುಡಿಸು ।
ಎಲೆ ಮನವೆ ಮುರವೈರಿಯಂಘ್ರಿಗಳ ಭಜಿಸು ।
ಎಲೆಲೆ ಕರಗಳಿರ ಶ್ರೀಧರನ ಸೇವೆಯ ಮಾಡಿ ।
ಎಲೆ ಕರ್ಣಗಳಿರ ಅಚ್ಯುತನ ಕಥೆ ಕೇಳಿ ೧

ಎಲೆ ನೇತ್ರಗಳಿರ ಶ್ರೀಕೃಷ್ಣಮೂರ್ತಿಯ ನೋಡಿ ।
ಎಲೆ ಪಾದಗಳಿರ ಹರಿಯಾತ್ರೆಯನು ಮಾಡಿ ॥
ಎಲೆ ನಾಸಿಕವೆ ಮುಕುಂದನ ಚರಣಕರ್ಪಿಸಿದ ।
ತುಳಸೀ ಪರಿಮಳವನಾಘ್ರಾಣಿಸನುದಿನವು ೨

ಎಲೆ ಶಿರವೆ ನೀನಧೋಕ್ಷಜನ ಶ್ರೀ ಚರಣದ ।
ಜಲರುಹದೊಳಗಳಿಯಂತೆ ಲೋಲಾಡು ।
ಎಲೆ ತನುವೆ ನೀನು ಶ್ರೀ ಪುರಂದರವಿಠಲನ ।
ಸಲೆ ಭಕುತ ಜನರಂಗಸಂಗತಿಯಲಿ ಬಾಳು ೩

## ೧೨೯

ಎಲೆ ಮನವೆ ನೀ ತಿಳಿ ಹರಿ ಸರ್ವೋತ್ತಮನೆಂದು ।
ಸುಲಲಿತಾತ್ಮನ ಭಜಿಸಿ ಸುಖಿಯಾಗೊ ಮನವೆ ಪ.

ಇಕ್ಷುದಂಡಗಳಿರಲು ಇಂಧನವ ಮೆಲಲೇಕೆ ।
ಅಕ್ಷಯ ಪಾತ್ರೆಯಿರಲು ಹಸಿವೆಯೆನಲೇಕೆ ।
ನಿಕ್ಷೇಪ ನಿಧಿಯಿರಲು ನಿರುತ ದಾರಿದ್ರ್ಯವೇಕೆ ।
ಪಕ್ಷಿವಾಹನನಿರಲು ಪರದೈವವೇಕೆ ೧

ಸುರಧೇನು ಕೈಸೇರಿ ಸುಖವಿಲ್ಲವೆನಲೇಕೆ ।
ಗರುಡ ಮಂತ್ರವ ಜಪಿಸಿ ಗರಳಭಯವೇಕೆ ॥
ತರಣಿಕಿರಣಗಳಿರಲು ಹಲವು ಜ್ಯೋತಿಗಳೇಕೆ ।
ಮುರಹರನ ಪೂಜಿಸದೆ ಮುಂದುಗೆಡಲೇಕೇ ೨

ಭಾವಶುದ್ಧಿಗಳಿರಲು ಬಯಲಡಂಬಕವೇಕೆ ।
ದೇವತಾ ಸ್ತುತಿಯಿರದ ದೇಹವೇಕೆ ॥
ಆವಗಂ ಹರಿಯೆನದೆ ಅನ್ಯಚಿಂತೆಗಳೇಕೆ ।
ದೇವ ಪುರಂದರವಿಠಲನಿರಲು ಭಯವೇಕೆ ೩

## ೧೩೦

ಏಕೆ ಕಕುಲಾತಿ ಪಡುವೆ – ಎಲೆ ಮನವೆ ಪ

ಲೋಕವನೆ ಸಲಹುವ ಶ್ರೀನಿವಾಸನು ನಮ್ಮ ।
ಸಾಕಲಾರದೆ ಬಿಡುವನೇ – ಮನವೆ ಅಪ

ಆನೆಗಳಿಗಯ್ದಾರುಮಣವಿನಾಹಾರ
ವನು ಅಲ್ಲಿ ತಂದಿತ್ತವರದಾರೊ ।
ಜೇನುನೊಣ ಮೊದಲಾದ ಕ್ರಿಮಿ – ಕೀಟಗಳಿಗೆಲ್ಲ ।
ತಾನುಣಿಸದಲೆ ಬಿಡುವನೇ – ಮರುಳೆ ೧

ಏಕೆ ಮೂರ್ಖನಾದೆ ನೀನು
ಕಾಕು ಬುದ್ಧಿಗಳನು ಬಿಟ್ಟು
ಲೋಕನಾಥನ ನೆನೆಯೊ ಮನುಜಾ ಅಪ

ಮಕ್ಕಳು ಹೆಂಡರು ತನ್ನವರೆಂದು
ರೊಕ್ಕವನು ಗಳಿಸಿಕೊಂಡು
ಸೊಕ್ಕಿಂದ ತಿರುಗುವರೇನೊ ಹೇ ಮನುಜಾ ೧

ಕಕ್ಕಸದ ಯಮದೂತರು ಬಂದು
ಲೆಕ್ಕವಾಯಿತು ನಡೆಯೆಂದರೆ
ಸಿಕ್ಕವರೆಲ್ಲ ಬಿಡಿಸುವರೇನೊ ಹೇ ಮನುಜಾ ೨

ಅರಿಷಡ್ವರ್ಗದ ಆಟವ ಬಿಟ್ಟು
ಪುರಂದರವಿಠಲನ ಹೊಂದಲುಬೇಕು
ಹರಿಯನು ಸೇರುವ ಮಾರ್ಗವ ನೋಡೋ ಹೇ ಮನುಜಾ ೩

## ೧೩೪

ಏನಾಯಿತೀ ಜನಕೆ ಮೌನವದು ಕವಿದಂತೆ ।
ಮಾನುಷ್ಯರಾಗಿ ಮರೆತರು ಹರಿಯನು ಪ.

ನಾಲಿಗೆಗೆ ಮುರಿಯಿತೆ ನೆಗ್ಗಿಲ ಕೊನೆಮುಳ್ಳು ।
ಬಾಲತನದಲಿ ಭೂತ ಹೊಡೆಯಿತೆ – ಕೆಳಗು – ।
ಮೇಲಿನ ತುಟಿ ಎರಡು ಒಂದಾಯಿತೇ – ಅವರ – ।
ಕಾಲಮೃತ್ಯು ಬಂದು ಕಂಗೆಡಿಸಿತೆ ? ೧

ಘಟಸರ್ಪ ಕಚ್ಚಿ ವಿಷ ಘನವಾಗಿ ಏರಿತೆ ।
ಕಟಗರಿಸಿ ನಾಲಿಗೆ ಕಡಿದು ಹೋಯಿತೆ ? ॥
ಹಟ ಹಿಡಿದ ಹೊಲೆಮನಸು ಹರಿ ಎನ್ನಲಾರದೆ ।
ಕುಟಿಲ ಚಂಚಲ ಬುದ್ಧಿ ಕಂಗೆಡಿಸಿತೆ ? ೨

ಹರಿಯೆಂದರವರ ಶಿರ ಹರಿದು ಬೀಳುವುದೆ ।
ಪರಬ್ರಹ್ಮ ಪಣೆಯಲ್ಲಿ ಬರೆದಿಲ್ಲವೆ ॥
ಸಿರಿದೇವಿಗೊಲಿದ ಶ್ರೀ ಪುರಂದರವಿಠಲನ ।
ಸ್ಮರಿಸಿದರೆ ಸಿಡಿಲೆರಗಿ ಸುಟ್ಟು ಕೊಲ್ಲುವುದೆ ? ೩

## ೧೩೫

ಏನು ಇರದ ಎರಡು ದಿನದ ಸಂಸಾರ
ಜ್ಞಾನದಲಿ ದಾನಧರ್ಮವ ಮಾಡಿರಯ್ಯ ಪ.

ಹಸಿದು ಬಂದವರಿಗೆ ಅಶನವೀಯಲು ಬೇಕು
ಶಿಶುವಿಗೆ ಪಾಲ್ಬೆಣ್ಣೆಯುಣಿಸಬೇಕು
ಹಸನಾದ ಭೂಮಿಯನು ಧಾರೆಯರೆಯಲು ಬೇಕು
ಪುಸಿಯಾಡದಲೆ ಭಾಷೆ ನಡೆಸಲೇಬೇಕು ೧

ಕಳ್ಳತನಗಳ ಮಾಡಿ ಒಡಲ ಹೊರೆಯಲು ಬೇಡ
ಕುಳ್ಳಿರ್ದ ಸಭೆಯೊಳಗೆ ಕುಟಿಲ ನಡೆಸಲು ಬೇಡ
ಒಳ್ಳೆಯವ ನಾನೆಂದು ಬಲು ಹೆಮ್ಮೆಲಿರಬೇಡ
ಬಾಳ್ವೆ ಸ್ಥಿರವೆಂದು ನೀ ನಂಬಿ ಕೆಡಬೇಡ ೨

ದೊರೆ ತನವು ಬಂದಾಗ ಕೆಟ್ಟು ನುಡಿಯಲು ಬೇಡ
ಸಿರಿ ಬಂದ ಕಾಲಕ್ಕೆ ಮೆರೆಯಬೇಡ
ಸಿರಿವಂತನಾದರೆ ಪುರಂದರವಿಠಲನ
ಚರಣಕಮಲವ ಸೇರಿ ಸುಖಿಯಾಗು ಮನುಜ * ೩

## ೧೩೬

ಏನೇನ ದಾನವ ಮಾಡಲು – ಹರಿಯ ।
ಧ್ಯಾನಕೆ ಸಮವಾದ ದಾನಂಗಳುಂಟೆ ? ಪ.

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ದಿನಕೊಂದು ಲಕ್ಷ ಗೋದಾನವ ಮಾಡಲು ।
ಅನುದಿನ ಉದಕದಾನವ ಮಾಡಲು ॥
ಮನಶುದ್ಧವಾದ ಭೂದಾನವ ಮಾಡಲು ।
ವನಜನಾಭನ ಧ್ಯಾನಕೆ ಸಮವುಂಟೆ ? ೧

ಉತ್ತಮವಾದ ವಸ್ತ್ರವ ದಾನಮಾಡಲು ।
ಮುತ್ತು ಮಾಣಿಕವ ದಾನವ ಮಾಡಲು ॥
ಅತ್ಯಂತ ವಿದ್ಯಾ ಪ್ರದಾನವ ಮಾಡಲು ।
ಚಿತ್ತಜಪಿತನ ಧ್ಯಾನಕೆ ಸಮವುಂಟೆ ? ೨

ಶತಕೋಟಿ ಕನ್ಯಾಪ್ರದಾನವ ಮಾಡಲು ।
ಶತಶತ ಸುವರ್ಣ ದಾನವ ಮಾಡಲು ॥
ಮಿತಿಯಿಲ್ಲದೆ ಅನ್ನದಾನವ ಮಾಡಲು ।
ಕ್ಷಿತಿಪತಿಯ ಪಾದಧ್ಯಾನಕೆ ಸಮವುಂಟೆ ? ೩

ನಾನಾ ತೀರ್ಥದಲಿ ಸ್ನಾನವ ಮಾಡಲು ।
ಕಾನನದೊಳಗೆ ತಪವ ಮಾಡಲು ।
ಜ್ಞಾನಿಯಾಗಿ ಕಾಶೀಯಾತ್ರೆಯ ಮಾಡಲು ।
ಜಾನಕೀಪತಿಯ ಧ್ಯಾನಕೆ ಸಮವುಂಟೆ ? ೪

ಧಾರಣೆ ಪಾರಣೆ ಭೀಷ್ಮಪಂಚಕ ಮಾಡಿ ।
ಹರುಷದಿ ವಿಷ್ಣುಪಂಚಕ ಮಾಡಲು ॥
ಪರಮ ಕಠಿಣ ಚಾಂದ್ರಾಯಣ ಮಾಡಲು ।
ಪುರಂದರವಿಠಲನ ಧ್ಯಾನಕೆ ಸಮವುಂಟೆ ? ೫

## ೧೩೭

ಏನೇನ ಮಾಡಿದರೇನು ಫಲವಯ್ಯ
ಭಾನುಕೋಟಿ ತೇಜ ಶ್ರೀನಿವಾಸನ ಭಜಿಸದೆ ಪ.

ಹಲವು ಓದಿದರೇನು ಹಲವು ಕೇಳಿದರೇನು
ಜಲದೊಳು ಮುಳುಗಿ ಕುಳಿತಿದ್ದರೇನು

ಛಲದಿಂದ ಮುಸುಕಿಟ್ಟು ಬೆರಳನೆಣಿಸಿದರೇನು
ಚೆಲುವ ದೇವನೊಳು ಎರಕವಿಲ್ಲದಾತನ ೧

ಅನ್ನ ಜರೆದು ಅರಣ್ಯ ಚರಿಸದರೇನು
ಉನ್ನತ ವ್ರತಗಳಾಚಾರಿಸಿದರೇನು
ಚೆನ್ನಗಾತಿಯ ಸಂಗ ಬಿಟ್ಟು ಇದ್ದರೇನು
ಗಾನಲೋಲನಲಿ ಎರಕವಿಲ್ಲದನಕ ೨

ಬತ್ತಲೆ ತಿರುಗಿ ಅವಧೂತನೆನಿಸಿದರೇನು
ತತ್ವ ವಾಕ್ಯಂಗಳ ಪೇಳಿದರೇನು
ಚಿತ್ತಜನಯ್ಯ ಶ್ರೀ ಪುರಂದರವಿಠಲನ
ಚಿತ್ತದೊಳಿರಿಸಿ ಒಲಿಸಿಕೊಳ್ಳದನಕ ೩

## ೧೩೮

ಏಳಲವ ಮಾಡಿದಿರಿ ಏನ ಕೊಟ್ಟರು ಬೇಡ
ಕೀಳು ಮನುಜರ ಸಂಗ ಸಾವಿರ ಕೊಟ್ಟರು ಬೇಡ ಪ.

ಆಡಿ ತಪ್ಪುವನವನ ಆಶೆಮಾಡಲು ಬೇಡ
ಕೂಡಿ ನಡೆಯುವಲ್ಲಿ ಕಪಟ ಬೇಡ
ಮೂಢ ಹೆಣ್ಣಿನ ಸಂಗ ಮಮತೆ ಇದ್ದರೂ ಬೇಡ
ಮಾಡಿದಪಕಾರವನ್ನು ಮರೆಯಬೇಡ ೧

ಬಂಧುವರ್ಗದಿ ಬಲು ನಿಂದು ವಾದಿಸಬೇಡ
ಮಂದಮತಿಯ ಕೂಡ ಮಾತು ಬೇಡ
ಬರದ ತಿಥಿಗಳಲಿ ಬರಿದೆ ಕೋಪಿಸಬೇಡ
ಇಂದಿರೇಶನ ಮರೆದು ಜಡವಾಗಬೇಡ ೨

ಹವಣರಿಯದೆ ಹಗೆಗಳ ಹತ್ತಿರಗೇಯಬೇಡ
ಜವನ ಭೂಮಿಯಲಿದ್ದು ಜೊತೆ ಬೇಡ
ಭುವನೀಶ ಪುರಂದರವಿಠಲನ ನೆನೆಯದೆ
ಅವಮತಿಯಾಗಿ ನೀ ಕೆಡಲುಬೇಡ ೩

## ೧೩೯

ಒಪ್ಪನಯ್ಯ – ಹರಿ – ಮೆಚ್ಚನಯ್ಯ ಪ

ಉತ್ತಮ ತಾನೆಂದುಕೊಂಡು ಉದಯ ಕಾಲದಲ್ಲಿ ಎದ್ದು ।
ನಿತ್ಯನಿತ್ಯ ನೀರಿನೊಳಗೆ ಕಾಗೆ ಹಾಗೆ ಮುಳುಗುವವಗೆ ೧

ಚರ್ಮದ ದೇಹಕ್ಕೆ ಗೋಪಿಚಂದನವ ತೊಡೆದುಕೊಂಡು ।
ಎಮ್ಮೆಯ ರೋಗದ ಬರೆಯ ಹಾಗೆ ಅಡ್ಡತಿಡ್ಡ ಬರೆದ ಮನುಜಗೆ ೨

ಮಾತಿನಲ್ಲಿ ಮತ್ಸರವು ಮನಸಿನೊಳಗೆ ವಿಷದ ಗುಳಿಗೆ ।
ಓತಿಯಂತೆ ಮರದ ಮೇಲೆ ನಮಸ್ಕಾರ ಮಾಡುವವಗೆ ೩

ನಿಷ್ಠೆಯುಳ್ಳವ ತಾನೆಂದು ಪೆಟ್ಟಿಗೆ ಮುಂದಿಟ್ಟು ಕೊಂಡು ।
ಕೊಟ್ಟಿಗೆಯೊಳಗಿನ ಎತ್ತಿನಂತೆ ನುಡಿಸುವ ಗಂಟೆಯ ಶಬ್ದಕೆ ಆತ ೪

ಏಕೋಭಾವ ಏಕೋಭಕ್ತಿ ಏಕನಿಷ್ಠೆಯಿಂದಲಿ ।
ಬೇಕಾದಂಥ ಮುಕುತಿಯ ನೀಡುವ ಪುರಂದರವಿಠಲನ
ಸ್ಮರಿಸದ ಮನುಜಗೆ ೫

## ೧೪೦

ಒಲ್ಲೆನೆ ವೈದಿಕ ಗಂಡನ – ನಾ –
ನೆಲ್ಲಾದರೂ ನೀರ ಧುಮುಕುವೆನಮ್ಮ ಪ.

ಉಟ್ಟೇನೆಂದರೆ ಇಲ್ಲ ತೊಟ್ಟೇನೆಂದರೆ ಇಲ್ಲ ।
ಕೆಟ್ಟ ಸೀರೆಯ ನಾನುಡಲಾರೆನೆ ॥
ಹಿಟ್ಟ ತೊಳಸಿ ಎನ್ನ ರಟ್ಟೆಯೆಲ್ಲ ನೊಂದವು ।
ಎಷ್ಟೆಂದು ಹೇಳಲಿ ಕಷ್ಟದ ಒಗತನ ೧

ಕೃಷ್ಣಾಜಿನವನು ರಟ್ಟೆಯಲಿ ಹಾಕಿಕೊಂಡು ॥
ಬೆಟ್ಟಲಿ ಗಿಂಡಿಯ ಹಿಡಿದಿಹನೆ ॥

ದಿಟ್ಟತನದಿ ನಾನೆದುರಿಗೆ ಹೋದರೆ ।
ದೃಷ್ಟಿಯಿಂದಲಿ ಎನ್ನ ನೋಡನಮ್ಮ ೨

ನಿನ್ನಾಣೆ ಹುಸಿಯಲ್ಲ ಬಿನ್ನಣಮಾತಲ್ಲ ।
ಕಣ್ಣಸನ್ನೆಯಂತು ಮೊದಲೆ ಇಲ್ಲ ॥
ಮುನ್ನಿನ ಜನ್ಮದಲಿ ಪುರಂದರವಿಠಲನ ।
ಚೆನ್ನಾಗಿ ಪೂಜೆಯ ಮಾಡಲಿಲ್ಲಮ್ಮ ೩

## ೧೪೧

ಕಡುಕೃಪೆಯಿಂದ ಹರಿ ಒಲಿದರೆ ಸತ್ಯದ
ನಡೆವಳಿ ಮೌನವೆ ಸಾಕ್ಷಿ
ದೃಢ ಭಕ್ತರಿಗುಣಬಡಿಸಿದಂಥವರಿಗೆ
ಷಡುರ ಸಾನ್ನವೇ ಸಾಕ್ಷಿ ಪ

ಅನ್ನದಾನ ಮಾಡಿದ ಮನುಜಗೆ – ದಿ
ವ್ಯಾನ್ನವುಂಬುವುದೇ ಸಾಕ್ಷಿ
ಅನ್ನದಾನ ಮಾಡದ ಮನುಜಗೆ – ಪರ
ರನ್ನಕೆ ಬಾಯ್ಬಿಡುವುದೆ ಸಾಕ್ಷಿ ೧

ಕನ್ಯಾದಾನ ಮಾಡಿದ ಮನುಜಗೆ ಚೆಲ್ವ
ಹೆಣ್ಣಿನ ಭೋಗವೇ ಸಾಕ್ಷಿ
ಕನ್ಯಾದಾನ ಮಾಡದ ಮನುಜಗೆ – ಪರ
ಹೆಣ್ಣಿನ ಹೋರಾಟವೇ ಸಾಕ್ಷಿ ೨

ಪರರಿಗೊಂದು ತಾನೊಂದುಂಬುವರಿಗೆ
ಜ್ವರ – ಗುಲ್ಮ ರೋಗವೇ ಸಾಕ್ಷಿ
ಪರಿಪರಿ ವಿಧದಿಂದ ಹಿರಿಯರ ದೂರುವಗೆ
ತಿರಿದು ತಿಂಬುವುದೇ ಸಾಕ್ಷಿ ೩

ಕಂಡ ಪುರುಷಗೆ ಕಣ್ಣಿಡುವ ಸತಿಗೆ – ತನ್ನ
ಗಂಡನ ಕಳೆವುದೇ ಸಾಕ್ಷಿ

ಪುಂಡತನದಿ ಪರ ಹೆಂಗಳೆನಳುಪುವಗೆ
ಹೆಂಡಿರ ಕಳೆವುದೇ ಸಾಕ್ಷಿ ೪

ಕ್ಷೇತ್ರದಾನವ ಮಾಡಿದ ಮನುಜಗೆ – ಏಕ
ಛತ್ರದ ರಾಜ್ಯವೇ ಸಾಕ್ಷಿ
ಮುಕ್ತಿ ಪಡೆದು ತಿಳಿ ಪುರಂದರವಿಠಲನ
ಭಕ್ತನಾಗುವುದೇ ಸಾಕ್ಷಿ ೫

## ೧೪೨

ಕಣ್ಣಿನೊಳಗೆ ನೋಡೊ ಹರಿಯ – ಒಳ –
ಗಣ್ಣಿನಿಂದಲಿ ನೋಡೊ ಮೂಜಗದೊಡೆಯನ ಪ.

ಆಧಾರ ಮೊದಲಾದ ಆರು – ಚಕ್ರ
ಶೋಧಿಸಿ ಸುಡಬೇಕು ಈಷಣ ಮೂರು ॥
ಸಾಧಿಸಿ ಸುಷಮ್ನ ಏರು ಅಲ್ಲಿ
ಭೇದಿಸಿ ನೀ ಪರಬ್ರಹ್ಮನ ಸೇರು ೧

ಎವೆಹಾಕದೆ ಮೇಲೆ ನೋಡು – ಮುಂದೆ
ತವಕದಿಂದಲಿ ವಾಯುಬಂಧನ ಮಾಡು ॥
ಸವಿದು ನಾದವ ಪಾನಮಾಡು – ಅಲ್ಲಿ
ನವವಿಧ ಭಕ್ತಿಯಲಿ ನಲಿನಲಿದಾಡು ೨

ಅಂಡದೊಳಗೆ ಆಡುತಾನೆ – ಭಾನು –
ಮಂಡಲ ನಾರಾಯಣನೆಂಬುವನೆ ॥
ಕುಂಡಲಿ ತುದಿಯೊಳಿದ್ದಾನೆ – ಶ್ರೀ ಪು –
ರಂದರ ವಿಠಲನು ಪಾಲಿಸುತಾನೆ ೩

## ೧೪೩

ಕಣ್ಣೆತ್ತಿ ನೋಡಲುಬೇಡ – ಅವಳ
ಸಣ್ಣ ಬೈತಲೆ ಕಂಡು ಮರುಳಾಗಬೇಡ ಪ.

ಕಣ್ಣಿಟ್ಟ ಕೀಚಕ ಕೆಟ್ಟ – ಪರ
ಹೆಣ್ಣಿಗಾಗಿ ರಾವಣ ತಲೆಕೊಟ್ಟ
ಏನು ಮಾಡಿದಳಣ್ಣ ನಷ್ಟ – ಪರ
ಹೆಣ್ಣನು ಮೋಹಿಸಿದವ ಬಲು ಭ್ರಷ್ಟ ೧

ದೂರದಲ್ಲಿಯ ಸುಖವಣ್ಣ – ಅವಳ
ಚಾರು ಕಂಚುಕದೊಳಗಿನ ಕುಚವಣ್ಣ
ಸೀರೆಯ ಬಿಗಿದುಟ್ಟ ಹೆಣ್ಣ – ಅವಳ
ಓರೆನೋಟ ನೋಡಿ ಹಾರಬೇಡಣ್ಣ ೨

ಹಸಿವು ಇಲ್ಲದ ಸವಿಯೂಟ – ತನ್ನ
ವಶಕೆ ಬಾರದ ಪರಹೆಣ್ಣಿನ ಕೂಟ
ದೆಸೆದೆಸೆಗಪಕೀರ್ತಿಯಾಟ – ನಮ್ಮ
ವಸುಧೀಶ ಪುರಂದರವಿಠಲನೊಳ್ನೋಟ ೩

## ೧೪೪

ಕದವನಿಕ್ಕಿದಳಿದಕೊ ಗಯ್ಯಾಳಿ ಮೂಳಿ ಪ.

ಕದವನಿಕ್ಕಿದಳಿದಕೊ ಚಿಲಕವಲ್ಲಾಡುತಿದೆ ।
ಒದಗಿದ ಪಾಪವು ಹೊರಗೆ ಹೋದೀತೆಂದು ಅ.ಪ

ಭಾರತ – ರಾಮಾಯಣ ಪಂಚರಾತ್ರಾಗಮ ।
ಸಾರತತ್ವದ ಬಿಂದು ಕಿವಿಗೆ ಬಿದ್ದೀತೆಂದು ೧

ಹರಿಯ ಪಾದಾಂಬುಜಯುಗಳವ ನೆನೆವ ಭ – ।
ಕ್ತರ ಪಾದದ ರಜ ಒಳಗೆ ಬಿದ್ದೀತೆಂದು ೨

ಮಂಗಳಮೂರುತಿ ಪುರಂದರವಿಠಲನ ।
ತುಂಗವಿಕ್ರಮಪಾದ ಅಂಗಳ ಪೊಕ್ಕೀತೆಂದು ೩

## ೧೪೫

ಕರ್ಮಬಂಧನ ಛೇದನ – ಶ್ರೀ – ।
ರಾಮನ ನಾಮವ ನೆನೆ ಮನವೆ ಪ.

ಅರ್ಚಿಸಲರಿಯೆನು ಪೂಜಿಸಲರಿಯೆನು ।
ಮೆಚ್ಚಿಸಲರಿಯೆನೆಂದೆನಬೇಡ ॥
ಅಚ್ಯುತಾನಂತ ಗೋವಿಂದನ ನಾಮವ ।
ಇಚ್ಛೆ ಬಂದಾಗಲೆ ನೆನೆ ಮನವೆ ೧

ಸ್ನಾನವನರಿಯೆನು ಧ್ಯಾನವನರಿಯೆನು ।
ಏನನು ಅರಿಯೆನೆಂದೆನಬೇಡ ॥
ಜಾನಕಿರಮಣನ ದಶರಥನಂದನ ।
ದಾನವನಾಶನ ನೆನೆ ಮನವೆ ೨

ಮಂತ್ರವನರಿಯೆನು ತಂತ್ರವನರಿಯೆನು ।
ಎಂತು ಅರಿಯೆನೆಂದೆನಬೇಡ ॥
ಸಂತತಾನಂತ ಗೋವಿಂದನ ನಾಮವ ।
ಅಂತರಂಗದೊಳು ನೆನೆ ಮನವೆ ೩

ಜಪವ ನಾನರಿಯೆನು ತಪವ ನಾನರಿಯೆನು ।
ಉಪವಾಸವರಿಯೆನೆಂದೆನಬೇಡ ॥
ಅಪರಿಮಿತ ಗುಣಗಳ ಅನಂತಮಹಿಮನ ।
ಕೃಪೆಯ ಸಮುದ್ರನ ನೆನೆ ಮನವೆ ೪

ಕಲಿಯುಗದೊಳು ಹರಿನಾಮವ ನೆನೆದರೆ ।
ಕುಲಕೋಟಿಗಳುದ್ಧರಿಸುವುವು ॥
ಸುಲಲಿತ ಭಕ್ತಿಗೆ ಸುಲಭನೆಂದೆನಿಸುವ ।
ಜಲರುಹನಾಭನ ನೆನೆ ಮನವೆ ೫

ತಾಪತ್ರಯಗಳ ತಪ್ಪಿಸಿ ಸುಜನರ ।
ಪಾಪಗಳೆಲ್ಲವ ಪರಿಹರಿಸುವುದು ॥

ಶ್ರೀಪತಿ ಸದಮಲಧ್ಯಾನಗೋಚರನ ।
ಗೋಪೀನಾಥನ ನೆನೆ ಮನವೆ ೬

ವರದ ವೀರನಾರಾಯಣ ಸ್ವಾಮಿಯು ।
ಪರಮಪಾವನನು ಹಿತನಾಗಿ ॥
ಹರಿಯದ ಇಹಪರ ಕೊಡುವ ಸುಖಂಗಳ ।
ಪುರಂದರವಿಠಲನ ನೆನೆ ಮನವೆ ೭

## ೧೪೬

ಕಲಿಯುಗದ ಮಹಿಮೆಯನು ಕಾಣಬೇಕಿಂತು ಪ.

ಹರಿಸ್ಮರಣೆಯನು ಬಿಟ್ಟು ಹೀನರನೆ ಸ್ತುತಿಸುವರು ।
ಗುರುಹಿರಿಯರೊಳು ದೋಷವೆಣಿಸುತಿಹರು ।
ಪೊರೆದ ತಾಯ್ತಂದೆಗಳ ಮಾತ ಕೇಳದೆ ತಮ್ಮ ।
ತರುಣಿಯರ ನುಡಿಗಳನು ಲಾಲಿಸುತ್ತಿಹರು ೧

ಕಂಡುದನೆ ಹೇಳರು ಕಾಣದನೆ ಹೇಳುವರು ।
ಉಂಡಮನೆಗೆರಡನ್ನೆ ಎಣಿಸುತಿಹರು ॥
ಕೊಂಡಾಡಿ ಬೇಡಿದರೆ ಕೊಡರೊಂದು ರುವಿಯನ್ನು ।
ದಂಡಿಸುವರಿಂಗೆ ಧನಗಳನು ಕೊಡುತಿಹರು ೨

ಕಳ್ಳರೊಳು ಕಡುಸ್ನೇಹ ಸುಳ್ಳರೊಳು ಸೋಲುವರು ।
ಒಳ್ಳೆಯವರೊಡನೆ ವಂಚನೆ ಮಾಳ್ಪರು ॥
ಇಲ್ಲದ ಅನಾಥರಿಗೆ ಇದ್ದಷ್ಟು ತಾವ್ ಕೊಡರು ।
ಬಲ್ಲಿದವರಿಗೆ ಬಾಯ ಸವಿಯನುಣಿಸುವರು ೩

ಪಟ್ಟದರಸಿಯನಗಲಿ ಮೋಸದಲಿ ತಪ್ಪುವರು ।
ಕೊಟ್ಟ ಸಾಲವ ನುಂಗಿ ಕೊಡದಿಪ್ಪರು ॥
ಮುಟ್ಟ ಪರಹೆಣ್ಣಿಂಗೆ ಮೋಸದಲಿ ಕೂಡುವರು ।
ಬಿಟ್ಟು ಕುಲಸ್ವಾಮಿಯನು ಬಡದೈವಕೆರಗುವರು ೪

ಮಾಡಿದುಪಕಾರವನು ಮರೆತುಕಳೆವರು ಮತ್ತೆ ।
ಕೂಡಾಡಿ ಬೇಡುವರು ಕುಟಿಲತ್ವದಿಂದ ॥
ರೂಢಿಗೊಡೆಯನು ನಮ್ಮ ಪುರಂದರವಿಠಲನ ।
ಪಾಡಿ ಪೊಗಳುವರಿಂಗೆ ಭವಭಯಗಳಿಲ್ಲ ೫

## ೧೪೭

ಕಲ್ಲುಸಕ್ಕರೆ ಕೊಳ್ಳಿರೊ – ನೀವೆಲ್ಲರು ।
ಕಲ್ಲುಸಕ್ಕರೆ ಕೊಳ್ಳಿರೊ ಪ.

ಕಲ್ಲುಸಕ್ಕರೆ ಸವಿ ಬಲ್ಲವರೆ ಬಲ್ಲರು ।
ಫುಲ್ಲನಾಭ ಕೃಷ್ಣನ ದಿವ್ಯನಾಮವೆಂಬ ಅ.ಪ

ಎತ್ತ ಹೇರುವುದಲ್ಲ ಹೊತ್ತು ಮಾರುವುದಲ್ಲ ।
ಒತ್ತೊತ್ತಿ ಗೋಣಿಯ ತುಂಬುವುದಲ್ಲ ॥
ಎತ್ತ ಹೋದರು ಮತ್ತೆ ಸುಂಕವು ಇದಕಿಲ್ಲ ।
ಹತ್ತೆಂಟು ಸಾವಿರಕೆ ಬೆಲೆಯಿಲ್ಲದಂತಹ ೧

ನಷ್ಟಬೀಳುವುದಲ್ಲ ನಾಶವಾಗುವುದಲ್ಲ ।
ಕಟ್ಟಿ ಇಟ್ಟರೆ ಮತ್ತೆ ಕೆಡುವುದಲ್ಲ ॥
ಎಷ್ಟು ದಿನವಿಟ್ಟರೂ ಕೆಟ್ಟು ಹೋಗುವುದಲ್ಲ ।
ಪಟ್ಟಣದೊಳಗೊಂದು ಲಾಭವೆನಿಸುವಂಥ ೨

ಸಂತೆಪೇಟೆಗೆ ಹೋಗಿ ಶ್ರಮಪಡಿಸುವುದಲ್ಲ ।
ಎಂತು ಮಾರಿದರದಕಂತವಿಲ್ಲ ॥
ಸಂತತ ಪುರಂದರವಿಠಲನ ನಾಮವ ।
ಎಂತು ನೆನೆಯಲು ಪಾಪ ಪರಿಹಾರವಲ್ಲದೆ ೩

## ೧೪೮

ಕಷ್ಟವಾವುದು ಸುಖವದಾವುದಯ್ಯ ಪ.

ಹೊನ್ನುಳ್ಳವಗೆ ಬಂದ ದಾರಿದ್ರ್ಯ ಬಲು ಕಷ್ಟ
ಅನ್ಯರ ಮನೆಯ ಸೇರುವುದು ಬಹುಕಷ್ಟ
ಅನ್ಯಾಯವಿರದೆ ಅಪಕೀರ್ತಿ ಹೊರುವುದು ಕಷ್ಟ
ಗನ್ನಘಾತಕವ ಮಾಡುವುದು ಕಷ್ಟವಯ್ಯ ೧

ಉದ್ಯೋಗದಲಿ ಒಳ್ಳೆ ಲಾಭವಾದರೆ ಸುಖವು
ಬಧ್ಧನುಡಿ ನುಡಿಯುವುದು ಬಹಳ ಸುಖವು
ಗುದ್ದಾಟವಿರದಣ್ಣ – ತಮ್ಮರಿದ್ದರೆ ಸುಖವು
ಬುಧ್ಧಿವಂತನಾಗಿ ಬಾಳುವುದು ಸುಖವಯ್ಯ ೨

ಮತ್ಸರವಿರದ ಸೊಸೆಯು ಮನೆಗೆ ಬಂದರೆ ಸುಖವು
ಪುತ್ರ ತಾ ಬುಧ್ಧಿವಂತನಾದರೆ ಸುಖವು
ಹಸ್ತವನು ಎತ್ತಿ ದಾನವನು ಕೊಡುವುದು ಸುಖವು
ವಸ್ತ್ರವನು ಮಾಸದುಡುವುದು ಬಹಳ ಸುಖವಯ್ಯಾ ೩

ಭೂತಳದಿ ಸಮ್ಮತನು ಆಗಿ ಬಾಳ್ವುದು ಸುಖವು
ಭೂತೇಶನಾ ಪ್ರೀತಿ ಬಹಳ ಸುಖವು
ನೀತಿ ನಡೆಯನು ನಡೆವುದೇ ಸುಖವು ಹಿರಿಯರ
ಮಾತುಗಳ ನಡೆಸುವುದು ಬಹಳ ಸುಖವಯ್ಯ ೪

ಆಧಾರವಿಲ್ಲದಲೆ ಸಾಲ ಕೊಡುವುದು ಕಷ್ಟ
ಮಾದ ಹುಣ್ಣದು ಮತ್ತೆ ಹುಟ್ಟಿದರೆ ಕಷ್ಟ
ಹಾದಿಯನು ಬರಿಗಾಲಿನಿಂದ ನಡೆಯುವುದು ಕಷ್ಟ
ಆದಿ ಮೂರುತಿ ಪುರಂದರವಿಠಲರಾಯ ೫

## ೧೪೯

ಕಾಳಬೆಳದಿಂಗಳು – ಈ ಸಂಸಾರ –
ಕತ್ತಲೆ ಬೆಳುದಿಂಗಳು ಪ.

ಸತ್ಯಕೆ ಧರ್ಮಜ ಲೆತ್ತ ಪಗಡೆಯಾಡಿ ।
ವ್ಯರ್ಥ ಭಂಢಾರವೆಲ್ಲವನು ಸೋತು ॥
ಬತ್ತಲೆ ಪೋಗಿ ವಿರಾಟನ ಮನೆಯೊಳು ।
ತೊತ್ತಾದಳು ದ್ರೌಪದಿ ಒಂದು ವರುಷ ೧

ಉಂಬಾಗ ಉಡುವಾಗ ಕೊಂಬಾಗ ಕೊಡುವಾಗ ।
ಬೆಂಬತ್ತಿ ತಿರುಗುತಲಿಪ್ಪರು ॥
ಉಂಬಾತಗೆ ನೋಡಿ ಬಡತನ ಬಂದರೆ ।
ಇಂಬಿಲ್ಲ ಅತ್ತತ್ತ ಹೋಗೆಂಬರಯ್ಯ ೨

ಉಂಟಾದ ಕಾಲಕ್ಕೆ ನೆಂಟರಿಷ್ಟರು ಬಂದು ।
ಬಂಟರಂತೆ ಬಾಗಿಲ ಕಾಯ್ವರು ।
ಉಂಟುತನವು ಪೋಗೆ ಅಂತ್ಯಕಾಲಕೆ ಕಂಡು ।
ಹೆಂಟೆಯಾಗಿ ತಿರುಗುತಿಪ್ಪರಯ್ಯ ೩

ಪುಂಡರೀಕಾಕ್ಷ ಶ್ರೀ ಪುರುಷೋತ್ತಮ ರಥ – ।
ಕೊಂಡು ಸಾರಥಿಯಾದ ಫಲ್ಗುಣನ ॥
ಮಂಡಲವಾಳುವ ಹರಿಶ್ಚಂದ್ರರಾಯನು ॥
ಕೊಂಡು ಕಾಯ್ದ ಚಂಡಾಲನ ಮನೆಯ ೪

ನೊಂದಿತು ಕಾಯವು ಬೆಂದಿತು ಒಡಲು ।
ಬೆಂದ ಒಡಲಿಗಾಗಿ ಹಾಸ್ಯಮಾಡಿ ॥
ಪುಂಡರೀಕಾಕ್ಷ ಶ್ರೀ ಪುರಂದರವಿಠಲನ ।
ತೊಂಡನಾಗಿ ನೀ ಸುಖವಾಗಿ ಬಾಳು * ೫

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ಶ್ರೀಪಾದರಾಜರ ಅಂಕಿತದಲ್ಲಿಯೂ ದೊರೆಯುತ್ತದೆ.

## ೧೫೦

ಕೃಷ್ಣ ಮಂತ್ರವ ಜಪಿಸೊ – ಏ ಮನುಜ ।
ಕೃಷ್ಣ ಮಂತ್ರವ ಜಪಿಸೊ ಪ.

ವೈಷ್ಣವೋತ್ತಮನಾಗಿ ವಿಷ್ಣುವೆ ಗತಿಯೆಂದು ಅ.ಪ

ಜಪತಪಾನುಷ್ಠಾನ ಸ್ನಾನಕ್ಕೆ ಈ ಮಂತ್ರ ।
ಕಪಟಬುದ್ಧಿಗಳನ್ನು ಕುಟ್ಟುವ ಮಂತ್ರ ॥
ಉಪದೇಶದಲಿ ಜ್ಞಾನಕೊಟ್ಟು ಸಲಹುವ ಮಂತ್ರ ।
ಸುಪವಿತ್ರ ಮಾಡಿ ಸ್ವರ್ಗ ಸೂರೆಗೊಡುವ ಮಂತ್ರ ೧

ಸಕಲ ಸಾಧನೆಗಳಿಗೆ ಸಾರಭೂತದ ಮಂತ್ರ ।
ನಿಖಿಳ ದೇವರಿಗೆಲ್ಲ ಸಾಕ್ಷೀಭೂತದ ಮಂತ್ರ ॥
ಭಕುತಿಯಲಿ ದ್ರೌಪದಿಯು ಭಜಿಸಿದ ಈ ಮಂತ್ರ ।
ಮುಕುತಿಯ ಕೊಟ್ಟು ಜನರ ಪೋಷಿಸುವ ಮಂತ್ರ ೨

ಭಾವಿಸಲಣುರೇಣು ಪರಿಪೂರ್ಣವಾದ ಮಂತ್ರ ।
ಜೀವಗಳಿಗೆಲ್ಲ ಸಂಜೀವ ಮಂತ್ರ ॥
ಪಾವನ ಮಾಡಿ ಪಾಲಿಪುದೀ ಮಂತ್ರ ।
ದೇವ ಪುರಂದರವಿಠಲ ಮಹಾಮಂತ್ರ ೩

## ೧೫೧

ಕೆಟ್ಟು ನೆಂಟರ ಸೇರುವುದು ಬಹಳ ಕಷ್ಟ
ಹುಟ್ಟೇಳು ಜನ್ಮಕ್ಕೆ ಇದು ಬೇಡ ಹರಿಯೆ ಪ.

ಹರಿಯನಪ್ಪಲುಬಹುದು ಉರಿಯ ಮುಕ್ಕಲುಬಹುದು
ಉರುವ ಮಾರಿಗೆ ಗ್ರಾಸವಾಗಬಹುದು
ಸುರಿವ ಕೆಂಡದ ಮನೆಗೆ ಬರಿಮೈಯೊಳಿರಬಹುದು
ಧರೆಯೊಳಗೆ ದಾರಿದ್ರವಾರಿಗೂ ಬೇಡವೋ ೧

ವಿಷವ ಕುಡಿಯಲುಬಹುದು ಇರಿದುಕೊಳ್ಳಲುಬಹುದು
ಹಸಿದ ಹುಲಿಬಾಯ ತುತ್ತಾಗಬಹುದು
ಹಸೆಗೆಟ್ಟು ಹೋಗಿ ನಂಟರಲಿ ತಾ ಬಾಯನ್ನು
ಕಿಸಿಯಲಾಗದು ಕೊರಳ ಹಿಸುಕಿಕೊಳಬಹುದು ೨

ಕುಡುಗೋಲು ಪಿಡಿದು ಕೂಲಿಯಮಾಡಿ ಉಣಬಹುದು
ಒಡಲಾಸೆಗೊಬ್ಬರಾಳಾಗಬಹುದು
ಒಡೆಯ ಶ್ರೀ ಪುರಂದರವಿಠಲ ಸ್ಮರಣೆಯಲಿ
ಬಡವನಾಗಿಯೇ ಬೇಡಿ ಉಣ್ಣಬಹುದು ೩

## ೧೫೨

ಕೆಟ್ಟಿತು ಕೆಲಸವೆಲ್ಲ – ಲೋಕದಿ ಕಾಮ
ನಟ್ಟುಳಿಘನವಾಯಿತು ಪ.

ಬಟ್ಟೆ ತಪ್ಪಿ ಮುಂದೆ ಕೆಟ್ಟು ಕರ್ಮಿಯಾಗಿ
ಬಿಟ್ಟು ಮುಂದಣ ಪಥವ – ಹೇ ದೇವಾ ಅಪ

ಸತ್ಯ ಕಾಮ ಕರ್ಮವು ಧರ್ಮದ ಬಲ
ಮತ್ತೆ ಅಡಗಿಹೋಯಿತು
ಎತ್ತ ನೋಡಲು ನೀಚವೃತ್ತಿಯೆ ತುಂಬಿ
ಅತ್ಯಂತ ಪ್ರಬಲವಾಯ್ತೋ ಹೇ ದೇವಾ ೧

ಹೊತ್ತು ಹೊತ್ತಿಗೆ ಹಲವು ಲಂಪಟತನದಲಿ
ಚಿತ್ತ ಚಂಚಲವಾಯಿತು
ಸತ್ತು ಹುಟ್ಟುವ ಸುಳಿಯಲ್ಲದೆ ಮತ್ತೊಂದು
ಗೊತ್ತು ಇಲ್ಲದೆ ಹೋಯಿತ್ತೋ ಹೇ ದೇವಾ ೨

ಪೇಳುವುದೇನಿನ್ನು ದುರ್ಜನರ ಸಂಗ
ದೋಲಾಟ ಸೊಗಸಾಯಿತು
ಕೀಳು ಮೇಲು ಮೇಲು ಕೀಳಾಗಿ ನಡೆಯುವ
ಕಾಲ ವೆಗ್ಗಳವಾಯಿತೋ ಹೇ ದೇವಾ ೩

ಆಳುವ ಅರಸರಿಗೆಲ್ಲ ಕಾಂಚನದಾಸೆ
ಮೇಲು ಮೇಲಾಯಿತಯ್ಯ
ನೀಲ ಮೇಘಶ್ಯಾಮ ನಿನ್ನಾಳೆಂಬರಿಗೆ
ಕೂಳು ಹುಟ್ಟದೆ ಹೋಯಿತೋ ಹೇ ದೇವಾ ೪

ಅರಿಷಡ್ವರ್ಗದಲಿ ಸಿಲುಕಿ ಸುಜ್ಞಾನದ
ಅರಿವು ಇಲ್ಲದೆ ಹೋಯಿತು
ಕರುಣಾಳು ಶ್ರೀ ಪುರಂದರವಿಠಲನೆ ನಿನ್ನ
ಸ್ಮರಣೆಯಿಲ್ಲದೆ ಹೋಯಿತೋ ಹೇ ದೇವಾ ೫

## ೧೫೩

ಕೆಂಡಕ್ಕೆ ಗೊರಲಿ ಮುತ್ತುವುದುಂಟೆ
ಪಾಂಡುರಂಗನ ದಾಸರಿಗೆ ಭಯವುಂಟೆ ? ಪ.

ಆನೆ ಸಿಂಹನ ಕೂಡ ಅಣಕವಾಡುವುದುಂಟೆ
ಶ್ವಾನಗೆ ಹುಲಿಯೊಳು ಸರಸವುಂಟೆ ?॥
ಏನೆಂಬೆ ಎರಡಿಲ್ಲದಿರುಳು ಹಗಲು ನಿನ್ನ
ಧ್ಯಾನ ಮಾಡುವರಿಗೆ ನರಕವುಂಟೆ ಸ್ವಾಮಿ ೧

ಕತ್ತಲೆ ರವಿಯನು ಕವಿದು ಮುಚ್ಚುವುದುಂಟೆ
ಹತ್ತಿ ಸರ್ಪನ ಕಪ್ಪೆ ನುಂಗುವುದುಂಟೆ ? ॥
ಅತ್ತಿತ್ತ ಮನವನು ಹರಿಬಿಡದಲಿ ಏಕ
ಚಿತ್ತದಿ ನೆನೆವಗೆ ನರಕವುಂಟೆ ಸ್ವಾಮಿ ೨

ಆ ಮಾರುತನ ಗುದ್ದಿ ಹದ್ದು ನೋಯಿಸಲುಂಟೆ
ಹೇಮಗಿರಿಗೆ ವಜ್ರ ಸಿಡಿಯಲುಂಟೆ ?
ಸ್ವಾಮಿ ಶ್ರೀ ಪುರಂದರವಿಠಲರಾಯನೆ ನಿನ್ನ
ನಾಮಧಾರಿಗಳಿಗೆ ನರಕವುಂಟೆ ಸ್ವಾಮಿ ? ೩

## ೧೫೪

ಕೇಶವ ನಾರಾಯಣ ಮಾಧವ – ಹರಿ ।
ವಾಸುದೇವ ಎನಬಾರದೆ ? ಪ.

ಕೇಶವನ ನಾಮವನು ಏಸು ಬಾರಿ ನೆನೆದರೂ ।
ದೋಷಪರಿಹವಪ್ಪುದು – ಹೇ ಜಿಹ್ವೆ ಅಪ

ಜಲಜನಾಭನ ನಾಮವು – ಈ ಜಗ – ।
ದೊಳು ಜನಭಯಹರಣ ॥
ಸುಲಭವೇದ್ಯನೆನಲೇಕೆ ಸುಖಕೆ ಸಾಧನವಿದು ।
ಬಲಿಯೆಂಬ ಭಕ್ತನು ಬಗೆದು ರಸವನುಂಡು ಹೇ ಜಿಹ್ವೆ ೧

(ಎರಡನೇ ನುಡಿ ಸಿಕ್ಕಿಲ್ಲ)

ಹೇಮಕಶ್ಯಪ ಸಂಹಾರ – ಭಕ್ತರು ನಿನ್ನ ।
ನಾಮವ ಸವಿದುಂಬರು ॥
ವಾಮನ ವಾಮನನೆಂದು ವಂದಿಸಿದವರಿಗೆ ।
ಶ್ರೀಮದನಂತ ಪುರಂದರವಿಠಲನು
ಕಾಮಿತ ಫಲವೀವನು – ಹೇ ಜಿಹ್ವೆ ೩

## ೧೫೫

ಕೇಶವನೊಲುಮೆಯು ಆಗುವ ತನಕ
ಹರಿದಾಸರೊಳಿರು ಮನವೆ
ಕ್ಲೇಶ ಪಾಶಗಳ ಹರಿದು ವಿಳಾಸದಿ ದಾಸರ
ನುತಿಗಳ ಪೊಗಳುತ ಮನದೊಳು ಪ.

ಮೋಸದಿ ಜೀವಿಯ ಘಾಸಿ ಮಾಡಿದ ಫಲ
ಕಾಶಿಗೆ ಹೋದರೆ ಹೋದೀತೆ
ದಾಸರ ಕರೆತಂದು ಕಾಸು ಕೊಟ್ಟ ಫಲ
ಲೇಸಾಗದೆ ಸಸಿನಿದ್ದೀತೆ

ಭಾಷೆಯ ಕೊಟ್ಟು ನಿರಾಸೆಯ ಮಾಡಿದ
ಫಲ ಮೋಸವು ಮಾಡದೆ ಬಿಟ್ಟೀತೆ
ಶಶಿವದನೆಯ ಅಧರಾಮೃತ ಸೇವಿಸಿ
ಸುಧೆಯೆಂದಡೆ ನಿಜವಾದೀತೆ ೧

ಕನಕದ ಪಾತ್ರದ ಘನತೆಯ ಪ್ರಭೆಗಳು ಶುನಕನ
ಮನಸಿಗೆ ಸೊಗಸೀತೆ
ಹೀನ ಮನುಜನಿಗೆ ಜ್ಞಾನವ ಬೋಧಿಸೆ ಹೀನ
ವಿಷಯಗಳು ಹೋದಿತೇ
ಮಾನಿನಿ ಮನಸು ನಿಧಾನವು ಇಲ್ಲದಿರೆ
ಮಾನಭಿಮಾನ ಉಳಿದೀತೆ
ಭಾನುವಿಕಾಸನ ಭಜನೆಯ ಮಾಡದ ದೀನಗೆ
ಮುಕುತಿಯು ದೊರಕೀತೆ ೨

ಸತ್ಯದ ಧರ್ಮವ ನಿತ್ಯವು ಬೋಧಿಸೆ ತೊತ್ತಿನ
ಮನಸಿಗೆ ಸೊಗಸೀತೆ
ತತ್ವದ ಅರ್ಥ ವಿಚಿತ್ರದಿ ಪೇಳಲು ಕತ್ತೆಯ
ಮನಸಿಗೆ ತಿಳಿದೀತೆ

ಪುತ್ಥಳಿ ಬೊಂಬೆಯ ಚಿತ್ರದಿ ಬರೆದಿರೆ ಮುತ್ತು
ಕೊಟ್ಟರೆ ಮಾತಾಡೀತೆ
ಕತ್ತುರಿತಿಲಕವನೊತ್ತಿ ಫಣೆಯೊಳಿಡೆ ಅರ್ತಿಯು
ತೋರದೆ ಇದ್ದೀತೆ ೩

ನ್ಯಾಯವ ಬಿಟ್ಟು ಅನ್ಯಾಯ ಪೇಳುವ ನಾಯಿಗೆ
ನರಕವು ತಪ್ಪೀತೆ
ತಾಯಿ ತಂದೆಗಳ ನೋಯಿಸಿದ ಅನ್ಯಾಯಿಗೆ
ಮುಕ್ತಿಯು ದೊರಕೀತೆ
ಬಾಯಿ ಕೊಬ್ಬಿನಿಂದ ಬೈಯುವ ಮನುಜಗೆ ಘಾಯವು
ಆಗದೆ ಬಿಟ್ಟೀತೆ

ಮಾಯಾವಾದಗಳ ಕಲಿತಾ ಮನುಜಗೆ
ಕಾಯಕಷ್ಟ ಬರದಿದ್ದೀತೆ ೪

ಸಾಧು ಸಜ್ಜನರನು ಬಾಧಿಸಿದಾ ಪರವಾದಿಗೆ
ದೋಷವು ತಪ್ಪೀತೆ
ಬಾಧಿಸಿ ಬಡವರ ಅರ್ಥವ ಒಯ್ವವಗೆ ವ್ಯಾಧಿ
ರೋಗಗಳು ಬಿಟ್ಟೀತೆ
ಬದ್ಧ ಮನುಜ ಬಹು ಕ್ಷುದ್ರವ ಕಲಿತರೆ
ಬುದ್ಧಿಹೀನನೆಂಬುದು ಹೋದೀತೆ
ಕದ್ದು ಒಡಲ ತಾ ಪೊರೆವನ ಮನೆಯೊಳಗೆ
ಇದ್ದುದು ಹೋಗದೆ ಇದ್ದೀತೆ ೫

ಅಂಗದ ವಿಷಯಂಗಳನು ತೊರೆದಾತಗೆ ಅಂಗನೆಯರ
ಬಗೆ ಸೊಗಸೀತೆ
ಸಂಗ ಸುಖಂಗಳು ಹಿಂಗಿದ ಮನುಜಗೆ ಶೃಂಗಾರದ
ಬಗೆ ಸೊಗಸೀತೆ
ಇಂಗಿತವರಿಯುವ ಸಂಗ ಶರೀರ ವಜ್ರಾಂಗಿಯಾಗದೆ ಇದ್ದೀತೆ
ಮಂಗಳಮಹಿಮನ ಅಂಘ್ರಿಯ ಕಾಣದ ಭಂಗಗೆ
ಮುಕ್ತಿಯು ದೊರಕೀತೆ ೬

ಕರುಣಾಮೃತದಾಚರಣವಧರಿಸಿದ ಪರಮಗೆ ಸರಳಿ ಬಂದೀತೆ
ಕರಣ ಪಾಶದುರವಣೆ ತೊರೆವಾತಗೆ ಶರಣರ ಪದ್ಧತಿ ತಪ್ಪೀತೆ
ಆರುಶಾಸ್ತ್ರವನು ಮೀರಿದ ಯೋಗಿಗೆ ತಾರಕ ಬ್ರಹ್ಮವು ತಪ್ಪೀತೆ
ವರದ ಪುರಂದರವಿಠಲನ ಚರಣ
ಸ್ಮರಿಸುವವನಿಗೆ ಸುಖ ತಪ್ಪೀತೆ * ೭

## ೧೫೬

ಕೇಳು ಕೋಪಿಸಬೇಡ ಹೇಳಲಿಕಂಜುವೆ
ಬಾಳು ಬಡತನವ ನಾನು ಪ.

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ತಲೆಗೊಯ್ಕ ಹಿರಿಯ ಮಗ ಇಳೆಗೆ ಪೂಜಿತನಲ್ಲ
ಬಲು ಭಂಡ ನಿನ್ನಯ ಕಿರಿಯ ಮಗ ॥
ಲಲನೆಯು ಸೇರಿದಳು ಬಲು ಲೋಭಿಗಳ ಮನೆಯ
ಹೊಲಕುಲವರಿಯಳು ನಿನ್ನ ಸೊಸೆಯು ರಂಗ ೧

ಮಗಳ ಮಾರ್ಗವು ಡೊಂಕು । ಮೈದುನ ಗುರುದ್ರೋಹಿ
ಮಗನ ಮಗನು ಚಾಡಿಗಾರ
ಹಗರಣಕೆ ನೀಚರ ಹಣ್ಣುಮೆದ್ದೆಂಜಲ
ಜಗದೊಡೆಯನೆನಿಸಿಕೊಂಡೆ – ನೀನುಂಡೆ ೨

ಲಕ್ಷ್ಮೀಪತಿಯು ಎನಿಸಿ ಭಿಕ್ಷೆ ಬೇಡಲು ಪೋದೆ
ಪಕ್ಷಿಯ ಪೆಗಲೇರಿ ರಾಜನೆನಿಸಿದೆ ॥
ಸಾಕ್ಷಾತು ಪುರಂದರವಿಠಲನೆ ನಿನ್ನ ಗುಣ
ಲಕ್ಷಣ ಪೇಳಲಳವೆ – ಕಳವೆ ೩

## ೧೫೭

ಕೇಳನೊ ಹರಿ ತಾಳನೋ
ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ ಪ.

ತಂಬೂರಿ ಮೊದಲಾದ ಅಖಿಳ ವಾದ್ಯಗಳಿದ್ದು
ಕೊಂಬು ಕೊಳಲ ಧ್ವನಿಸಾರವಿದ್ದು ॥
ತುಂಬುರು ನಾರದರ ಗಾನ ಕೇಳುವ ಹರಿ
ನಂಬಲಾರ ಈ ಡಂಭಕದ ಕೂಗಾಟ ೧

ನಾನಾಬಗೆಯ ಭಾವ ರಾಗ ತಿಳಿದು ಸ್ವರ
ಜ್ಞಾನ ಮನೋಧರ್ಮ ಜಾತಿಯಿದ್ದು ॥
ದಾನವಾರಿಯ ದಿವ್ಯ ನಾಮರಹಿತವಾದ
ಹೀನ ಸಂಗೀತ ಸಾಹಿತ್ಯವ ಮನವಿತ್ತು ೨

ಅಡಿಗಡಿಗಾನಂದ ಬಾಷ್ಪ ಪುಳಕದಿಂದ
ನುಡಿನುಡಿಗೂ ಶ್ರೀಹರಿಯೆನ್ನುತ ॥

ದೃಢಭಕ್ತರನು ಕೂಡಿ ಹರಿಕೀರ್ತನೆಯ ಪಾಡಿ
ಕಡೆಗೆ ಪುರಂದರವಿಠಲನೆಂದರೆ ಕೇಳ್ವ ೩

## ೧೫೮

ಕೊಡುವ ಕರ್ತ ಬೇರೆ ಇರುತಿರೆ –
ಬಿಡುಬಿಡು ಚಿಂತೆಯನು ಪ.

ಒಡೆಯನಾಗಿ ಮೂಜಗವನು ಪಾಲಿಪ ।
ಬಡವರಾಧಾರಿಯು ಭಕ್ತರ ಪ್ರಿಯನು ಅಪ

ಕಲ್ಲಿನೊಳಗೆ ಇರುವ – ಕಪ್ಪೆಗೆ – ।
ಅಲ್ಲೆ ಉದಕಕೊಡುವ ।
ಎಲ್ಲ ಕೋಟಿ ಜೀವರಾಶಿಗಳನೆ ಕಾಯ್ವ ।
ವಲ್ಲಭ ಶ್ರೀಹರಿ ಎಲ್ಲಿಯು ಇರುತಿರೆ ೧॥

ಆನೆಗೈದುಮಣದಾ – ಆಹಾರವ ।
ತಾನೆ ತಂದು ಕೊಡುವ ।
ದೀನರೊಡೆಯ ಶ್ರೀನಿವಾಸ ದಯಾನಿಧಿ ।
ಮಾನದಿಂದಲಿ ಕಾಯ್ವ ಭಾನುಕೋಟಿ ತೇಜ ೨

ಸರಸಿಜಾಕ್ಷ ತನ್ನ – ಸೇರಿದ ।
ನರರನು ಬಿಡನಣ್ಣ ।
ಪರಮದಯಾನಿಧಿ ಭಕುತರ ಸಲಹುವ ।
ಪುರಂದರವಿಠಲನು ಪುಷ್ಪಶರನ ಪಿತ ೩

## ೧೫೯

ಕೊಬ್ಬಿನಲಿರಬೇಡವೊ – ಏ ನಮ್ಮ ಮನುಜಾ
ಕೊಬ್ಬಿನಲಿರಬೇಡವೊ ಪ.

ಸಿರಿಬಂದ ಕಾಲಕೆ ಸಿರಿಮದವೆಂಬರು
ಬಿರಿದು ಬಿರಿದು ಮೇಲಕೆ ಮಾಳ್ಪರು

ಸಿರಿಹೋದ ಮರುದಿನ ಬಡತನ ಬಂದರೆ
ಹುರುಕು – ಕಜ್ಜಿಯ ತುರಿಸಿ ತಿರುಗುವರಯ್ಯಾ ೧

ಒಡವೆ ವಸ್ತುವನಿಟ್ಟು ಬಡಿವಾರ ಮಾಳ್ಪರು
ನಡೆಯಲಾರೆನೆಂದು ಬಳುಕುವರು
ಸಿಡಿಲು ಎರಗಿದಂತೆ ಬಡತನ ಬಂದರೆ
ಕೊಡವ ಹೊತ್ತುನೀರ ತರುವರಯ್ಯ ೨

ವ್ಯಾಪಾರ ಬಂದಾಗ ವ್ಯಾಪಾರ ಮಾಳ್ಪರು
ಶಾಪಿಸಿಕೊಂಬರು ಬಡವರ ಕೈಲಿ
ಶ್ರೀಪತಿ ಪುರಂದರವಿಠಲನು ಮುನಿದರೆ
ಭೂಪಾರದೊಳಗೆಲ್ಲ ತಿರಿದು ತಿಂಬರಯ್ಯ ೩

## ೧೬೦

ಗಂಡಬಿಟ್ಟ ಗ್ಯೆಯಾಳಿ ಕಾಣಣ್ಣ – ಅವಳ
ಕಂಡರೆ ಕಡೆಗಾಗಿ ದಾರಿ ಪೋಗಣ್ಣ ಪ.

ಊರೊಳಗೆ ತಾನು ಪರದೇಶಿಯೆನ್ನುವಳು
ಸಾರುತ ತಿರುಗುವಳು ಮನೆಮನೆಯ
ಕೇರಿ – ಕೇರಿಗುಂಟ ಕೆಲೆಯುತ ತಿರುಗುವಳು
ನಾರಿಯಲ್ಲವೊ ಮಿಕ್ಕಮಾರಿಕಾಣಣ್ಣ ೧

ಅತ್ತೆ ಮಾವನ ಕೂಡ ಅತಿ ಮತ್ಸರವ ಮಾಡಿ
ನೆತ್ತಿಗೆ ಮದ್ದನೆ ಊಡುವಳು
ಸತ್ಯರ ದೇವರ ಸತ್ಯ ನಿಜವಾದರೆ
ಬತ್ತಲೆ ಅಡ್ಡಂಬಲೂಡೇನೆಂಬುವಳು ೨

ಹಲವು ಜನರೊಳು ಕಿವಿಮಾತನಾಡುವಳು
ಹಲವು ಜನರೊಳು ಕಡಿದಾಡುವಳು
ಹಲವು ಜನರೊಳು ಕೂಗಿ ಬೊಬ್ಬೆಯನಿಡುವಳು
ತಳವಾರ ಚಾವಡಿಯಲಿ ಬರಲಿ ಹೆಣ್ಣು ೩

ಪರಪುರುಷರ ಕೂಡಿ ಸರಸವಾಡುತ ಹೋಗಿ
ನೆರೆದಿದ್ದ ಸಭೆಯಲಿ ಕರೆಯುವಳು
ಮರೆಸಿ ತನ್ನವಗುಣ ಗಾಡಿಯೆಂದು ಮೆರೆವಳು
ಕರಿರೂಪದವಳ ನೀ ಕೆಣಕದಿರಣ್ಣ ೪

ಏಸು ಗೃಹಗಳೆಂದು ಎಣಿಸಿ ನೋಡಿಬಂದು
ಬೇಸರದೆ ಜನಕೆ ಹೇಳುವಳು
ಲೇಸಾಗಿ ಪುರಂದರವಿಠಲನು ಹೇಳಿದ
ಹೇಸಿತೊತ್ತನು ನೀನು ಕೆಣಕದಿರಣ್ಣ ೫

## ೧೬೧

ಗಾಳಿ ಬಂದ ಕೈಯಲಿ ತೂರಿಕೊಳ್ಳಿರೊ ।
ನಾಲಿಗೆಯಿದ್ದ ಕೈಯಲಿ ನಾರಾಯಣನೆನ್ನಿರೊ ಪ.

ಕದ್ದು ಹುಸಿಯನಾಡಿ ಅಪಾರ ।
ಬುದ್ಧಿಯಿಂದ ಕೆಡಲು ಬೇಡಿ ॥
ಬುದ್ಧಿವಂತರಾಗಿ – ಅನಿ ।
ರುದ್ಧನ ನೆನಯಿರೊ ೧

ನಿತ್ಯವಿಲ್ಲ ನೇಮವಿಲ್ಲ ।
ಮತ್ತೆ ಧಾನಧರ್ಮವಿಲ್ಲ ॥
ವ್ಯರ್ಥವಾಗಿ ಕೆಡದೆ – ಪುರು ।
ಷೋತ್ತಮನೆನ್ನಿರೊ ೨

ಭಕ್ತಿಕೊಡುವ ಮುಕ್ತಿಕೊಡುವ ।
ಮತ್ತೆ ಸಾಯುಜ್ಯ ಕೊಡುವ ॥
ಕರ್ತೃ ಪುರಂದರವಿಠಲನ ।
ನಿತ್ಯ ನೆನೆಯಿರೊ ೩

## ೧೬೨

ಗುರುವಿನ ಒಲುಮೆಯು ಆಗುವ ತನಕ ।
ದೊರೆಯದಣ್ಣ ಮುಕುತಿ ಪ.

ಪರಿಪರಿ ಶಾಸ್ತ್ರವನೇಕವನೋದಿ ।
ವ್ಯರ್ಥವಾಯಿತು ಭಕುತಿ ಅಪ

ಆರು ಶಾಸ್ತ್ರಗಳನೋದಿದರೇನು ।
ಮೂರಾರು ಪುರಾಣವ ಮುಗಿಸಿದರೇನು ॥
ಸಾರಿ ಸಜ್ಜನರ ಸಂಗವ ಮಾಡದೆ ।
ಧೀರನಾಗಿ ತಾ ಮೆರೆದರೇನು ೧

ಕೊರಳೊಳು ಮಾಲೆಯ ಧರಿಸಿದರೇನು ।
ಕರದಲಿ ಜಪಮಣಿ ಎಣಿಸಿದರೇನು ॥
ಮರುಳನಂತೆ ತಾ ಶರೀರಕೆ ಬೂದಿಯ ।
ಒರಸಿಕೊಂಡು ತಾ ತಿರುಗಿದರೇನು ೨

ನಾರಿಯರ ಸಂಗವ ಅಳಿದರೇನು।
ಶರೀರಕೆ ದುಃಖವ ಪಡಿಸಿದರೇನು।
ಮಾರನಯ್ಯ ಶ್ರೀ ಪುರಂದರವಿಠಲನ ।
ಮರೆಯದೆ ಮನದೊಳು ಬೆರೆಯುವತನಕ ೩

## ೧೬೩

ಗೋವಿಂದ ಎನ್ನಿರೊ – ಹರಿ ಗೋವಿಂದ ಎನ್ನಿರೊ ॥
ಗೋವಿಂದನ ನಾಮವ ಮರೆಯದಿರಿರೊ ಪ.

ತುಂಬಿರುವ ಪಟ್ಟಣಕೆ ಒಂಬತ್ತು ಬಾಗಿಲು ।
ಸಂಭ್ರಮದರಸುಗಳೈದು ಮಂದಿ ॥
ಡಂಭಕತನದಿಂದ ಕಾಯುವ ಜೀವವ ।
ನಂಬಿ ನೆಚ್ಚಿ ಕೆಡಬೇಡಿ ಕಾಣಿರೊ ೧

ನೆಲೆಯು ಇಲ್ಲದ ಕಾಯ ಎಲವಿನ ಹಂದರವು ।
ಬಲಿದು ಸುತ್ತಿದ ಚರ್ಮದ ಹೊದಿಕೆ ॥
ಮಲಮೂತ್ರಂಗಳು ಕೀವುಗಳು ಕ್ರಿಮಿಗಳು ।
ಚೆಲುವ ತೊಗಲನು ಮೆಚ್ಚಿ ಕೆಡಬೇಡಿರಯ್ಯ ೨

ಹರ ಬ್ರಹ್ಮ ಸುರರಿಂದೆ ವಂದಿತನಾಗಿಪ್ಪ ।
ಹರಿಯೇ ಸರ್ವೋತ್ತಮನೆಂದೆನ್ನಿರೊ ॥
ಪುರಂದವಿಠಲನ ಸ್ಮರಣೆಯ ಮಾಡಲು ।
ದುರಿತ ಭಯಂಗಳ ಪರಿಹರಿಸುವುದು ೩

## ೧೬೪

ಗೋವಿಂದ ನಮೋ ಗೋವಿಂದ ನಮೋ ಗೋವಿಂದ–ನಾರಾಯಣ ।
ಗೋವರ್ಧನ ಗಿರಿಯೆತ್ತಿದ ಗೋವಿಂದ – ನಮ್ಮ ರಕ್ಷಿಸೊ ಪ.

ಅರ್ಥವಾರಿಗೆ ಪುತ್ರರಾರಿಗೆ ಮಿತ್ರಬಾಂಧವರಾರಿಗೆ ।
ಕರ್ತು ಯಮನವರೆಳೆದು ಒಯ್ಯಲು ಅರ್ಥ
– ಪುತ್ರರು ಕಾಯ್ವರೆ ೧

ಮಂಚ ಬಾರದು ಮಡದಿ ಬಾರಳು ಕಂಚುಗನ್ನಡಿ ಬಾರದು ।
ಸಂಚಿತಾರ್ಥದ ದ್ರವ್ಯಬಾರದು ಮುಂಚೆ ಮಾಡಿರಿ ಧರ್ಮವ ೨

ಒಡವೆಯಾಸೆಗೆ ಒಡಲ ಕಿಚ್ಚಿಗೆ ಮಡದಿ ಬೆನ್ನಲ್ಲಿ ಬಾಹಳು ।
ಬಿಡದೆ ಯಮನವರೆಳೆದು ಒಯ್ಯಲು ಎಡವಿ
ಬಿದ್ದಿತು ನಾಲಗೆ ೩

ಪ್ರಾಣವಲ್ಲಭೆ ತನ್ನ ಪುರುಷನ ಕಾಣದೆಯೆ ನಿಲಲಾರಳು ।
ಪ್ರಾಣ ಹೋಗಲು ಮುಟ್ಟಲಂಜುವಳು
ಜಾಣೆ ಕರೆದರೆ ಬಾರಳು ೪

ತಂದು ಬಂದರೆ ತನ್ನ ಪುರುಷಗೆ ಬನ್ನಿ ಬಳಲಿದಿರೆಂಬಳು ।
ಒಂದು ದಿನದಲಿ ತಾರದಿದ್ದರೆ ಹಂದಿನಾಯಂತೆ ಕೆಲೆವಳು ೫

ಉಂಟುಕಾಲಕೆ ನಂಟರಿಪ್ಪರು ಬಂಟರಾಗಿಯೆ ಕಾಯ್ವರು ।
ಕಂಟಕರು ಯಮನವರು ಎಳೆವಾಗ ನಂಟರಿಪ್ಪರು ಬಾರರು ೬

ದಿಟ್ಟತನದಲಿ ಪಟ್ಟವಾಳಿದ ಮೆಟ್ಟಿ ದಿತಿಜರ ಸೀಳಿದ ।
ಮುಟ್ಟಿ ಭಜಿಸಿರೊ ಶ್ರೀ ಪುರಂದರವಿಠಲೇಶನ ಚರಣವ ೭

## ೧೬೫

ಘಾತಕರಿಗಿನ್ನೇಕೆ ಪರಮಾರ್ಥ ಶ್ರವಣ
ನೀತಿವಂತರೆ ನಿಮಗೆ ಪರನಿಂದೆ ಏಕೆ ಪ.

ಕೋತಿಗಂದಣವೇಕನಾಥನಿಗೆ ಮುನಿಸೇಕೆ
ಹೋತು ಕಾಳಗವಾಡೆ ಖ್ಯಾತಿಯೇಕೆ
ಸೋತ ಮನುಜಗೆ ಮುನ್ನ ಸೊಗಸು ವೆಗ್ಗಳವೇಕೆ
ಪ್ರೀತಿಯಿಲ್ಲದ ಮನೆಯೊಳಿರುವುದೇಕೆ ೧

ದಯವಂತನಲ್ಲದಾ ದೊರೆಯ ಸೇವೆಯು ಏಕೆ
ಭಯವು ಉಳ್ಳವಗೆ ರಣರಂಗವೇಕೆ
ನಯವಾಕ್ಯವಿಲ್ಲದ – ಪುರುಷ ನಾರಿಯರೇಕೆ
ವ್ಯಯವಾದ ಧನಕಿನ್ನು ಚಿಂತೆಯೇಕೆ ೨

ಬಲ್ಲಿದನ ಹಗೆಗೊಂಡು ತಲ್ಲಣಿಸುತಿರಲೇಕೆ
ಬಲ್ಲಧಿಕ ಜ್ಞಾನಿಗೆ ದ್ವೇಷವೇಕೆ
ಚೆಲ್ವ ಶ್ರೀ ಪುರಂದರ ವಿಠಲನ ದಯವಿರಲು
ಘಲ್ಲಿಸುವ ಯಮಗಿನ್ನು ಅಂಜಬೇಕೆ ೩

## ೧೬೬

ಚಿತ್ತಶುದ್ಧಿಯಿಲ್ಲದವನವ ಜ್ಞಾನಿಯೆ – ಪುಣ್ಯ
ಪಾತಕಗಳನರಿಯದವ ಮನುಜನೆ ಕೃಷ್ಣ ಪ.

ಮಾರಿ ಮನೆಯೊಳಗಿರಲು ಸಹಕಾರಿಯೆನಬಹುದೆ
ಊರೊಳಗಿನಾ ಕಳ್ಳ ಅವ ಸುಜನನೆ

ಜಾರತನವೆಸಗುವಳು ಕುಲವನಿತೆಯಹುದೆ – ಸಂ
ಸಾರದೆಚ್ಚವಿಲ್ಲದವ ಸುಗಣನೆ ೧

ಶ್ವಾನ ಬೂದಿಯಲಿರಲು ಶಿವಭಕ್ತನನೆಬಹುದೆ
ಕಾನನದೊಳಿಹ ಕಾಗೆ ವನವಾಸಿಯೇ
ಗಾಣ ತಿರುಗುವ ಎತ್ತಿಗದು ಪ್ರದಕ್ಷಣೆಯೆ ಬಕ
ಧ್ಯಾನವನು ಮಾಡಲದು ಮೌನವೇ ಕೃಷ್ಣಾ ೨

ತೋಳ ಅಡವಿಯಲಿರಲು ಅದು ದಿಗಂಬರನಹುದೆ
ಗಾಳಿಯುಂಬುವ ಉರಗ ಉಪವಾಸಿಯೇ
ಆಲವದು ಜಡೆಬಿಡಲು ಪರಮ ಋಷಿಯಹುದೆ – ಬಲು
ಕಾಲ ಉಳಿದ ಹದ್ದು ತಾ ಹಿರಿಯದೆ ೩

ಬಂಧನದೊಳಿಹ ವ್ಯಾಘ್ರವನು ತಪಸಿಯೆನಬಹುದೆ
ಸಿಂಧುಜವು ಎನೆ ವಿಷಯ, ಶೀತಕರನೆ
ಅಂಧಕನು ಕಣ್ಮುಚ್ಚಲದು ಧ್ಯಾನವೇ, ಗಜವು
ಮಂದಗತಿಯಾದರದು ಸ್ಮರಣೆಯೆ ಕೃಷ್ಣಾ ೪

ಮಂಡೂಕ ಗಂಟಲನು ಮಾಡಲದು ಮಂತ್ರವೆ
ಗುಂಡು ನೀರಲಿ ಮುಳುಗಲದು ಸ್ನಾನವೇ
ಪುಂಡರೀಕಾಕ್ಷ ಶ್ರೀ ಪುರಂದರವಿಠಲನ
ತೊಂಡನಾಗದ ನರನ ಬಾಳು ಬಾಳುವೆಯೆ ೫

## ೧೬೭

ಚಿಂತೆ ಏತಕೊ – ಬಯಲ ಭ್ರಾಂತಿ ಏತಕೊ ।
ಕಂತುಪಿತನ ದಿವ್ಯನಾಮ ಮಂತ್ರವಿರಲು ಜಪಿಸದೆ ಪ.

ಏಳುತುದಯ ಕಾಲದಲ್ಲಿ ।
ವೇಳೆಯರಿತು ಕೂಗುವಂಥ ॥
ಕೋಳಿ ತನ್ನ ಮರಿಗೆ ಮೊಲೆಯ ।
ಹಾಲಕೊಟ್ಟು ಸಲಹಿತೆ ? ೧

ಸಡಗರದಲಿ ನಾರಿಜನರು ।
ಹಡೆಯುವಾಗ ಸೂಲಗಿತ್ತಿ ॥
ಅಡವಿಯೊಳಗೆ ಹೆರುವ ಮೃಗವ ।
ಪಿಡಿದು ರಕ್ಷಣೆ ಮಾಳ್ಪರಾರು ೨

ಹೆತ್ತ ತಾಯಿ ಸತ್ತ ಶಿಶುವು ।
ಮತ್ತೆ ಕೆಟ್ಟಿತೆಂಬರು ಜನರು ॥
ಹುತ್ತಿನ ಹಾವಿಗೆ ಗುಬ್ಬಿಗೆ ಮೊಲೆಯ – ।
ನಿತ್ತು ರಕ್ಷಣೆ ಮಾಡುವರಾರು ೩

ಗಟ್ಟಿಮಣ್ಣಿನ ಶಿಶುವ ಮಾಡಿ ।
ಹೊಟ್ಟೆಯೊಳಗೆ ಇರಿಸುವಂಥ ॥
ಕೊಟ್ಟ ದೈವ ಕೊಂಡೊಯ್ದರೆ ।
ಕುಟ್ಟಿಕೊಂಡು ಅಳುವುದೇಕೆ ೪

ನಂಬಿಗೆಗಿವು ಸಾಲವೆಂದು ।
ಹಂಬಲಿಪುದು ಲೋಕವೆಲ್ಲ ॥
ನಂಬಿ ಪುರಂದರವಿಠಲ – ।
ನೆಂಬ ನಾಮ ನುಡಿದ ಮೇಲೆ ೫

## ೧೬೮

ಛೀ ಛೀ ಛೀ ಛೀ ಕಂಡೆಯ ಮನವೇ ಇಂಥ
ನೀಚ ವೃತ್ತಿಗಳನು ಬಿಡು ಕಂಡೆಯ ಮನವೆ ಪ.

ಕಿವಿಗೊಟ್ಟು ಮಧುರನಾದಕೆ ಹುಲ್ಲೆಯು
ರವದ ಬಲೆಗೆ ಸಿಕ್ಕಿಬಿದ್ದುದನರಿಯ
ನವಮೋಹನಾಂಗಿಯರ ಕೋಕಿಲಾಪದ
ಸವಿ ಕೇಳದಾತನ ಕಥೆ ಕೇಳು ಮನವೇ ೧

ನಲಿದೆದ್ದು ಕರಿ ಎಳೆಯ ತೃಣ ಸ್ಪರುಷನಕಾಗಿ
ಕುಳಿಗೆ ಬಿದ್ದಿರುವುದ ಕಂಡು ಕಂಡರಿಯ

ನಳಿನಾಕ್ಷಿಯರಂಗಸಂಗವ ಮೆಟ್ಟಿ ಕೆಡದೆ ಶ್ರೀ
ಲಲನೇಶನಂಘ್ರಿಯಾನಪ್ಪಿಕೋ ಮನವೇ ೨

ಗಾಣದ ತುದಿಯ ಮಾಂಸವ ಮೆಲುವ ಮತ್ಸ್ಯವು
ಪ್ರಾಣವ ಬಿಡುವುದ ಕಂಡುಕಂಡರಿಯ
ಮಾನಿನಿಯ ಬಯಸದೆ ಶ್ರೀ ನಾರಾಯಣನ
ಧ್ಯಾನಾಮೃತವನು ಸವಿದುಣ್ಣೋ ಮನವೆ ೩

ಪಣ್ಣೆಂದು ಭ್ರಮಿಸಿ ಪತಂಗ ದೀಪದಿ ಬಿದ್ದು
ಕಣ್ಣುಗೆಡುವುದನು ಕಂಡು ಕಂಡರಿಯ
ಬಣ್ಣದಬಲೆಯರ ರೂಪಕೆ ಮರುಳಾಗಿ
ಮಣ್ಣು ತಿನ್ನದೆ ಮಾರನಯ್ಯನ ನೆನೆ ಮನವೆ ೪

ಅಳಿ ಪರಿಮಳಕಾಗಿ ಕಮಲದೊಳಗೆ ಸಿಲುಕಿ
ಅಳಿದು ಹೋಹುದನು ಕಂಡ ಕಂಡರಿಯ
ಬಳಲದೆ ವರಪುರಂದರ ವಿಠಲನಂಘ್ರಿಯ
ತುಳಸಿ ನಿರ್ಮಾಲ್ಯವಾಘ್ರಾಣಿಸು ಮನವೆ ೫

## ೧೬೯

ಜಾಲಿಯ ಮರದಂತೆ – ದುರ್ಜನರೆಲ್ಲ
ಜಾಲಿಯ ಮರದಂತೆ ಪ.

ಬಿಸಿಲಲಿ ಬಳಲಿ ಬಂದವರಿಗೆ ನೆರಳಿಲ್ಲ
ಹಸಿದು ಬಂದವರಿಗೆ ಹಣ್ಣಿಲ್ಲವೊ
ಕುಸುಮವಾಸನೆಯಿಲ್ಲ ಕುಳ್ಳಿರಲು ಸ್ಥಳವಿಲ್ಲ
ವಿಷಮರ ದುಸ್ಸಂಗ ಪಡೆದರೇನುಂಟು ೧

ಊರ ಹಂದಿಗೆ ಅಲಂಕಾರವ ಮಾಡಲು
ನಾರುವ ದುರ್ಗಂಧ ಬಿಡಬಲ್ಲುದೆ
ಸಾರ ತತ್ವಜ್ಞಾನ ಪಾಪಿಗೆ ಹೇಳಲು
ಕ್ರೂರಬುದ್ಧಿಯ ಬಿಟ್ಟು ಸಜ್ಜನನಪ್ಪನೆ ? ೨

ತನ್ನಿಂದ ಉಪಕಾರ ತೊಟಕಾದರೂ ಇಲ್ಲ
ಬಿನ್ನಣ ಮಾತುಗಳು ಮೊದಲೆ ಇಲ್ಲ
ಪನ್ನಗಶಯನ ಪುರಂದರವಿಠಲನಲ್ಲದೆ
ಅನ್ಯದೈವಂಗಳ ಭಜಿಸದೆ ನರರು ೩

## ೧೭೦

ಡಂಗುರವ ಸಾರಿ ಹರಿಯ ಡಿಂಗರಿಗರೆಲ್ಲರು ಭೂ –
ರಂಗದೊಳಗೆಲ್ಲ ಪಾಂಡುರಂಗ ಪರದೈವವೆಂದು ಪ.

ಹರಿಯು ಮುಡಿದ ಹೂವ ಹರಿವಾಣದೊಳಗಿಟ್ಟುಕೊಂಡು
ಹರುಷದಿಂದ ಹಾಡಿ ಪಾಡಿ ಕುಣಿದು ಚಪ್ಪಳಿಕ್ಕುತ ೧

ಒಡಲ ಜಾಗಟೆಯ ಮಾಡಿ ಮಿಡಿವ ಗುಣಿ ನಾಲಗೆಯ ಮಾಡಿ
ಒಡನೆ ಢಣ ಢಣ ಢಣ ಢಣ ಎಂದು ಕುಣಿದು ಚಪ್ಪಳಿಕ್ಕುತ ೨

ಇಂತು ಸಕಲ ಜಗಕೆ ಲಕ್ಷ್ಮೀಕಾಂತನೆ ಪರದೈವವೆಂದು
ಕಂತುಪಿತ ಪುರಂದರವಿಠಲ ಪರದೈವವೆಂದು ೩

## ೧೭೧

ಡಂಬಕ ಭಕುತಿಗೆ ಮೆಚ್ಚಿಕೊಳ್ಳನೊ ಕೃಷ್ಣ – ಹಾರಿ ।
ಡೊಂಬಲಾಗ ಹಾಕಿ ಹೊರಳಿದರಿಲ್ಲ ಪ.

ವಟವಟನೆ ಕಪಿಯಂತೆ ಒದರಿಕೊಂಡರೆ ಇಲ್ಲ ।
ಬೆಟ್ಟದಿಂದಲಿ ಕೆಳಗೆ ಬಿದ್ದರಿಲ್ಲ ॥
ಬಿಚ್ಚಿಟ್ಟರೆ ಇಲ್ಲ ನಿರ್ಭಾಗ್ಯರ್ಗೆಂದೆಂದು ।
ಅಚ್ಯುತಾನಂತನ ದಯವಿಲ್ಲದೆ ೧

ಕೆಟ್ಟೆನೆಂದರೂ ಇಲ್ಲ ಕ್ಲೇಶಪಟ್ಟರೂ ಇಲ್ಲ ।
ಸುಟ್ಟ ಸಂಸಾರದೊಳು ಸುಖವು ಇಲ್ಲ ॥

ಕೋಟಲೆಗಂಜಿದರಿಲ್ಲ ಕೊಸರಿಕೊಂಡರು ಇಲ್ಲ ।
ವಿಠಲನ ದೂರಿದರಿಲ್ಲ ವಿಧಿಯ ಬೈದರಿಲ್ಲ ೨

ಕನ್ನಹೊಕ್ಕರು ಇಲ್ಲ ಕಡಿದಾಡಿದರು ಇಲ್ಲ ।
ಕುನ್ನಿಯಂತೆ ಮನೆಮನೆಯ ಕೂಗಿದರಿಲ್ಲ ॥
ಹೊನ್ನಿನಾಸೆಗೆ ಹೋಗಿ ಹೊಡೆದುಕೊಂಡರು ಇಲ್ಲ ।
ಪನ್ನಗಾದ್ರಿ ಪುರಂದರವಿಠಲನ ದಯವಿರದೆ ೩

## ೧೭೨

ಡೊಂಕುಬಾಲದ ನಾಯಕರೆ
ನೀವೇನೂಟವ ಮಾಡಿದಿರಿ ॥ ಪ.

ಕಣಕ ಕುಟ್ಟುವಲ್ಲಿಗೆ ಹೋಗಿ ।
ಹಣಿಕಿ ಹಣಿಕಿ ನೋಡುವಿರಿ ॥
ಕಣಕ ಕುಟ್ಟೋ ಒನಕಿಲಿಬಡಿದರೆ ।
ಕುಂಯ್ ಕುಂಯ್ ರಾಗವ ಮಾಡುವಿರಿ ೧

ಹುಗ್ಗಿ ಮಾಡುವಲ್ಲಿಗೆ ಹೋಗಿ ।
ತಗ್ಗಿ ಬಗ್ಗಿ ನೋಡುವಿರಿ ॥
ಹುಗ್ಗಿ ಮಾಡುವ ಸವಟಿಲಿ ಬಡಿದರೆ ।
ಕುಂಯ್ ಕುಂಯ್ ರಾಗವ ಮಾಡುವಿರಿ ೨

ಹಿರಿಯ ಬೀದಿಯಲಿ ಓಡುವಿರಿ ।
ಕರಿಯ ಬೂದಿಯಲಿ ಹೊರಳುವಿರಿ ॥
ಪುರಂದರವಿಠಲರಾಯನ ಈ ಪರಿ
ಮರೆತು ಸದಾ ನೀವು ತಿರುಗುವಿರಿ * ೩

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

## ೧೭೩

ತನಗಲ್ಲದಾ ವಸ್ತು ಎಲ್ಲಿದ್ದರೇನು
ಮನಕೆ ಬಾರದ ಹೆಣ್ಣು ಮತ್ತೆ ಬಂದರೆ ಏನು ಪ.

ಆದರಣೆಯಿಲ್ಲದೂಟ ಅಮೃತಾನ್ನವಾದರೇನು
ವಾದಿಸುವ ಸತಿ – ಸುತರಿದ್ದು ಫಲವೇನು
ಕ್ರೋಧ ಬಳೆಸುವ ಸಹೋದರರು ಇದ್ದರೇನು
ಮಾದಿಗರ ಮನೆಯೊಳು ಮದುವೆಯಾದರೇನು ೧

ನಾಲಿಗಿಲ್ಲದ ಪದವು ಸಂಚಿತುಂಬ ಇದ್ದರೇನು
ದೇವಾಂಕಿತವಿಲ್ಲದ ಕವಿತ್ವವೇನು
ಹೇವವಿಲ್ಲದ ಹೆಣ್ಣು ಹೆಚ್ಚು ಬಾಳಿದರೇನು
ಹಾವಿನ ಫಣಿಯೊಳಗೆ ಹಣವಿದ್ದರೇನು ೨

ಸನ್ಮಾನವಿಲ್ಲದೆ ದೊರೆ ಸಾವಿರಾರು ಕೊಟ್ಟರೆ ಏನು
ತನ್ನ ತಾನರಿಯದ ಜ್ಞಾನವೇನು
ಎನ್ನುತ ಪುರಂದರವಿಠಲನ ನೆನೆಯದವ
ಸಂನ್ಯಾಸಿಯಾದರೇನು ಪಂಡಿತನಾದರೇನು ೩

## ೧೭೪

ತನುವ ನಂಬಲುಬೇಡ ಜೀವವೆ ಪ.

ಅನುವಾಗಿ ನಿನ್ನಂಗಕೆ ಕೆಲಕಾಲ ತೋರುವುದು ।
ಅನುವಿಲ್ಲದಾಗ ಈ ತನುವೆ ನಿನಗೆ ವೈರಿ ಅ.ಪ

ಜರೆಮರಣಗಳಿಂದ ಭರಿತವಾದುದು ಕಾಯ ।
ಸ್ಥಿರವೆಂದು ನಂಬಿ ನೀ ಮರುಳಾಗಬೇಡ ೧

ಧನ – ಧಾನ್ಯ ಪಶು – ಪತ್ನಿ ಸ್ಥಿರವೆಂದು ತಿಳಿದು ।
ಮನುಮಥನಯ್ಯನ ಮರೆಯದೆ ಮನವೆ ೨

ಶರಣೆಂದರೆ ಕಾವ ಗರುಡಕೇತನ ನಮ್ಮ ।
ಪುರಂದರವಿಠಲನ ಮರೆಯದೆ ಮನವೆ ೩

## ೧೭೫

ತನುವ ನೀರೊಳಗದ್ದಿ ಫಲವೇನು
ಮನದಲ್ಲಿ ದೃಢಭಕುತಿ ಇಲ್ಲದ ಮನುಜನು ಪ.

ಧಾನ - ಧರ್ಮಗಳನು ಮಾಡುವುದೇ ಸ್ನಾನ
ಜ್ಞಾನ - ತತ್ತ್ವಂಗಳ ತಿಳಿಯುವುದೇ ಸ್ನಾನ
ಹೀನಪಾಪಂಗಳ ಬಿಡುವುದೆ ಸ್ನಾನ
ಧ್ಯಾನದಿ ಮಾಧವನ ನಂಬುವುದೆ ಸ್ನಾನ ೧

ಗುರುಗಳ ಶ್ರೀಪಾದತೀರ್ಥವೆ ಸ್ನಾನ
ಹಿರಿಯರ ದರುಶನ ಮಾಡುವುದೆ ಸ್ನಾನ
ಕರೆದು ಅನ್ನವನು ಇಕ್ಕುವುದೊಂದು ಸ್ನಾನ
ಸಿರಿಹರಿಚರಣ ನಂಬುವುದೊಂದು ಸ್ನಾನ ೨

ದುಷ್ಟರ ಸಂಗವ ಬಿಡುವುದೊಂದು ಸ್ನಾನ
ಕಷ್ಟಪಾಪಂಗಳನು ಹರಿವುದೆ ಸ್ನಾನ
ಸೃಷ್ಟಿಯೊಳಗೆ ಸಿರಿಪುರಂದರವಿಠಲನ
ಮುಟ್ಟಿಭಜಿಸಿ ಪುಣ್ಯ ಪಡೆವುದೇ ಸ್ನಾನ ೩

## ೧೭೬

ತಾಳಿಯ ಹರಿದು ಬಿಸಾಡೆ ನೀ
ಹೇಳಿದವರ ಮಾತ ಕೇಳೇ ಗೈಯ್ಯಾಳಿ ಪ.

ಎಲ್ಲಮ್ಮ ಎಕಲಾತಿ ಉರಿಮಾರಿ ಉಡಚಮ್ಮ
ಖುಲ್ಲ ಮಹಿಷಾಸುರ ದೈವವೆಂದೆ
ಎಲ್ಲ ದೈವಗಳು ನಾಯಾಗಿ ಹರಿವಾಗ
ಕಳ್ಳದೇವರ ನೆಚ್ಚಿ ಕೆಡಬೇಡ ಮೂಳಿ ೧

ಕೊರಳೊಳು ಕವಡಿಯ ಶಿರದಲಿ ಹಡಲಿಗೆ
ಕರದಲಿ ದೀವಟಿಗೆ ಉರಿಸುತಲಿ
ಉರಿವ ಪಂಜನೆ ಪಿಡಿದು ಉಧೋ ಉಧೋ ಎನುತಲಿ
ತಿರುಗಿದೆ ಕೇರಿಗುಂಟ ಮೂಳಿ ೨

ಸಿಡಿಯ ಮುಳ್ಳನೆ ತಂದು ನಡುಬೆನ್ನಲೂರಿಕೊಂಡು
ಒಡೆಯ ಮಲ್ಲಣನೆಂದು ಜೋಲಾಡು
ಕಡುಹರಿ ಯಮದೂತರು ಬಂದು ಎಳೆವಾಗ
ಒಡೆಯ ಮೆಲ್ಲುಣ್ಣೆತ್ತು ಹೋದನೆ ಮೂಳಿ ೩

ಗುಂಡಿಗೆ ಎಣ್ಣೆಯ ಎಡಗೈಯಲಿಟ್ಟು ಕೊಂಡು
ಗುಂಡಿಗೆ ತುಪ್ಪವ ಮುಂದಿಟ್ಟು ಕೊಂಡು
ಮಿಂಡೆ ಮೈಲಾರಿಯ ಖಂಡೆರಾಯನೆಂದು
ಕೆಂಡದ ಮೇಲೆ ರೊಟ್ಟಿಯ ಸುಟ್ಟು ಮೂಳಿ ೪

ಹೊನ್ನುನಾಗರ ಮಾಡಿ ಬಣ್ಣಿಸಿ ಕಿವಿಗಿಟ್ಟು
ನನ್ನಯ್ಯ ನಾಗಪ್ಪ ಸಲುಹೆನ್ನುತ
ಚಿನ್ನನಾಗರ ಬಂದು ಓಡಾಡಿ ಕಡಿವಾಗ
ಹೊನ್ನನಾಗರ ಎತ್ತ ಹೋದನೆ ಮೂಳಿ ೫

## ೧೭೭

ತಾಸು ಬಾರಿಸುತಿದೆ ಕೇಳಿ – ಹರಿದಾಸರೆಲ್ಲ ।
ತಾಸು ಬಾರಿಸುತಿದೆ ಕೇಳಿ ಪ.

ಹಾಸುಮಂಚ ಸುಪ್ಪತ್ತಿಗೆಯಲಿ – ಹಗಲು ಇರುಳು ।
ಹೇಸರಗತ್ತೆಯಂತೆ ಹೊರಳಿ – ಸ್ತ್ರೀಯರಗೂಡ ।
ಬೇಸರದೆ ನಿತ್ಯವು ಉರುಳಿ ॥
ಈ ಪರಿ ಕಾಲವ ಕಳೆದೆಯೊ ಕಾಲ ಸ ।
ಮೀಪವಾಯಿತು ಎಂದೀಗಲೆ ೧

ವೃದ್ಧ ಯೌವನ ಬಾಲಕಾಲ – ವಿವೇಕವಿಲ್ಲದ ।
ಬುದ್ಧಿಮಾಂದ್ಯವು ಹಲವು ಕಾಲ – ಆಹಾರಸಂಗ ।
ನಿದ್ರೆಯಿಂದಲಿ ಅತಿಲೋಲ ॥
ಈಶನ ಭಜಕರ ಭಜಿಸದೆ ಮಾನುಷಾ ।
ಯುಷ್ಯವೆಲ್ಲವು ವ್ಯರ್ಥವಾಯಿತಾಯಿತೆಂದು ೨

ಕಂಡ ವಿಷಯವ ಕಾಮಿಸಿ – ಕಷ್ಟಪಡದೆ ।
ತಾಂಡವ ಕೃಷ್ಣನ ಭಜಿಸಿ – ಪುಂಡನೆನಿಸದೆ
ಭಂಡಧಾವತಿಯನು ತ್ಯಜಿಸಿ ॥
ಪುಂಡರೀಕಾಕ್ಷ ಪುರಂದರವಿಠಲನ ।
ಕೊಂಡು ಭಜಿಸಿರ್ರೈಯ ಢಂ ಢಂ ಢಂ ಡಣ್ಣೆಂದು೩

## ೧೭೮

ತುದಿನಾಲಿಗೆ ಬೆಲ್ಲ ಎದೆಗತ್ತರಿಯವರ ಸಂಗಬೇಡ
ಹೃದಯದಾಕ್ಷಿಣ್ಯವನರಿಯದ ಮನುಜರ ಪ್ರಸಂಗಬೇಡ ಪ.

ಮುಂದೆ ಭಲಾ ಎಂದು ಹಿಂದಾಡಿಕೊಂಬರ ಸಂಗಬೇಡ
ಕುಂದು – ನಿಂದೆಗಳ ಪ್ರಯೋಗ ಮಾಡುವರ
ಪ್ರಸಂಗ ಬೇಡ ೧

ಆಡಿ ಅಳುಕದ ಅಜ್ಞಾನಿ ಮನುಜರ ಸಂಗಬೇಡ
ಕೂಡಿ ಕುಮಂತ್ರವ ಎಣಿಸುವ ನರರ ಪ್ರಸಂಗ ಬೇಡ ೨

ವಿನಯ – ವಿವೇಕವಿಲ್ಲದ ವಿದ್ವಾಂಸರ ಸಂಗಬೇಡ
ತನಗಲ್ಲದ ಬಂಟ – ನಂಟ – ಮಿತ್ರಂಗಳ ಸಂಗಬೇಡ ೩

ತಮ್ಮ ಕಾರ್ಯಕ್ಕಾಗಿ ಪರರ ಕೆಡಿಸುವರ ಸಂಗ ಬೇಡ
ನಮ್ಮ ಪುರಂದರವಿಠಲನಿರಲನ್ಯ ಪ್ರಸಂಗ ಬೇಡ ೪

## ೧೭೯

ದಾಸನೆಂತಾಗುವೆನು ಧರೆಯೊಳಗೆ ನಾನು ।
ವಾಸುದೇವನಲಿ ಲೇಸು ಭಕುತಿಯ ಕಾಣೆ ಪ.

ಗೂಟನಾಮವ ಹೊಡೆದು ಗುಂಡು ತಂಬಿಗೆ ಹಿಡಿದು ।
ಗೋಟಂಚುಧೋತರ ಮಡಿಯನುಟ್ಟು ॥
ದಾಟುಗಾಲಿಡುತ ನಾ ಧರೆಯೊಳಗೆ ಬರಲೆನ್ನ ।
ಬೂಟಕತನ ನೋಡಿ ಭ್ರಮಿಸದಿರಿ ಜನರೆ ೧

ಅರ್ಥದಲ್ಲಿಯೆ ಮನಸು ಆಸಕ್ತವಾಗಿದ್ದು ।
ವ್ಯರ್ಥವಾಯಿತು ಜನ್ಮ ವಸುಧೆಯೊಳು ॥
ಅರ್ತಿಯಿಂದಲಿ ಹರಿಯ ಅರ್ಚಿಸಿದ್ದಿಲ್ಲ ನಾ ।
ಸತ್ಯ – ಶೌಚಗಳರಿಯೆ ಸಜ್ಜನರು ಕೇಳಿ ೨

ಇಂದಿರೇಶನ ಪೂಜೆ ಒಂದು ಮಾಡಿದ್ದಿಲ್ಲ ।
ಸಂಧ್ಯಾನ – ಜಪ – ತಪವೊಂದನರಿಯೆ ॥
ಒಂದು ಸಾಧನ ಕಾಣೆ ಪುರಂದರವಿಠಲನ ।
ದ್ವಂದ್ವಪಾದವ ನಂಬಿ ಅರಿತು ಭಜಿಸಿದರೆ ೩

## ೧೮೦

ದಾಸರ ನಿಂದಿಸಬೇಡಲೊ ಪ್ರಾಣಿ – ಹರಿ
ದಾಸರ ನಿಂದಿಸಬೇಡ ಪ.

ಮೋಸವಾಯಿತೊ ಮನದೊಳು ಗಾಢ ।
ಲೇಸಾಗಿ ಇದ ತಿಳಕೊ ಮೂಢ ಅ.ಪ

ರಾಮನ ನಿಂದಿಸಿ ರಾವಣ ಕೆಟ್ಟ ।
ತಮ್ಮಗಾಯಿತು ಸ್ಥಿರಪಟ್ಟ ॥
ತಾಮಸದಿಂದಲಿ ಕೌರವ ಕೆಟ್ಟ ।
ಧರ್ಮಗೆ ರಾಜ್ಯವ ಬಿಟ್ಟ ೧

ಮನದೊಳಗಿನ ವಿಷಯದ ವಿಷ ಬಿಟ್ಟು ।
ಅನುದಿನ ಹರಿಯ ನೆನೆಯಿರಣ್ಣ ॥
ಸನಕಾದಿವಂದ್ಯನ ಪೂಜಿಸಿದರೆ ನೀವ್ ।
ಘನ ಪದವಿಯ ಕಾಣುವಿರಣ್ಣ ೨

ಕನಕದಾಸನು ಕಬ್ಬಲಿಗನು ಎಂದು ।
ಅಣಕಿಸಿ ನುಡಿಬೇಡಿರಣ್ಣ ।
ಜನರಂತೆ ನರನಲ್ಲ ತುಂಬುರನೀತನು ।
ಜನಕಜೆರಮಣನ ಪಾದಸೇವಕನು ૩

ಉಡಿಯ ಒಳಗೆ ಕಿಡಿ ಬಿದ್ದರೆ ಅದು ತಾ ।
ಸುಡದನಕಾ ಬಿಡದಣ್ಣ ॥
ಬಡವನಾಗಿ ಕೆಡುಬುದ್ಧಿಯ ಬಿಟ್ಟು ।
ನಡೆಯ ಕಂಡು ಪಡೆದುಕೊಳ್ಳಣ್ಣ ೪

ದೇವಕಿ ಸೆರೆಯನು ಬಿಡಿಸಿದ ದೇವನ ।
ಸೇವಕರು ನರರೆ ನಿಮಗವರು ॥
ಭಾವಜನಯ್ಯನ ಪದವ ನೆನೆದರೆ ।
ಪಾವನ ಮಾಡುವ ಪುರಂದರವಿಠಲ ೫

## ೧೮೧

ದುರಿತವೆತ್ತಣದೊ ದುರ್ಗತಿಯು ಎಲ್ಲಿಹುದೊ
ಹರಿನಾಮ ಸ್ಮರಣೆಯೆಚ್ಚರದಲ್ಲಿದ್ದವರಿಗೆ ಪ.

ಸ್ನಾನವೇತಕೆ ಸಂಧ್ಯಾ ಜಪತಪವೇತಕೆ
ಮೌನವೇತಕೆ ಮಾಸವ್ರತವೇತಕೆ ॥
ಮಾನಸದಲಿ ವಿಷ್ಣುಧ್ಯಾನವ ಮಾಡುವ
ಜ್ಞಾನವಂತರ ಸಂಗಸುಖದೊಳಿಪ್ಪವರಿಗೆ ೧

ಯಾತ್ರೆಯೇತಕೆ ಕ್ಷೇತ್ರಗಳ ನೋಡಲೇತಕೆ
ಗೋತ್ರಧರ್ಮದ ಪುಣ್ಯ ಫಲವೇತಕೆ ॥

ಸೂತ್ರದಿ ಜಗವ ಮೋಹಿಸುವ ಮುರಾರಿಯ
ಸ್ತೋತ್ರ ಮಾಡಿ ಪೊಗಳುವ ಭಾಗವತರಿಗೆ ೨

ಅಂಗದಂಡನೆ ಏಕೆ ಆತ್ಮಗಾಸಿಯು ಏಕೆ
ತಿಂಗಳ ಚಾಂದ್ರಾಯಣವೇತಕೆ ॥
ಮಂಗಳಮಹಿಮ ಶ್ರೀ ಪುರಂದರವಿಠಲನ
ಹಿಂಗದರ್ಚನೆ ಮಾಡುವ ಭಕ್ತಜನರಿಗೆ ೩

## ೧೮೨

ದೇಹವೇಕೆ ನಮಗೆ ದೇಹ – ದೇಹ ಸಂಬಂಧಗಳೇಕೆ ।
ಆಹುದೇನೊ ಹೋಹುದೇನೊ ಇದರಿಂದ ಹರಿಯೆ ಪ.

ಮೆಚ್ಚಿ ಕಟ್ಟಿದ ಚೆಲುವ ಮಾಳಿಗೆಮನೆ ಏಕೆ ।
ಮುಚ್ಚಿ ಹೂಳಿದ ಹೊನ್ನು ಹಣವೇತಕೆ ।
ಪಚ್ಚೆ ಮಾಣಿಕ ವಜ್ರ ವೈಡೂರ್ಯವೇತಕೆ ।
ಅಚ್ಯುತನ ದಾಸರಲಿ ಭಕ್ತಿ ಇಲ್ಲದ ಬಳಿಕ ೧

ಹೆಂಡಿರು ಮಕ್ಕಳು ಏಕೆ – ಹಣ ಹೊನ್ನು ಎನಲೇಕೆ ।
ಕಂಡ ವೇದ ಶಾಸ್ತ್ರಗಳನೋದಲೇಕೆ – ಭೂ ॥
ಮಂಡಲಾಧಿಪತ್ಯವೇಕೆ – ಮೇಲೆ ಸೌಂದರ್ಯವೇಕೆ ।
ಪುಂಡರೀಕಾಕ್ಷನ ದಾಸನಲಿ ಭಕ್ತಿಯಿಲ್ಲದ ಬಳಿಕ ೨

ಮಂದಾಕಿನಿ ಮೊದಲಾದ ತೀರ್ಥಯಾತ್ರೆಗಳೇಕೆ ।
ಚೆಂದುಳ್ಳ ವಿಹಿತ ಕರ್ಮಗಳೇತಕೆ ।
ಇಂದಿರೇಶ ನಮ್ಮ ಪುರಂದರವಿಠಲನ ।
ಪೊಂದಿ ಭಜಿಸದವನ ಇಂದ್ರಿಯಂಗಳೇಕೆ ೩

## ೧೮೩

ಧನವಗಳಿಸಬೇಕಿಂತಹದು – ಈ
ಜನರಿಗೆ ಕಾಣಿಸದಂತಹದು ಪ.

ಕೊಟ್ಟರೆ ತೀರದಂತಹದು – ತನ್ನ
ಬಿಟ್ಟು ಅಗಲಿ ಇರದಂತಹದು
ಕಟ್ಟಿದ ಗಂಟನು ಬಯಲೊಳಗಿಟ್ಟರೆ
ಮುಟ್ಟರು ಆರು ಅಂತಹದು ೧

ಕರ್ಮವನೋಡಿಸುವಂತಹದು
ಧರ್ಮವ ಮಾಡಿಸುವಂತಹದು
ನಿರ್ಮಲವಾಗಿದೆ ಮನಸಿನೊಳಗೆ ನಿಜ
ಧರ್ಮವ ತೋರಿಸುವಂತಹದು ೨

ಅಜ್ಞಾನವು ಬಾರದಂತಹದು – ನಿಜ
ಸುಜ್ಞಾನವ ತೋರುವಂತಹದು
ವಿಜ್ಞಾನಮೂರ್ತಿ ಪುರಂದರವಿಠಲನ
ಪ್ರಜ್ಞೆಯನ್ನು ಕೊಡುವಂತಹದು ೩

## ೧೮೪

ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ ।
ಹೆಮ್ಮೆಯಿಂದ ಈ ಶರೀರ ನಂಬಬೇಡಿ ಕಾಣಿರೊ ಪ.

ಅಟ್ಟ ಅಡಿಗೆ ಉಣಲು ಕೊಡನು ಕೊಟ್ಟ
ಸಾಲ ಕೇಳಗೊಡನು ।
ಪೆಟ್ಟಿಗೆ ತುಂಬ ಹಣವು ಇದ್ದರೆ ಕೊಟ್ಟೇನೆಂದರೆ
ಬಿಡನು ಯಮನು ೧

ಮಾಳಿಗೆ ಮನೆಯು ಇರಲು ಜಾಳಿಗೆ ತುಂಬ
ಹೊನ್ನು ಇರಲು ।
ಆಳುಮಂದಿ ಕುದುರೆ ಇದ್ದರೆ ಬೀಳುಗೊಡದೆ
ಯಮನು ಬಿಡನು ೨

ವ್ಯರ್ಥವಾದ ಈ ಶರೀರ ಸತ್ಯವೆಂದು ನಂಬಬೇಡಿ ।
ಕರ್ತು ಪುರಂದರವಿಠಲರಾಯನ ಭಕ್ತಿಯಿಂದ ನೆನೆಯಿರೊ ೩

## ೧೮೫

ಧರ್ಮಕ್ಕೆ ಕೈಬಾರದೀ ಕಾಲ – ಪಾಪ – ।
ಕರ್ಮಕ್ಕೆ ಮನ ಬಾಹುದೀ ಕಲಿಕಾಲ ಪ.

ದಂಡದೋಷಕೆ ಉಂಟು ಪುಂಡುಪೋಕರಿಗುಂಟು ।
ಹೆಂಡಿರು – ಮಕ್ಕಳಿಗಿಲ್ಲವೀ ಕಲಿಗಾಲ ॥
ಭಂಡೆಯರಿಗುಂಟು ದಿಂಡೆಯರಿಗುಂಟು – ಬೇಡಿ – ।
ಕೊಂಡವರಿಗಿಲ್ಲವು ಈ ಕಲಿಕಾಲ ೧

ಒತ್ತೆಸೂಳೆಗುಂಟು ಮತ್ತೆ ಹಾದರಕುಂಟು ।
ಹೆತ್ತತಾಯಿಗಿಲ್ಲ ಈ ಕಲಿಕಾಲ ॥
ತೊತ್ತೆಯರಿಗೆ ಉಂಟು ಅರ್ತಿಕಾರ್ತಿಗಿಲ್ಲ ।
ಉತ್ತಮರಿಗೆ ಇಲ್ಲವೀ ಕಲಿಕಾಲ ೨

ಹುಸಿದಿಟವಾಯಿತು ರಸ – ಕಸವಾಯಿತು ।
ಮಸಿ ಮಾಣಿಕವಾಯಿತೀ ಕಾಲ ॥
ವಸುಧೆಯೊಳಗೆ ನಮ್ಮ ಪುರಂದರವಿಠಲನ ।
ಬೆಸಸಿ ಪೂಜಿಪರ್ಗಿಲ್ಲ ಈ ಕಲಿಕಾಲ ೩

## ೧೮೬

ಧರ್ಮ ದೊರಕುವುದೇ । ದುಷ್ಕರ್ಮಿಸತಿಯೊಳು
ಪುರುಷಾಧಮನಿಗೆ ಧರ್ಮ ದೊರಕುವುದೆ ಪ.

ಧನವಿದ್ದರೇನಯ್ಯ ಮನವಿಲ್ಲವು । ಮನವಿದ್ದರೇನಯ್ಯ ಧನವಿಲ್ಲವು ।
ಧನವು ಮನವು ಯರಡುಂಟಾದ ಮನುಜಗೆ
ಅನುಕೂಲವಾದಂಥ ಸತಿಯಿಲ್ಲವಯ್ಯ ೧

ಧರ್ಮಯಾಗ ಮಾಡುವ ಧರ್ಮ ನಾಳೆಯೆಂದೆನಬ್ಯಾಡ
ನಾಳ್ಯಾರೊ ನಾವ್ಯಾರೊ ಯಲೊ ಮಾನವಾ । ಊಳಿಗದವ ಬಂದು
ಬಾಬಾರೆಂದೆಳವಾಗ ಆಗ ಮಾಡುವೆನೆಂದರೆ ದೊರಕುವುದೇ ಧರ್ಮ ೨

ಬಾಡಿಗೆ ಮನೆಯಂತೆಯೊ ದೇಹವ ನಚ್ಚಿ ಮಾಡುವೆ
ಪರಿಪರಿಯಾಗವನು । ಈ ಬೀಡಬಿಟ್ಟು ಆ ಬೀಡ ಹೋದಮೇಲೆ
ಆಗ ಮಾಡುವೆನೆಂದರೆ ದೊರಕುವುದೆ ೩

ತನ್ನ ಕಣ್ಣ ಮುಂದೆ ಹೋಹ ಜೀವವ ಕಂಡು
ಇನ್ನು ನಾಚಿಕೆಯಿಲ್ಲವೆ ತನಗೆ । ನನ್ನದು ನನ್ನದು
ಯೆಂಬ ಭ್ರಾಂತಿಯ ಬಿಟ್ಟು ಕುನ್ನಿ ದೇಹವನೆಚ್ಚಿ ಕೆಡಬ್ಯಾಡ
ಮನುಜ ೪

ವಂದಾನೊಂದು ಪರಿಯಲ್ಲಿ ತೊಳಲಿ ಬಳಲಿ ಜೀವ
ಮುಂದಣ ಜನ್ಮಕೆ ಸಾಧನವು ತಂದೆ ಶ್ರೀ ಪುರಂದರ
ವಿಠಲರಾಯನನು ಸಂದೇಹವಿಲ್ಲದೆ ನೆನೆಕಂಡ್ಯಾ ಮನುಜ ೫

## ೧೮೭

ಧರ್ಮವೇ ಜಯವೆಂಬ ದಿವ್ಯ ಮಂತ್ರ ।
ಮರ್ಮಗಳನೆತ್ತಿದರೆ ಒಳಿತಲಾ ಕೇಳಿ ಪ.

ವಿಷವನುಣಿಸಿದಗೆ ಷಡುರಸವನುಣಿಸಲುಬೇಕು ।
ದ್ವೇಷಮಾಡುವನ ಪೋಷಿಸಲು ಬೇಕು ॥
ಹಸಿದು ಮನೆ ಕೊಂಬವನ ಹಾಡಿಹರಸಲುಬೇಕು ।
ಅಸು ಹೀರಿದನ ಹೆಸರ ಮಗನಿಗಿಡಬೇಕು ೧

ಹಿಂದೆ ನಿಂದಿಸುವರನು ವಂದಿಸುತಲಿರಬೇಕು ।
ಬಂಧಿಸಿದವನ ಕೂಡ ಬೆರೆಯಬೇಕು ॥
ನಿಂದ ನಿಲುವಿಗೆ ಸೇರದವನ ಪೊಗಳಲುಬೇಕು ।
ಕೊಂದವನ ಗೆಳತನವ ಮಾಡಬೇಕಯ್ಯ ೨

ಕೊಂಡೊಯ್ದು ಕೆಡಿಸುವನ ಕೊಂಡಾಡುತಿರಬೇಕು ।
ಕಂಡರಾಗದವರ ತಾ ಕರೆಯಬೇಕು ॥
ಪುಂಡರೀಕಾಕ್ಷ ಶ್ರೀ ಪುರಂದರವಿಠಲನ ಅ – ।
ಖಂಡ ಮಹಿಮೆಯನರಿತು ನೆನೆಯಬೇಕಯ್ಯ ೩

## ೧೮೮

ನಗೆಯು ಬರುತಿದೆ – ಎನಗೆ
ನಗೆಯು ಬರುತಿದೆ ಪ.

ಜಗದೊಳಿದ್ದ ಮನುಜರೆಲ್ಲ
ಹಗರಣ ಮಾಡುವುದ ನೋಡಿ ಅಪ

ಪರಸತಿಯರ ಒಲುಮೆಗೊಲಿದು
ಹರುಷದಿಂದ ಅವರ ಬೆರೆದು
ಹರಿವ ನೀರಿನೊಳಗೆ ಮುಳುಗಿ
ಬೆರಳನೆಣಿಸುವರ ಕಂಡು ೧

ಪತಿಯ ಸೇವೆ ಬಿಟ್ಟು, ಪರ
ಸತಿಯ ಕೂಡೆ ಸರಸವಾಡಿ
ಸತತ ಮೈಯ ತೊಳೆದು ಹಲವು
ವ್ರತವ ಮಾಡುವರ ಕಂಡು ೨

ಹೀನಗುಣವ ಮನದೊಳಿಟ್ಟು
ತಾನು ವಿಷದ ಪುಂಜನಾಗಿ
ಮೌನಿ ಪುರಂದರವಿಠಲನ
ಧ್ಯಾನ ಮಾಡುವವರ ಕಂಡು ೩

## ೧೮೯

ನಂಬದಿರು ಈ ದೇಹ ನಿತ್ಯವಲ್ಲ ।
ಅಂಬುಜಾಕ್ಷನ ಭಜಿಸಿ ಸುಖಿಯಾಗು ಮನವೇ ಪ.

ಎಲು ರಕ್ತ ಮಾಂಸಗಳ ಮೇಲೆ ಚರ್ಮದ ಹೊದಿಕೆ ।
ಮಲಮೂತ್ರ ಒಳಗೆ ಕ್ರಿಮಿರಾಶಿಯಿಹವು ॥
ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು ।
ಹುಲುದೇಹವನು ನೆಚ್ಚಿ ಕೆಡಬೇಡ ಮನವೆ ೧

ಸತಿಸುತರು ಹಿತರೆಂದು ಮತಿಮರೆತು ಮಮತೆಯಲಿ ।
ಅತಿಕಾಂಕ್ಷೆಯಿಂದ ದುರ್ವಿಷಯ ಬಲಿದು ॥
ಸತತ ಲಕ್ಷ್ಮೀಪತಿಯ ಶರಣೆನದೆ ಇಹಪರದ ।
ಗತಿಶೂನ್ಯನಾಗಿ ಕೆಡಬೇಡ ಮನವೆ ೨

ಪರರ ನಿಂದಿಸದೆ ಪರವಧುಗಳನು ಬಯಸದೆ ।
ಗುರು – ವಿಪ್ರಸೇವೆಯನು ಮಾಡು ಬಿಡದೆ ॥
ಹರಿಸ್ತುತಿಯ ನೀ ಕೇಳು ಹರಿಕೀರ್ತನೆಯ ಪಾಡು ।
ಪರಮ ಪುರಂದರವಿಠಲನೊಲಿದು ಪಾಲಿಸುವ ೩

## ೧೯೦

ನಂಬಬೇಡ ನಾರಿಯರನು
ಹಂಬಲಿಸಿ ಹಾರಯಿಸಬೇಡ
ಅಂಬುಜಾಕ್ಷಿಯರೊಲುಮೆ ಬಯಲು
ಡಂಬಕವೆಂದು ತಿಳಿಯಿರೊ ಪ.

ನೋಟವೆಲ್ಲ ಪುಸಿಯು – ಸತಿಯ
ರಾಟವೆಲ್ಲ ಸಂಚು – ಸನ್ನೆ
ಕೂಟವೆಲ್ಲ ಗನ್ನ – ಘಾತುಕ
ನೋಟವೆಲ್ಲ ವಂಚನೆ
ವಾತಬದ್ಧ ಹೆಂಗಳಲ್ಲಿ
ಕೋಟಲೆಗೊಂಡು ತಿರುಗಬೇಡ
ಮಾಟಗಾತಿಯರೊಲುಮೆ ಬಯಲು
ಬೂಟಕವೆಂದು ತಿಳಿಯಿರೊ ೧

ಸೋತೆನೆಂದು ವಿಟಗೆ ದೈನ್ಯ
ಮಾತನಾಡಿ ಮರುಳುಗೊಳಿಸಿ
ಕಾತರವ ಹುಟ್ಟಿಸಿ ಆವನ
ಮಾತೆ – ಪಿತರ ತೊಲಗಿಸಿ
ಪ್ರೀತಿಬಡಿಸಿ ಹಣವ ಸೆಳೆದು
ರೀತಿಗೆಡಿಸಿ ಕಡೆಯಲವನ
ಕೋತಿಯಂತೆ ಮಾಡಿ ಬಿಡುವ
ಜಾತಿಕಾರ್ತಿ ಹೆಂಗಳೆಯರ ೨

ಧರೆಯ ಜನರ ಮೋಹಕೆಳಸಿ
ಭರದಿ ನೆಟ್ಟು ಕೆಡಲುಬೇಡ
ಎರಳೆಗಂಗಳ ಹೆಂಗಳೊಲುಮೆ
ಗುರುಳೆ ನೀರ ಮೇಲಿನ
ಮರೆಯಬೇಡ ಗುರುಮಂತ್ರವ
ಸ್ಥಿರವಿಲ್ಲದ ಜನ್ಮದಲ್ಲಿ
ಕರುಣನಿಧಿ ಪುರಂದರವಿಠಲನ
ಚರಣಸ್ಮರಣೆ ಮಾಡಿರೊ ೩

## ೧೯೧

ನಂಬಿ ಕೆಟ್ಟವರುಂಟೆ – ಕೃಷ್ಣಯ್ಯನ ।
ನಂಬಲಾರದೆ ಕೆಟ್ಟರು ಪ.

ಅಂಬುಜನಾಭನ ಪಾದವ ನೆನೆದರೆ ।
ಇಂಬುಗೊಡದ ದುಃಖ ಹರಿಸುವ ಶ್ರೀ ಕೃಷ್ಣ ಅಪ

ಬಲಿಯ ಪಾತಾಳಕಿಳುಹಿ – ಭಕ್ತನ ಬಾ – ।
ಗಿಲವ ಕಾಯುವೆ ನಾನೆಂದ ॥
ಛಲದೊಳು ಅಸುರರ ಶಿರಗಳ ತರಿದು ತಾ ।
ನೊಲಿದು ವಿಭೀಷಣಗೆ ಪಟ್ಟಗಟ್ಟಿದ ಈ ಕೃಷ್ಣ ೧

ತರಳ ಪ್ರಹ್ಲಾದಗೊಲಿದು – ಹಿರಣ್ಯಕನ ಉ – ।
ಗುರಿನಿಂದಲೆ ಸೀಳಿದ ।
ಕರಿರಾಜಗೊಲಿದು ನೆಗಳು ನುಂಗುತಿರಲಾಗ ॥
ಪರಿಹರಿಸಿದ ಜಲದೊಳು ಪೊಕ್ಕು ಶ್ರೀಕೃಷ್ಣ ೨

ಪಾಂಡವರಿಗೆ ಒಲಿದು – ಕೌರವರನು ।
ತುಂಡು ಛಿದ್ರಮಾಡಿದೆ ॥
ಗಂಡರೈವರ ಮುಂದೆ ದ್ರೌಪದಿ ಕೂಗಲು ।
ಕಂಡು ಕರುಣದಿ ಕಾಯ್ದ ಪುರಂದರವಿಠಲನ ೩

## ೧೯೨

ನರನಾದ ಮೇಲೆ ।
ಹರಿನಾಮ ಜಿಹ್ವೆಯೊಳಿರಬೇಕು ಪ.

ಭೂತದಯಾಪರನಾಗಿರಬೇಕು ।
ಪಾತಕವೆಲ್ಲವ ಕಳೆಯಲು ಬೇಕು ।
ಮಾತು – ಮಾತಿಗೂ ಹರಿ ಎನಬೇಕು ೧

ವೇದ – ಶಾಸ್ತ್ರಗಳನೋದಲು ಬೇಕು ।
ಭೇದಾಭೇದವ ತಿಳಿಯಲು ಬೇಕು ।
ಸಾಧು – ಸಜ್ಜನರ ಸಂಗದೊಳಿರಬೇಕು ೨

ತಂದೆ – ತಾಯಿಗಳ ಸೇವೆಯು ಬೇಕು ।
ಬಂದುದನುಂಡು ಸುಖಿಸಲು ಬೇಕು ।
ತಂದೆ ಪುರಂದರವಿಠಲನ ದಯೆಬೇಕು ೩

## ೧೯೩

ನಾಚಿಕೆಪಡಬೇಡ – ಮನದೊಳು –
ಯೋಚಿಸಿ ಕೆಡಬೇಡ ಪ.

[redacted]



ನಿಚ್ಚ ನೆನೆಯೊ ನಮ್ಮಚ್ಯುತನಾಮವ ।
ಮೆಚ್ಚಿ ಕೊಟ್ಟರೆ – ಅಚ್ಯುತ ಪದವೀವ ಅಪ

ಹರಿಹರಿಯೆಂದೊದರೋ – ಹತ್ತಿದ – ।
ದುರಿತಗಳಿಗೆ ಬೆದರೋ ॥
ವಾರಿಜಾಕ್ಷನ – ವೈಕುಂಠಪುರವ ।
ಸೇರಿಸೇರಿ ನೀ ಕುಣಿಕುಣಿದಾಡೊ ೧

ಆರಗೊಡವೆ ಏನೋ – ನರಕದ ।
ದಾರಿ ತಪ್ಪಿಸುವರೆ ॥
ನೀರಜಾಕ್ಷ ನಮ್ಮ ನಿರ್ಜರ ಪತಿಯಲಿ ।
ಸೇರಿ – ಸೇರಿಸಿ ಮನ ನಲಿನಲಿದಾಡೊ ೨

ಭಕ್ತಜನರ ಕೂಡೊ – ಭವಭಯ ।
ಬತ್ತಿಪೋಪುದು ನೋಡೊ ॥
ಮುಕ್ತಿದಾಯಕ ಶ್ರೀ ಪುರಂದರವಿಠಲನ ।
ಭಕ್ತಿಯಿಂದ ನೀ ಹಾಡಿ ಕೊಂಡಾಡೊ ೩

## ೧೯೪

ನಾ ನಿನ್ನ ಧ್ಯಾನದೊಳಿರಲು – ಇಂಥ
ಹೀನ ಮಾನವರಿಂದೇನಾಹೋದು ಹರಿಯೆ ಪ.

ಮಚ್ಚರಿಸಿದರೇನ ಮಾಡಲಾಪರೊ ಎನ್ನ
ಅಚ್ಯುತ ನಿನ್ನದೊಂದು ದಯವಿರಲು ॥
ವಾಚ್ಛಲ್ಯ ಬಿಡದಿರು ನಿನ್ನ ನಂಬಿದ ಮೇಲೆ
ಕಿಚ್ಚಿಗೆ ಗೊರಲೆ ಮುತ್ತುವುದೆ ಕೇಳೆಲೊ ರಂಗ ೧

ದಾಳಿಯಲಿ ತೇಜಿ ವೈಹಾಳಿಯಲಿ ನಡೆಯಲು
ಧೂಳು ರವಿಗೆ ತಾನು ಮುಸುಕುವುದೇ ॥
ತಾಳಿದವರಿಗೆ ವಿರುದ್ಧ ಲೋಕದೊಳುಂಟೆ
ಗಾಳಿಗೆ ಗಿರಿ ನಡುಗುವುದೆ ಕೇಳೆಲೊ ರಂಗ ೨

ಕನ್ನಡಿಯೊಳಗಿನ ಗಂಟ ಕಂಡು ಕಳ್ಳ
ಕನ್ನವಿಕ್ಕಲು ವಶವಾಗುವುದೇ
ನಿನ್ನ ಧ್ಯಾನವ ಮಾಡೆ ಪುರಂದರವಿಠಲನೆ
ಚಿನ್ನಕ್ಕೆ ಪುಟವಿಕ್ಕಿದಂತೆ ಕೇಳೆಲೊ ರಂಗ ೩

## ೧೯೫

ನಾರಾಯಣ ಎನ್ನಬಾರದೆ – ನಿಮ್ಮ ।
ನಾಲಿಗೆಯೊಳು ಮುಳ್ಳು ಮುರಿದಿಹುದೇ ? ಪ.

ವಾರಣಾಸಿಗೆ ಪೋಗಿ ದೂರ ಬಳಲಲೇಕೆ ।
ನೀರ ಕಾವಡಿಯನು ಪೊತ್ತು ತಿರುಗಲೇಕೆ ॥
ಊರೂರು ತಪ್ಪದೆ ದೇಶಾಂತರವೇಕೆ ।
ದಾರಿಗೆ ಸಾಧನವಲ್ಲವೆ ಹರಿನಾಮ ೧

ನಿತ್ಯ ಉಪವಾಸವಿದ್ದು ಹಸಿದು ಬಳಲಲೇಕೆ ।
ಮತ್ತೆ ಚಳಿಯೊಳು ಗಂಗೆ ಮುಳಗಲೇಕೆ ॥
ಹಸ್ತವ ಪಿಡಿದು ಮಾಡುವ ಜಪ – ತಪವೇಕೆ
ಮುಕ್ತಿಗೆ ಸಾಧನವಲ್ಲವೇ ಹರಿನಾಮ ೨

ಸತಿ ಸುತರನು ಬಿಟ್ಟು ಯತಿಗಳಾಶ್ರಮವೇಕೆ
ವ್ರತ ಕೃಚ್ಛ್ರ ನೇಮ ನಿಷ್ಠೆಗಳೇತಕೆ ॥
ಪೃಥಿವಿಯೊಳಗೆ ನಮ್ಮ ಪುರಂದರವಿಠಲನ ।
ಅತಿ ಭಕುತಿಯಿಂದೊಮ್ಮೆ ನೆನೆದರೆ ಸಾಲದೆ ೩

## ೧೯೬

ನಾರಾಯಣ ಎನ್ನಿರೊ – ಶ್ರೀ ನರಹರಿ ।
ನಾರಾಯಣ ಎನ್ನಿರೊ ಪ.

ನಾರಾಯಣನೆಂದು ಅಜಮಿಳ ಕೈವಲ್ಯ ।
ಸೂರೆಗೊಂಡನೆಂಬ ಸುದ್ದಿಯನರಿಯಿರಾ ಅಪ

ಚೋರರ ಭಯ ವಿಲ್ಲವೊ – ಇದಕೆ ನೋಡೈ – ।
ದಾರರಂಜಿಕೆ ಇಲ್ಲವೊ ॥
ಊರನಾಳುವ ದೊರೆಯ ಭೀತಿ ಇನಿತಿಲ್ಲವೊ ॥
ಘೋರ ಪಾತಕವೆಲ್ಲ ಹಾರಬಿಡುವುದಿದು ೧

ಕಾಶಿಗೆ ಹೋಗಲೇಕೆ – ಕಾವಡಿ ಹೊತ್ತು – ।
ಬೇಸತ್ತು ತಿರುಗಲೇಕೆ ।
ವಾಸುದೇವನ ನಾಮ ವರ್ಣಿಸಿದವರಿಗೆ ।
ಕ್ಲೇಶವೆಂಬುವುದಿದು ಲೇಶಮಾತ್ರವು ಇಲ್ಲ ೨

ಸ್ನಾನವ ಮಾಡಲೇಕೆ – ಸಂಧ್ಯಾವಂದನೆ – ।
ಮೌನ ಮಂತ್ರಗಳೇತಕೆ ॥
ದೀನರಕ್ಷಕ ಬೆಟ್ಟದೊಡೆಯನಾದವನ ।
ಧ್ಯಾನಕೆ ಸಮವುಂಟೆ ಪುರಂದರವಿಠಲನ ೩

## ೧೯೭

ನಾರಾಯಣನೆಂಬ ನಾಮದ ಬೀಜವ ನಿಮ್ಮ
ನಾಲಿಗೆ ತುದಿಯಿಂದಲಿ ಬಿತ್ತಿರಯ್ಯ ಪ.

ಹೃದಯಹೊಲವನು ಮಾಡಿ ಮನವ ನೇಗಿಲ ಮಾಡಿ ।
ಶ್ವಾಸೋಚ್ಛ್ವಾಸ ಎರಡೆತ್ತಮಾಡಿ ॥
ಜ್ಞಾನವೆಂಬ ಹಗ್ಗ ಕಣ್ಣಿಯ ಮಾಡಿ ॥
ನಿರ್ಮಮವೆಂಬ ಗುಂಟೆಲಿ ಹರಗಿರಯ್ಯ ೧

ಮದಮತ್ಸರಗಳೆಂಬ ಮರಗಳನೆ ತರಿದು ।
ಕಾಮಕ್ರೋಧಗಳೆಂಬ ಕಳೆಯ ಕಿತ್ತು ॥
ಪಂಚೇಂದ್ರಿಯವೆಂಬ ಮಂಚಿಕೆಯನೆ ಹಾಕಿ ।
ಚಂಚಲವೆಂಬ ಹಕ್ಕಿಯ ಹೊಡಿಯಿರಯ್ಯ ೨

ಉದಯಾಸ್ತಮಾನವೆಂಬ ಎರಡು ಕೊಳಗದಲಿ ।
ಆಯುಷ್ಯವೆಂಬ ರಾಶಿ ಅಳೆಯುತಿರೆ ॥

ಸ್ವಾಮಿ ಶ್ರೀ ಪುರಂದರವಿಠಲನ ನೆನೆದರೆ ।
ಪಾಪ ರಾಶಿಯ ಪರಿಹರಿಸುವನಯ್ಯ* ೩

## ೧೯೮

ನಾರಾಯಣನೆಂಬ ನಾಮವ ನೇಮದಿ ನೆನೆಯುತಿರೆಚ್ಚರಿಕೆ ।
ನೀರ ಮೇಲಿನ ಗುಳ್ಳೆ ನರನೆಂಬ ಡಿಂಭವ ನಂಬದಿರೆಚ್ಚರಿಕೆ ಪ.

ಪರರು ಮಾಡಿದ ಪಾತಕವ ನಾಲಿಗೆಯೊಳುಚ್ಚರಿಸದಿರೆಚ್ಚರಿಕೆ
ಗುರು ಹಿರಿಯರ ಸೇವೆ ಮಾಡದೆ ಉದರವ ಪೊರೆಯದಿರೆಚ್ಚರಿಕೆ ॥
ಹರಿದಿನದುಪವಾಸ ಇರುಳ ಜಾಗರವ ನೀ ಮರೆಯದಿರೆಚ್ಚರಿಕೆ
ನರಹರಿಯಂಘ್ರಿಯ ಸ್ಮರಿಸದೆ ನರಸ್ತುತಿ ತರವಲ್ಲ ಎಚ್ಚರಿಕೆ ೧

ಹೀನ ಮಾನಿನಿಯರ ಧ್ಯಾನಕಾನನದೊಳಿಳಿಯದಿರೆಚ್ಚರಿಕೆ
ನಾನೆಂಬ ಅಹಂಕಾರ ಮಾಡಿ ನರಕದೊಳು ನರಳದಿರೆಚ್ಚರಿಕೆ ॥
ಜಾಹ್ನವಿ ಸ್ನಾನ ಸಂಧ್ಯಾನ ಧಾನ್ಯವ ಸುಜ್ಞಾನ ಮುಂದೆ ಚ್ಚರಿಕೆ
ಜಾನಕಿರಮಣನ ಧ್ಯಾನವೆ ಧರ್ಮ ಸಂತಾನ ಮುಂದೆಚ್ಚರಿಕೆ ೨

ಮಡದಿ ಮಕ್ಕಳೆಂಬ ಕಡುಮೋಹಕೆ ಸಿಲುಕಿ ಕೆಡಬೇಡವೆಚ್ಚರಿಕೆ
ನಡೆವಾಗ ನುಡಿವಾಗ ಗಿಡವೆಲ್ಲ ನೆಂಟರು ಕಡೆಗಿಲ್ಲ ಎಚ್ಚರಿಕೆ ॥
ಕೊಡುಗೈಯ ಮಾಡದೆ ಮಡುಗಿದ ಧನ ಸಂಗಡ ಬಾರದೆಚ್ಚರಿಕೆ ।
ಒಡೆಯ ಶ್ರೀ ಪುರಂದರವಿಠಲನ ನೆನೆದು ನೀ ಕಡೆ
ಹಾಯೋ ಎಚ್ಚರಿಕೆ ೩

## ೧೯೯

ನಾಲಿಗೆ ನಾಲಿಗೆ ನಾಲಿಗೆ – ಸಿರಿ – ।
ಲೋಲನ ನೆನೆ ಕಾಣೊ ನಾಲಿಗೆ ಪ.

ವಾಸುದೇವನ ನಾಮ ನಾಲಿಗೆ – ನೀ
ಲೇಸಾಗಿ ನೆನೆ ಕಾಣೊ ನಾಲಿಗೆ ॥

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ಆಸೆಯೊಳಗೆ ಬಿದ್ದು ಮೋಸ ಹೋಗಲು ಬೇಡ ।
ಕೇಶವನ ನಾಮವ ನೆನೆ ಕಾಣೊ ಮರುಳೆ ೧

ಮಾತನಾಡುವಲ್ಲಿ ನಾಲಿಗೆ – ನೀ ಅ – ।
ನೀತಿ ನುಡಿಯದಿರು ನಾಲಿಗೆ ॥
ಆತನ ನಾಮವ ಗೀತದಿ ಪಾಡುತ ।
ಸೀತಾಪತಿ ರಘುನಾಥನ ನೆನೆ ಕಾಣೊ ೨

ಅಚ್ಯುತನಾಮವ ನಾಲಿಗೆ ನೀ – ।
ಬಿಚ್ಚಿಟ್ಟು ನೆನೆ ಕಾಣೊ ನಾಲಿಗೆ ॥
ನೆಚ್ಚಿ ಕೆಡಲಿ ಬೇಡ ನಿಚ್ಚ ಶರೀರವ ।
ಅಚ್ಯುತನಾಮವ ನೆನೆ ಕಾಣೊ ಮರುಳೆ ೩

ನನ್ನದು ತನ್ನದು ನಾಲಿಗೆ – ನೀ – ।
ನೆನ್ನದಲಿರು ಕಾಣೊ ನಾಲಿಗೆ ।
ಇನ್ನು ಮೂರು ದಿನದೀ ಸಂಸಾರದಿ ।
ಪನ್ನಗಶಯನನ ನೆನೆ ಕಾಣೊ ಮರುಳೆ ೪

ಅನುದಿನ ಹರಿನಾಮ ನಾಲಿಗೆ – ನೀ ।
ನೆನೆಯುತಿರು ಕಾಣೊ ನಾಲಿಗೆ ॥
ಘನಮಹಿಮ ನಮ್ಮ ಪುರಂದರವಿಠಲನ ।
ಕ್ಷಣ ಕ್ಷಣಕೊಮ್ಮೆ ನೆನೆ ಕಾಣೊ ಮರುಳೆ ೫

## ೨೦೦

ನಿತ್ಯವಲ್ಲ ನಿತ್ಯವಲ್ಲ ಅನಿತ್ಯ ದೇಹವಿದಣ್ಣ ಪ.

ಮತ್ತೆ ಮುರಾರಿ ಶ್ರೀಕೃಷ್ಣನ ನೆನೆದರೆ ।
ಮುಕ್ತಿಸಾಧನವಣ್ಣ ದೇಹ ಅಪ

ಮಾನಿನಿಯರ ಕುಚಕೆ ಮರುಳಾಗದಿರು ಮಾಂಸದ ಗಂಟುಗಳಲ್ಲಿ ।
ನಾನಾ ಪರಿಯಲಿ ಮೋಹಮಾಡದಿರು

ಹೀನಮೂತ್ರದ ಕುಳಿಯಲ್ಲಿ
ಜಾನಕಿರಮಣನ ನಾಮವ ನೆನೆದರೆ
ಜಾಣನಾಗುವೆಯಲ್ಲೋ – ಪ್ರಾಣಿ ೧

ತಂದೆ–ತಾಯಿ ಅಣ್ಣ–ತಮ್ಮಂದಿರು ಮಕ್ಕಳು ಹರಿದು ತಿಂಬರೆಲ್ಲ ।
ಹೊಂದಿ ಹೊರೆಯುವಾ ನಂಟರಿಷ್ಟರು
ನಿಂದೆ ಮಾಡುವರೆಲ್ಲ ॥
ಮುಂದೆ ಯಮನ ದೂತರು ಎಳೆದೊಯ್ಯಲು
ಹಿಂದೆ ಬರುವರಿಲ್ಲೋ – ಪ್ರಾಣಿ ೨

ಕತ್ತಲೆ ಬೆಳುದಿಂಗಳು ಸಂಸಾರವು ಕಟ್ಟು ಧರ್ಮದ ಮೊಟ್ಟೆ ।
ಹೊತ್ತನರಿತು ಹರಿದಾಸರ ಸೇರೆಲೊ ಪೇಳ್ವರು ತತ್ವವ ಗಟ್ಟಿ ।
ಚಿತ್ತಜನಯ್ಯ ಪುರಂದರವಿಠಲನ
ಹೊಂದೋ ನೀ ಸುಖಬುಟ್ಟಿ – ಪ್ರಾಣಿ ೩

## ೨೦೧

ನೀಚ ಮಾನವರಿಗೆ ಸಿರಿ ಬಂದರೇನು
ಈಚಲ ಮರ ದಟ್ಟ ನೆರಳಾದರೇನು ಪ.

ನಾಚಿಕಿಲ್ಲದ ನರರು ಬಾಗಿದರೇನು
ಹೀಚಿನೊಳಿಹ ಫಲ ಹಣ್ಣಾದರೇನು ಅಪ

ಹೊಲೆಯರೊಳು ಪದುಮಿನಿ ಹೆಣ್ಣು ಹುಟ್ಟಿದರೇನು
ಮೊಲೆಯ ತೊರೆಯದ ನಾಯಿ ಈದರೇನು
ಕಳೆಹೀನ ಕಾಮಿನಿಗೆ ಕಾಂತಿ ಹೆಚ್ಚಿದರೇನು
ಬಿಲದೊಳಗೆ ಸರ್ಪ ಹೆಡೆಯೆತ್ತಿದರೇನು ೧

ಕೋತಿಯ ಮೈಯೊಳು ಭಾಂಡ ತುಳಕಲೇನು
ಹೋತಿನ ಗಡ್ಡವು ಹಿರಿದಾದರೇನು
ಯಾತಕೂ ಬಾರದ ಬದುಕು ಬಾಳಿದ್ದರೇನು
ರೀತಿಯಿಲ್ಲದ ನೆರೆಯ ಸ್ನೇಹವಿನ್ನೇನು ೨

ರಕ್ಷಣೆಯಿಲ್ಲದ ರಾಜ ರಾಜಿಸಲೇನು
ಭಿಕ್ಷೆ ಹುಟ್ಟದ ಊರು ತುಂಬಿದ್ದರೇನು
ಲಕ್ಷ್ಯವಿಲ್ಲದವಗೆ ಲಕ್ಷ ಬಂದರೇನು
ಪಕ್ಷಪಾತವಿಲ್ಲದವನ ಅಶ್ರಯವಿನ್ನೇನು ೩

ಫಣಿಯ ಮಸ್ತಕದ ಮೇಲೆ ಮಣಿಯು ಮಿಂಚಲೇನು
ಉಣಿಸಿ ದಣಿಸದ ಧಣಿಯಿದ್ದರೇನು
ಋಣಗೇಡಿ ಮಕ್ಕಳ ರಟ್ಟೆ ಬಲಿತರೇನು
ಕ್ಷಣಚಿತ್ತವಿಲ್ಲದವನ ಸ್ಮರಣೆಯು ಇನ್ನೇನು ೪

ಸಾಕಲಾರದಾತನ ಸತಿಯ ಮೋಹವೇನು
ಜೊತೆ ಮಾಡದಾ ಹಣ ಗಳಿಸದರೇನು
ಕಾಕುಮಾನವರ ಸೇವೆ ಮಾಡಿದರೇನು
ಬೇಕೆಂದು ಭಜಿಸಿರೋ ಪುರಂದರವಿಠಲನ ೫

## ೨೦೨

ನೀ ದಯಾಪರನೊ, ನಿನ್ನವರ ಸಾಧನವೊ ।
ಮುದ್ದು ಹಯವದನ ಪೇಳಿದನ ಪ.

ಮದಕರಿಯು ಸರಸಿಯೊಳು ಮಕರಿಬಾಧೆಗೆ ಸಿಲುಕಿ ।
ಪದುಮಾಕ್ಷ ಪದುಮೇಶ ಪದುಮನಾಭ ॥
ಪದುಮಸಂಭವನಯ್ಯ ಪಾಹಿ ಪಾಹಿ – ಯೆನಲು ।
ಒದಗಿ ರಕ್ಷಿಸಿದೆ ತವ ದಯೆಯೊ, ಸಾಧನವೊ ? ೧

ಅಂತ್ಯಜೆಯ ಸಹವಾಸದಲಿ ವಿಪ್ರವರನೊಬ್ಬ ।
ಸಂತಸದಿಂದ ಬಹುಕಾಲ ಕಳೆದು ॥
ಅಂತ್ಯಕಾಲಕೆ ತನ್ನ ಮಗನ ಕರೆಯಲು ಕಾಯ್ದೆ ।
ಚಿಂತಾಯತನೆ, ವೈರಾಗ್ಯ ಸಾಧನವೊ ? ೨

ಅವರವರ ಯೋಗ್ಯತೆಯನರಿತು ಪ್ರೇರಕನಾಗಿ ।
ಅವರಿಂದ ನುಡಿಸಿ ನುಡಿನುಡಿಗೆ ಹಿಗ್ಗಿ ॥

ಅವರಿಗೊಲಿದೆ ನಮ್ಮ ಪುರಂದರವಿಠಲ ।
ಅವನೀಶ ನಿನ್ನ ದಯವೊ ಸಾಧನವೊ ? ೩

## ೨೦೩

ನೀನೇಕೊ ನಿನ್ನ ಹಂಗೇಕೊ – ನಿನ್ನ –
ನಾಮದ ಬಲವೆನಗಿದ್ದರೆ ಸಾಕೊ ಪ.

ಆ ಮರ ಈ ಮರವೆಂದೆನ್ನುತಿರೆ ರಾಮ – ।
ನಾಮವೆ ವ್ಯಾಧನ ಮುನಿಪನ ಮಾಡಿತು ೧

ನಾರಾಯಣೆನ್ನದೆ ನಾರಗನೆನ್ನಲು ।
ಘೋರ ಪಾತಕಿಯನು ನಾಮವೆ ಕಾಯ್ದಿತೊ ೨

ತಂದೆ ಪ್ರಹ್ಲಾದನ ಬಾಧೆಯ ಪಡಿಸೆ – ಗೋ ।
ವಿಂದನೆಂಬ ಸಿರಿನಾಮವೆ ಕಾಯ್ದಿತೊ ೩

ಉತ್ತರೆಯ ಗರ್ಭದಿ ಸುತ್ತಲಸ್ತ್ರವಿರೆ ।
ಚಿತ್ತಜಪಿತ ನಿನ್ನ ನಾಮವೆ ಕಾಯ್ದಿತೊ ೪

ಕರಿಮಕರಿಗೆ ಸಿಲ್ಕಿ ಮೊರೆ ಇಡುತಿರುವಾಗ ।
ಪರಮಪುರುಷ ಹರಿನಾಮವೆ ಕಾಯ್ದಿತೊ ೫

ನಾರಿಯನೆಳತಂದು ಸೀರೆ ಸೆಳೆಯುತಿರೆ ।
ದ್ವಾರಕಾಪತಿ ನಿನ್ನ ನಾಮವೆ ಕಾಯ್ದಿತೊ ೬

ಹಸುಳೆ ಧ್ರುವರಾಯನು ಅಡವಿಗೆ ಪೋಪಾಗ ।
ವಸುದೇವಸುತ ನಿನ್ನ ನಾಮವೆ ಕಾಯ್ದಿತೊ ೭

ನಿನ್ನ ನಾಮಕೆ ಸರಿಯಾವುದ ಕಾಣೆನೊ
ಪನ್ನಗಶಯನ ಶ್ರೀ ಪುರಂದರವಿಠಲ ೮

## ೨೦೪

ನಿಂದಕರಿರಬೇಕಿರಬೇಕು
ಹಂದಿಯಿದ್ದರೆ ಕೇರಿ ಹೇಗೆ ಶುದ್ಧಿಯೋ ಹಾಗೆ ಪ.

ಅಂದಂದು ಮಾಡಿದ ಪಾಪವೆಂಬ ಮಲ
ತಿಂದು ಹೋಗುವರಯ್ಯ ನಿಂದಕರು
ವಂದಿಸಿ ಸ್ತುತಿಸುವ ಜನರೆಲ್ಲರು ನಮ್ಮ
ಪೊಂದೀಗ ಪುಣ್ಯವನ್ನೊಯ್ಯುವರಯ್ಯ ೧

ದುಷ್ಟ ಜನರು ಈ ಸೃಷ್ಟಿಯೊಳಿದ್ದರೆ
ಶಿಷ್ಟ ಜನರಿಗೆಲ್ಲ ಕೀರ್ತಿಗಳೂ
ಇಷ್ಟಪ್ರದ ಶ್ರೀಕೃಷ್ಣನೆ ನಿನ್ನೊಳು
ಇಷ್ಟೇ ವರವನು ಬೇಡುವೆನಯ್ಯ ೨

ದುರುಳ ಜನಂಗಳು ಚಿರಕಾಲ ಇರುವಂತೆ
ಕರವ ಮುಗಿದು ವರ ಬೇಡುವೆನು
ಪರಿಪರಿ ತಮಸಿಗೆ ಗುರಿಯಲ್ಲದೆ
ಪರಮ ದಯಾನಿಧಿ ಪುರಂದರವಿಠಲ ೩

## ೨೦೫

ನಿಂದೆಯಾಡಲುಬೇಡ ನೀಚಾತ್ಮ – ನಿನ
ಗೆಂದೆಂದು ದೊರಕನು ಪರಮಾತ್ಮ ಪ.

ನರಜನ್ಮಕೆ ಬಂದು ನೀ ನಿಂತಿ – ಪರಿ
ಪರಿ ಮಾಡಿದೆಯೊ ಪರದ ಚಿಂತಿ
ಗರುವದಿಂದ ಹುಲ್ಲುತಿಂತಿ – ಇದು
ಸ್ಥಿರವಲ್ಲ ಮೂರುದಿನದ ಸಂತಿ ೧

ಪರಸತಿಯರ ಕಂಡು ಹೋಗಿ – ಅಲ್ಲಿ
ಪರಮಾತ್ಮನ ಧ್ಯಾನವನ್ನು ನೀ ನೀಗಿ

ಪರಲೋಕ ಹೇಗೆ ಕಾಣುವೆ ಕಾಗಿ – ನೀನು
ಪರಪರಿಯಲಿ ನೋಡಲೊ ಗೂಗಿ ೨

ಬಾಳೆಗೆ ಒಂದೇ ಫಲವು ನೋಡು – ಅಲ್ಲಿ
ಕಳ್ಳಸುಳ್ಳರಿಗೆ ಬಲು ತೋಡು
ಬಾಳ್ವೆವಂತರ ಹುಡುಕಾಡು – ಶ್ರೀ
ಲೋಲ ಪುರಂದರವಿಠಲನೊಳಾಡು ೩

## ೨೦೬

ನೆಚ್ಚದಿರೀ ಭಾಗ್ಯ ಆರಿಗೂ ಸ್ಥಿರವಲ್ಲ
ನೆಚ್ಚದಿರೆಚ್ಚರಿಕೆ
ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕೆ
ಮೆಚ್ಚು ಕೇಳೆಚ್ಚರಿಕೆ ಪ.

ಪೊಡವಿಪರೊಲುಮೆ ಸುಸ್ಥಿರವೆಂದು ಗರ್ವದಿ
ನಡೆಯದಿರೆಚ್ಚರಿಕೆ
ಕೊಡವನಂಧಕ ಪೊತ್ತು ನಡೆವಂತೆ ಅಧಿಕಾರ
ಕಡೆಉಬಒಲ್ಲ ಎಚ್ಚರಿಕೆ
ಕಡುಚಪಲನು ತಾನೆಂದು ಪರರವ
ಘಡಿಸದಿರೆಚ್ಚರಿಕೆ
ಬಡವರೆಡರ ಲಾಲಿಸದೆ ಮುಂದಕ್ಕೆ ಹೆಜ್ಜೆ
ಇಡಬೇಡವೆಚ್ಚರಿಕೆ ೧

ದೊರೆಗಳು ಬಲವುಯಂತೆಂದೆಲ್ಲರೊಳು ಹಗೆ
ತರವಲ್ಲ ಎಚ್ಚರಿಕೆ
ಉರಗನ ಮುತ್ತಿ ಕಟ್ಟಿರುವೆಯು ಕೊರೆದಂಥ
ತೆರನಪ್ಪುದೆಚ್ಚರಿಕೆ
ಗುರುಹಿರಿಯರ ಕಂಡು ಚರಣಕೆ ಶಿರಬಾಗಿ
ನಡೆಯುತಿರೆಚ್ಚರಿಕೆ
ಸಿರಿಯೆಂಬ ಸೊಡರಿಗೆ ಮಾನ್ಯರ ಅವಮಾನ
ಬಿರುಗಾಳಿ ಎಚ್ಚರಿಕೆ ೨

ಲೋಕಾಪವಾದಕೆ ಅಂಜಿ ನಡೆಯುವುದು ವಿ
ವೇಕ ಕೇಳೆಚ್ಚರಿಕೆ
ನಾಕೇಂದ್ರನಾದರೂ ಬಿಡದಪಕೀರ್ತಿ ಪ
ರಾಕು ಕೇಳೆಚ್ಚರಿಕೆ
ಕಾಕು ಮನುಜರ ಕೊಂಡೆಯ ಕೇಳೀ ಕೋಪದು
ದ್ರೇಕ ಬೇಡೆಚ್ಚರಿಕೆ
ಭೂಕಾಂತೆ ನಡು – ನಡುಗುವಳು ನಿಷ್ಠುರವಾದ
ವಾಕು ಕೇಳೆಚ್ಚರಿಕೆ ೩

ನಳ – ಮಾಂಧಾತರೆಂಬವರೇನಾದರು
ತಿಳಿದು ನೋಡೆಚ್ಚರಿಕೆ
ಅಳಿವುದು ಈ ದೇಹ ಉಳಿವುದೊಂದೇ ಕೀರ್ತಿ
ಇಳೆಯೊಳಗೆಚ್ಚರಿಕೆ
ಅಳಲಿಸಿ ಪರರನು ಗಳಿಸಿದಂಥ ಹೊನ್ನು
ಉಳಿಯದು ಎಚ್ಚರಿಕೆ
ಉಳಿದಲ್ಪಕಾಲದಿ ಬಡವರಾದವರನು
ಹಳಿಯದಿರೆಚ್ಚರಿಕೆ ೪

ಪರಸತಿ – ಪರಧನಕಳುಪಲು ಸಿರಿಮೊಗ
ದಿರುಹುವಳೆಚ್ಚರಿಕೆ
ನೆರೆ ಛಿದ್ರಕುಂಭದ ನೀರಿನಂತಾಯುಷ್ಯ
ಸರಿಯುವುದೆಚ್ಚರಿಕೆ
ಬರುವ ಹಾನಿವೃದ್ಧಿ ತನ್ನ ಕಾಲವ ಮೀರ
ಲರಿಯದು ಎಚ್ಚರಿಕೆ
ವರದ ಪುರಂದರವಿಠಲರಾಯನ
ಮರೆಯದಿರೆಚ್ಚರಿಕೆ ೫

## ೨೦೭

ನೆಚ್ಚದಿರೋ ಪ್ರಾಣಿ ಸಂಸಾರ ಸ್ಥಿರವೆಂದು
ಹುಚ್ಚು ಬುದ್ಧಿಯಲಿ ನೀ ಕೆಡಬೇಡ ಪ.

ಎಚ್ಚರಿತುಕೊಂಡು ಧರ್ಮದಿ ನಡೆ ಕಣ್ಣನು
ಮುಚ್ಚಿದ ಮೇಲುಂಟೆ – ನರಜನ್ಮ ಸ್ಥಿರವಲ್ಲ ಅ.ಪ

ಅಷ್ಟಕಂಬವನಿಕ್ಕಿ ತಾಕದುಪ್ಪರಿಗೆಯ
ಕಟ್ಟಿದ ಮನೆ ಇದ್ದಂತಿಹುದು
ಹೊಟ್ಟೆತುಂಬ ಉಣದೆ ಧನವ ಗಳಿಸಿ – ಬ
ಚ್ಚಿಟ್ಟಲ್ಲಿರದೆ ಸಂಗಡ ಬಾಹೋದಲ್ಲ ೧

ಅತಿ ಪ್ರೀತಿಯಿಂದ ಮದುವೆಯಾದ ಮೋಹದ
ಸತಿ ತನ್ನ ಮರಣದ ಕಾಲಕ್ಕೆ
ಗತಿಯಾವುದೆನುತಲೆ ಮರುಗಿದಪ್ಪಳಲ್ಲದೆ
ಜತೆಯಾಗಿ ನಿನ್ನ ಸಂಗಡ ಬಾಹಳಲ್ಲ ೨

ಒಂದೊಂದು ಪರಿಯ ಬುದ್ಧಿಯ ಪೇಳಿ ಸಲಹಿದ
ಕಂದ ನಿನ್ನವಸಾನ ಕಾಲಕೆ
ಮುಂದೇನು ಸಂಸಾರ ನಡೆಸಲುಪಾಯವೇ
ನೆಂದು ಚಿಂತಿಸುವ ಸಂಗಡ ಬಾಹನಲ್ಲ ೩

ನಂಟರಿಷ್ಟರು ಬಂಧು – ಬಳಗವು ಹರಿ ಕೊಟ್ಟು
ದುಂಟಾದರೆ ಬಂದು ಉಣ್ಣುವರು
ಕಂಟಕ ಬಂದರೆ ಹೊತ್ತು ಕಾಷ್ಠದೊಳಿಟ್ಟು
ಕಂಟಿಯ ತಂದೊಟ್ಟಿ ಸುಡುವರು ಕಾಣೊ ೪

ಇಂತಿದು ಒಂದು ಪ್ರಯೋಜನ ನಿನಗಿಲ್ಲ
ಅಂತ್ಯಕಾಲಕ್ಕೆ ಸಂಗಡ ಬಾಹುದು
ಕಂತುಜನಕ ನಮ್ಮ ಪುರಂದರವಿಠಲನ
ಸಂತತ ಧ್ಯಾನದೊಳಿರು ಕಾಣೋ ಮನುಜಾ ೫

## ೨೦೮

ನೆಚ್ಚಬೇಡ ಭಾಗ್ಯವನು ಹುಟ್ಟುಗೊಂಡ ಮನುಜಾ
ವೆಚ್ಚವಾಗಿ ಹೋಗುವುದು ಏಸೊಂದು ಬಗೆಯಲಿ ಪ.

ಮುತ್ತು – ಮಾಣಿಕ – ನವರತ್ನದ ಗದ್ದುಗೆಯು
ಎತ್ತ ನೋಡಲು ಸಿರಿ ಕೋ ಎನುತಲಿ
ಸತ್ಯ ಹರಿಶ್ಚಂದ್ರ ಮತ್ತೆ ಸುಡುಗಾಡಿನಲ್ಲಿ
ಎತ್ತುವ ಹಣೆಯಕ್ಕಿ ಹಾಗದ ಕಾಸ ೧

ದೇವತೆಗಳ ಕೈಯ ಸೇವೆಯ ಕೊಳುತಿರ್ದ
ರಾವಣನ ಬದುಕು ಮತ್ತೇನಾಯಿತು
ಜೀವದ ಪರಿಯರಿತು ನಾವು ದೊರೆಯೆಂಬುವುದೆ
ಸಾವಿನ ಮನೆಹೊಕ್ಕು ಸಾಹಸ ಪಡಲೇಕೆ ೨

ಹದಿನೆಂಟುಕೋಟಿ ಧನ ಉದಯಕೆ ಬರುತಿರಲು
ಒದಗಿತೆ ಆ ರಾಶಿ ದಿನ ಕರ್ಣಗೆ
ತುದಿ ಮಧ್ಯಾಹ್ನಕ್ಕೆ ದರಿದ್ರನೆನಿಸುವ
ಇದರಿಂದ ಕಡೆಗಂಡರಾರು ಜಗದೊಳಗೆ ೩

ಬೆಳ್ಳಿಯ ಗಿಣಿಲು ಬಂಗಾರದ ಹರಿವಾಣ
ಕುಳಿತಲ್ಲಿ ಕನಕದ ರಾಶಿಗಳು
ಗಳಿಗೆಗೆ ಈ ಭಾಗ್ಯ ಕಾಳಬೆಳುದಿಂಗಳು
ಉಳಿದವು ನಾ ಕಾಣೆ ಚಿರಲಕ್ಷ್ಮಿಯೆನಲು ೪

ಇಂತು ಈ ಪರಿಯಲನಂತರು ಹೋದರು
ಎಂತು ಪೇಳಲಿ ಅವರ ಪೆಸರುಗಳ
ಚಿಂತಾಯತ ಶ್ರೀ ಪುರಂದರವಿಠಲನ
ಸಂತತ ಪಾದಕಮಲವ ಭಜಿಸೊ ಮನುಜಾ ೫

## ೨೦೯

ಪತಿಭಕುತಿಯಿಲ್ಲದಿಹ ಸತಿಯ ಸಂಗ
ವ್ರತಗೆಟ್ಟು ಸುಖ ಪಡೆಯಲಿಲ್ಲವೊ ರಂಗ ಪ.

ಗಂಡ ಬಂದರೆ ಎದ್ದುನಿಲ್ಲದೆ ಆ ಕ್ಷಣದಿ
ಕಂಡಾಡಿ ಏಕವಚನಂಗಳನಾಗ

ಅಂಡಲೆದು ಮಾರ್ಮಲೆದು ಕಾಡಿಬೇಡುವ – ಇಂಥ
ಭಂಡುದೊತ್ತಿನ ಕೂಟ ಏಳುನಾಗರ ಕಾಟ ೧

ಒಂದು ತಂದರೆ ಮನೆಗೆ ಹತ್ತಾಗಿ ಭಾವಿಸದೆ
ತಂದರೆ ಹತ್ತು ಮನೆಯೊಳಗೊಂದ ಮಾಡಿ
ಇಂದಿಗೆ ಇಲ್ಲವೆಂದು ಮುಖವ ತಿರುಹುತಲಿ ಮದ
ದಿಂದ ಹೋಹಳು ನಾರಿ ಬಹು ದೊಡ್ಡ ಮಾರಿ ೨

ಮಕ್ಕಳಿಗೆ ಇಡಲಿಲ್ಲ ಮರಿಗಳಿಗೆ ತೊಡಲಿಲ್ಲ
ಇಕ್ಕುವಡೆ ಬೆಳ್ಳಿ – ಬಂಗಾರವಿಲ್ಲ
ಚಿಕ್ಕವಳು ನಾ ನಿನ್ನ ಕೈಪಿಡಿದು ಕೆಟ್ಟೆನೆಂಬ
ಮೂರ್ಖ ತೊತ್ತಿನ ಸಂಗ ಕುಲಕೆಲ್ಲ ಭಂಗ ೩

ತಾಯನು ಹೊರಡಿಸು ತಂದೆಯನು ತೆರಳಿಸು
ದಾಯಾದಿಯನು ಮನೆಯಲಿರಿಸಬೇಡ
ಬಾಯಿನ್ನು ಮನೆ ಕಟ್ಟಿ ಬೇರಿರುವ ನಾವೆಂಬ
ಮಾಯಾಕಾತಿಯ ಸಂಗ ಅಭಿಮಾನ ಭಂಗ ೪

ಇಷ್ಟನೆಲ್ಲವ ಬಿಟ್ಟು ಕೆಟ್ಟೆನೈ ನಾನಿಂದು
ಕಷ್ಟ ಸೆರೆಯೆನುವೆನೆ ಈ ಪರಿಯಲಿ
ಸೃಷ್ಟಿಗಧಿಕನಾದ ದಿಟ್ಟ ಶ್ರೀ ಪುರಂದರ
ವಿಠಲ ಪಶ್ಚಿಮದ ರಂಗಧಾಮ ೫

## ೨೧೦

ಪಥ ನಡೆಯದೈಯ ಪರಲೋಕಕ್ಕೈದುವರೆ, ಮ ಪ.

ನ್ಮಥನೆಂಬ ಕಳ್ಳ ಮಾರ್ಗವ ಕಟ್ಟಿ ಸುಲಿಯುತಿರೆ ಅ

ಗಿಳಿವಿಂಡು ಕೋಗಿಲೆ ವಸಂತ ಮಾರುತ ಭ್ರಮರ
ಬಲವೆರಸಿ ಮದನ ಮಾರ್ಗವ ಕಟ್ಟಲು
ಬಲವುಳ್ಳ ಭಟರು ಬಲು ಸನ್ಯಾಸಿ ಯೋಗಿಗಳು
ಸುಲಿಸಿಕೊಂಡರು ಕೆಲರು ಸಿಕ್ಕಿದರು ಕೆಲರು ೧

ತನು ರೋಮ ಗಿಡ ವೃಕ್ಷ ತಳಿತ ಭುಜಲತೆ ಮೆರೆಯೆ
ಘನ ಸಿಂಹ ಖಗ ಮೃಗಗಳಟ್ಟಣಿಸುವ
ವನಿತೆಯರ ಕಾಯಕಾಂತಾರದಲಿ ದುರ್ಗಮ
ಸ್ತನ ಪರ್ವತದ ಕಣಿವೆಯಲಿ ಕಟ್ಟಿ ಸುಲಿಯುತಿರೆ ೨

ಕಾಳಗದೊಳಿದಿರಲ್ಲ ಸುರನರೋರಗರ ಕ
ಟ್ಟಾಳು ಮನ್ಮಥನ ಛಲದಂಕ ಬಿರುದು
ಪೇಳಲೆನ್ನಳವಲ್ಲ ಪುರಂದರವಿಠಲನ
ಆಳು ಸಂಗಡವಿದ್ದರವಗೆ ಭಯವಿಲ್ಲ * ೩

## ೨೧೧

ಪರಾನ್ನವೇತಕೆ ಬಂತಯ್ಯ - ಎನಗೆ ಇಂದು ।
ಪರಾನ್ನವೇತಕೆ ಬಂತಯ್ಯ ಪ.

ಪರಾನ್ನವೇತಕೆ ಬಂತು ಪರಮೇಷ್ಠಿಜನಕನ ।
ಪರನೆಂದು ತಿಳಿಸದೆ ಪರಗತಿ ಕೆಡಿಸುವ ಅ.ಪ

ಸ್ನಾನ ಮಾಡಿಕೊಂಡು - ಕುಳಿತು ಬಹು ।
ಮೌನದಿಂದಿರಲೀಸದು ॥
ಶ್ರೀನಿವಾಸನ ಧ್ಯಾನಮಾಡದೆ ಮನವಿದು ।
ತಾನೆ ಓಡುವದು ಶ್ವಾನನೋಪಾದಿಯಲಿ ೧

ಜಪವ ಮಾಡುವ ಕಾಲದಿ - ಕರೆಯ ಬರೆ ।
ವಿಪರೀತವಾಗುವುದು ॥
ಸ್ವಪನದಂತೆ ಪೊಳೆದು ನನ್ನ ಮನಕೆ ಬಲು ।
ಸುಪಥವ ತಪ್ಪಿಸಿ ಅಪಗತಿ ಕೊಡುವಂಥ ೨

ಪ್ರಸ್ಥದ ಮನೆಯೊಳಗೆ - ಕರೆಯದೆ ಪೋಗಿ ।
ಸ್ವಸ್ಥದಿ ಕುಳಿತುಕೊಂಡು ॥

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ವಿಸ್ತಾರವಾಗಿ ಹರಟೆಯನೆ ಬಡಿದು ಪ್ರ ।
ಶಸ್ತವಾಯಿತು ಎಂದು ಮಸ್ತಕ ತಿರುವುವ ೩

ಯಜಮಾನನು ಮಾಡದ - ಪಾಪಂಗಳ ।
ವ್ರಜವು ಅನ್ನದೊಳಿರಲು ॥
ದ್ವಿಜರು ಭುಂಜಿಸಲಾಗಿ ಅವರ ಉದರದೊಳು ॥
ನಿಜವಾಗಿ ಸೇರುವುದು ಸುಜನರು ಲಾಲಿಸಿ ೪

ಮಾಡಿದ ಮಹಾಪುಣ್ಯವು - ಓದನಕಾಗಿ - ।
ಕಾಡಿಗೊಪ್ಪಿಸಿ ಕೊಡುತ ।
ರೂಢಿಗಧಿಕನಾದ ಪುರಂದರವಿಠಲನ ।
ಪಾಡಿ ಪೊಗಳಿ ಕೊಂಡಾಡಿಕೊಂಡಿರದಂತೆ ೫

## ೨೧೨

ಪಾಪಿಗೇತಕೆ ಪರಮಾತ್ಮ ಬೋಧ
ಕೋಪಿಗೇತಕೆ ಸುಗುಣ - ಶಾಂತ ಬುದ್ಧಿ ಪ.

ಹಂದಿಗೆ ಗಂಧವೇಕೆ ಅಂಧಕೆ ಕನ್ನಡಿಯೇಕೆ
ಮಂದಮತಿ ಮನುಜರಿಗೆ ಮಂತ್ರವೇಕೆ
ತಂದೆ - ತಾಯಂದಿರಿಗೆ ಕುಂದು ತರುವ ಮಗಳೇಕೆ
ನಿಂದು ವಾದಿಸುವಂಥ ಸತಿಯು ತಾನೇಕೆ ೧

ಕತ್ತೆಗಮೃತವೇಕೆ ಎತ್ತಿಗೆ ಕರೆಹವೇಕೆ
ತೊತ್ತಿಗೆ ಛತ್ರದ ನೆರಳೇತಕೆ
ಕುತ್ತಿಗೆ ಕೊಯ್ಯುವನ ಸೊಗಸು ಮಾತುಗಳೇಕೆ
ಸತ್ಯವಿಲ್ಲದೆ ನುಡಿವ ಯೋಗಿಯೇಕೆ ೨

ಷಂಡಗೆ ಹೆಂಡತಿಯೇಕೆ ತೊಂಡರಿಗೆ ಖಂಡೆಯವೇಕೆ
ಮುಂಡೆಮೋಳಿಗೆ ಮುತ್ತಿನ ದಂಡೆಯೇಕೆ
ಮಂಡಳದೊಳಗೆ ಶ್ರೀ ಪುರಂದರವಿಠಲನ
ಕಂಡು ಭಜಿಸದ ಮನುಜರಿದ್ದೇತಕೆ ೩

## ೨೧೩

ಪಾಪಿ ಬಲ್ಲನೆ ಪರರ ಸುಖ – ದುಃಖದಿಂಗಿತವ
ಕೋಪಿ ಬಲ್ಲನೆ ದಯಾದಾಕ್ಷಿಣ್ಯವ ಪ.

ಹೇನು ಬಲ್ಲುದೆ ಮುಡಿದ ಹೂವಿನಾ ಪರಿಮಳವ
ಶ್ವಾನ ಬಲ್ಲುದೆ ರಾಗಭೇದಂಗಳ
ಮೀನು ಬಲ್ಲುದೇ ನೀರು ಚವುಳು – ಸವಿಯೆಂಬುದನು
ಹೀನ ಬಲ್ಲನೆ ತನಗೆ ಉಪಕಾರ ಮಾಡಿದುದ? ೧

ಕತ್ತೆ ಬಲ್ಲುದೆ ತಾನು ಹೊತ್ತಿರುವ ನಿಧಿಯನ್ನು
ಮೃತ್ಯು ಬಲ್ಲುದೆ ದಯಾ – ದಾಕ್ಷಿಣ್ಯವ
ತೊತ್ತು ಬಲ್ಲಳೆ ಹೀನ – ಮಾನದಭಿಮಾನವನು
ಮತ್ತೆ ಬಲ್ಲುದೆ ಬೆಕ್ಕು ಮನೆಯ ಮೀಸಲನು? ೨

ಹೇಡಿ ತಾ ಬಲ್ಲನೇ ರಣರಂಗ ಧೀರವನು
ಕೋಡಗವು ಬಲ್ಲುದೇ ರತ್ನದಾಭರಣ
ಬೇಡಿದುದನೀವ ಪುರಂದರವಿಠಲನಲ್ಲದೆ
ನಾಡ ದೈವಗಳೆಲ್ಲ ಕೊಡಬಲ್ಲುವೇ? ೩

## ೨೧೪

ಬಡವಾ ನಿನಗೊಬ್ಬರ ಗೊಡವೆ ಏತಕೊ ।
ಒಡವೆ ವಸ್ತು ತಾಯಿತಂದೆ ಒಡೆಯ ಕೃಷ್ಣನೆಂದು ನಂಬೋ ಪ.

ಒಪ್ಪತ್ತು ಭಿಕ್ಷವ ಬೇಡು, ಒಬ್ಬರಿಗೆ ಒಂದಿಷ್ಟು ನೀಡು ।
ಅಪ್ಪನಾದಚ್ಯುತನ ನೋಡು, ಆನಂದದಲಿ ಪೂಜೆಮಾಡು ೧

ಮಡದಿ ಮಕ್ಕಳು ಹೆದರಿಸಿದರೆ ಮುಂಕೊಂಡು ನೀ
ಹೋದಿಯೆ ಕಾಣೋ ।
ಅಡಕೆಯ ಹೋಳಿಗೆ ಹೋದ ನಾಚಿಕೆ ಆನೆಯ
ಕೊಟ್ಟರೆ ಬಾರದೊ ೨

ಬಲ್ಲೆ ನಿನ್ನ ಎಲ್ಲ ಮಾತು ಕ್ಷುಲ್ಲಕತನದ ಭ್ರಾಂತು ।
ಎಲ್ಲರ ಮನೆಯ ದೋಸೆ ತೂತು ಅಲ್ಲವೇನು
ನೋಡಿಕೊ ಈ ಮಾತ ೩

ವೇದ – ತರ್ಕವೆಲ್ಲವು ಭ್ರಾಂತಿ –
ಆದಿದೇವನ ಕಾಣದನಕ ।
ಬೂದಿಮುಚ್ಚಿದ ಕೆಂಡದಂತೆ ಬುದ್ಧಿಯಲಿರು
ನಾ ಹೇಳೇನಂತೆ ೪

ದೊರೆತನವು ಏನು ಹೆಚ್ಚು – ಸಿರಿಯು ಏನು
ಪಾವನ ಮೆಚ್ಚು ।
ವರದ ಪುರಂದರವಿಠಲರಾಯನು ಪರಿಪಾಲಿಪನೆಂದು ನೆಚ್ಚು ೫

## ೨೧೫

ಬರಿದೆ ಬಯಸದಿರಿಹಲೋಕಸುಖವೆಂಬ ಅರಗಿನ ಪಾಯಸವ ।
ಶರಧಿಶಯನನ ಬೇಡೊ ಪರಲೋಕಸುಖವೆಂಬ
ಸೇವಿಗೆ ಪಾಯಸವ ಪ.

ಮುಂದರಿಯದೆ ಮಾಳ್ಪ ಮೂಢನೃಪನ ಸೇವೆ ಮುಗ್ಗುರಾಗಿಯ ಹಿಟ್ಟು ।
ಮಂದಮತಿಯೆ ನೀನನ್ಯರಲಿ ಬಯಸುವ ನೀಚಮಾರ್ಗವ ಬಿಟ್ಟು ॥
ಕಂದರ್ಪಜನಕನ ಕಿಂಕರನೆಂಬುವ ಕಲಸೋಗರ ಕಟ್ಟು ।
ಸಂದೇಹಿಸದೆ ಪರಾತ್ಪರ ವಸ್ತು ಮುಕುಂದನಂಘ್ರಿಯ ತಟ್ಟು ೧

ಅಗ್ಗದಾಸೆಗೆ ಸಂಗ್ರಹಿಸದಿರಘವೆಂಬ ಅಡಿಗಂಟು ದವಸವನು ।
ಬಗ್ಗನುಳಿದು ಸಂಪಾದಿಸು ಪರವೆಂಬ ಪುಣ್ಯದ ದವಸವನು ॥
ಯೋಗ್ಯರನರಿಯದೆ ಏತಕೆ ಬೇಡುವೆ ಸಾಕಾರ ಕ್ಲೇಶವನು ।
ಕುಗ್ಗಗೊಡದೆ ಸಂಸಾರವೆಂತೆಂಬುವ ಕೋಟಲೆ ತಪ್ಪಿಸುವನು ೨

ಸಕ್ಕರಿ ಚಿಲಿಪಾಲು ಘೃತ ರಾಜಾನ್ನಕೆ ಸವಿಯೀವ
ಹರಿಕಥೆಯ – ಬಿಟ್ಟು ।

ಅಕ್ಕರೆಯಿಂದಪೇಕ್ಷಿಸುವರೆ ನೀ ಅಲ್ಪರ ಸಂಗತಿಯ ॥
ಸೊಕ್ಕೊಳಿತಲ್ಲೆಲೊ ಮದಡು ಜೀವಾತ್ಮನೆ ಸ್ವಾಮಿಕಾರ್ಯಸ್ಥಿತಿಯ ।
ಗಕ್ಕನರಿತು ಸೇರು ಪುರಂದರವಿಠಲನ ಚರಣಕಮಲದ್ವಿತಯ ೩

## ೨೧೬

ಬಲ್ಲಿದ ನೀನೆಂದು ಬಡವರ ಬಾಯನು ಬಡಿಯದಿರೆಚ್ಚರಿಕೆ
ಎಳ್ಳಷ್ಟು ತಪ್ಪಿದರೆ ಯಮನವರೆಳೆದೊಯ್ವರು ಎಚ್ಚರಿಕೆಚ್ಚರಿಕೆ ಪ.

ಮಾಡು ದಾನ – ಧರ್ಮ ಪರ ಉಪಕಾರವ ಮರೆಯದಿರೆಚ್ಚರಿಕೆ
ಕೇಡನೆಣಿಸಬೇಡ ನಂಬಿದ ಠಾವಿಗೆ ಕೆಡುವೆ ಮತ್ತೆಚ್ಚರಿಕೆ
ಮೂಢರ ಒಡನಾಡಿ ಮುಂದರಿಯದೆ ನೀನು ಮುನಿಯದಿರೆಚ್ಚರಿಕೆ
ನೋಡಿ ನಡೆವ ಸುಗುಣರ ನೋಡಿ ನಡೆಯೊ
ನೀ ನಟನೆ ಬೇಡಚ್ಚರಿಕೆ ೧

ಹೊನ್ನು – ಹೆಣ್ಣು – ಮಣ್ಣು ತನ್ನನೆ
ಅಣಕಿಸಿ ಹೋಹುವು ಎಚ್ಚರಿಕೆ
ಮುನ್ನ ಮಾಡಿದ ಫಲದಿಂದಲಿ ಬಂದೆಯೊ ಮುಂದೆ ಇನ್ನೆಚ್ಚರಿಕೆ
ಚೆನ್ನಾಗಿ ತಾ ಬಾಳಿ ಬದುಕುವೆನೆಂತೆಂಬ ಚೇಷ್ಟೆ ಬೇಡೆಚ್ಚರಿಕೆ
ಬೆನ್ನನು ಬಡಿಯದೆ ಬಿಡುವರೆ ಯಮನವರು ಮರೆಯದಿರೆಚ್ಚರಿಕೆ ೨

ಬಾಳಿ ಬದುಕಿ ಸಿರಿವಾಹಗೆ ಟವಳಿಯ ಬಣಗು ಬೇಡದೆಚ್ಚರಿಕೆ
ಹಾಳು ಬದುಕಿಗಾಗಿ ಹಲವರ ಕೂಡಣ ಹಗರಣ ಬೇಡಚ್ಚರಿಕೆ
ಕಾಲನವರು ಬಂದು ಆವಾಗ ಕರೆವರೊ ಕಾಣದು ಎಚ್ಚರಿಕೆ
ಶ್ರೀಲೋಲ ಪುರಂದರವಿಠಲರಾಯನ ಮರೆಯದಿರೆಚ್ಚರಿಕೆ ೩

## ೨೧೭

ಬಾತೆಗೆ ಬಾರದ ವಸ್ತು ಬಹಳಿದ್ದರೇನು
ಹೋತಿನ ಕೊರಳೊಳಗೆ ಮೊಲೆಯಿದ್ದರೇನು ? ಪ.

ತಾನು ಉಣ್ಣದ ದ್ರವ್ಯ ತಾಳೆಯುದ್ದ ಇದ್ದರೇನು?
ದಾನವಿಲ್ಲದ ಮನೆಯು ದೊಡ್ಡದಾದರೇನು ?
ಹೀನ ಕುಲದವಂಗೆ ಹಿರಿತನ ಬಂದರೇನು
ಶ್ವಾನನ ಮೊಲೆಯೊಳು ಹಾಲಿದ್ದರೇನು ೧

ವಾದಿಸುವ ಮಗನು ಒಯ್ಯಾರದಲಿದ್ದರೇನು
ಕಾದುವ ಸತಿ ಕೆಲದೊಳಿದ್ದರೇನು ?
ಕ್ರೋಧವನು ಅಳಿಯದ ಸೋದರನು ಇದ್ದರೇನು
ಮಾದಿಗರ ಮನೆಯಲಿ ಮದುವೆ ಆದರೇನು ೨

ಹೋಗದೂರಿನ ಹಾದಿ ಕೇಳಿ ಮಾಡುವುದೇನು
ಮೂಗನ ಕೂಡ ಏಕಾಂತವಿನ್ನೇನು ?
ಯೋಗಿ ಶ್ರೀ ಪುರಂದರವಿಠಲನ ನೆನೆಯದವ
ಯೋಗಿಯಾದರೆ ಏನು ಜೋಗಿಯಾದರೆ ಏನು ? ೩

## ೨೧೮

ಬುತ್ತಿಯ ಕಟ್ಟೊ – ಮನುಜಾ ॥
ಬುತ್ತಿಯ ಕಟ್ಟೊ ಪ.

ಬುತ್ತಿಯನ್ನು ಕಟ್ಟಿದರೆ ।
ಎತ್ತಲಾದರುಣ್ಣಬಹುದು ಅಪ

ಧರ್ಮವೆಂಬ ಮಡಿಕೆಯಲ್ಲಿ ।
ನಿರ್ಮಲ ಗಂಗೆಯನು ತುಂಬಿ ॥
ಸುಮ್ಮಾನದಿಂದಲಿ ಬೇಗ ।
ಒಮ್ಮಾನಕ್ಕಿಯ ಅನ್ನಬಾಗಿ ೧

ಅರಿವು ಎಂಬ ಅರಿವೆಯ ಹಾಸಿ ।
ಗರಿಮೆ ಹಾಲ – ಮೊಸರ ತಳಿದು ॥
ಪರಮವೈರಾಗ್ಯದಿಂದ ।
ಸಿರಿಹರಿಗರ್ಪಿತವೆಂದು ೨

ಕರ್ತು ಪುರಂದರವಿಠಲನ ।
ತತ್ತ್ವವೆಂಬ ಬುತ್ತಿಯನ್ನು ॥
ಹತ್ತಿರ ತಂದಿಟ್ಟುಕೊಂಡು ।
ನಿತ್ಯವುಂಡು ತೃಪ್ತಿಪಡೆಯೊ ೩

## ೨೧೯

ಬೇವ ಬೆಲ್ಲದೊಳಿಡಲೇನು ಫಲ
ಹಾವಿಗೆ ಹಾಲೆರೆದೇನು ಫಲ ? ಪ.

ಕುಟಿಲವ ಬಿಡದಲೆ ಕುಜನರು ಮಂತ್ರವ
ಪಠನೆಯ ಮಾಡಿದರೇನು ಫಲ?
ಸಟೆಯನ್ನಾಡುವ ಮನುಜರು ಮನದಲಿ
ವಿಠಲನ ನೆನೆದರೆ ಏನು ಫಲ ? ೧

ಮಾತಾ – ಪಿತೃಗಳ ಬಳಲಿಸುವಾತನು
ಯಾತ್ರೆಯ ಮಾಡಿದರೇನು ಫಲ ?
ಘಾತಕತನವನು ಬಿಡದೆ ನಿರಂತರ
ನೀತಿಯನೋದಿದರೇನು ಫಲ ? ೨

ಕಪಟತನದಲಿ – ಕಾಡುವರೆಲ್ಲರು
ಜಪಗಳ ಮಾಡಿದರೇನು ಫಲ ?
ಕುಪಿತ ಬುದ್ಧಿಯನು ಬಿಡದೆ ನಿರಂತರ
ಉಪವಾಸ ಮಾಡಿದರೇನು ಫಲ ? ೩

ಪತಿಗಳ ನಿಂದಿಸಿ ಬೊಗಳುವ ಸತಿಯರು
ವ್ರತಗಳ ಮಾಡಿದರೇನು ಫಲ ?
ಅತಿಥಿಗಳೆಯಡೆಯಲಿ ಭೇದವ ಮಾಡಿ ಸ
ದ್ಗತಿಯನು ಬಯಸಿದರೇನು ಫಲ ? ೪

ಹೀನ ಗುಣಂಗಳ ಬಿಡದೆ ನದಿಯೊಳು
ಸ್ನಾನವ ಮಾಡಿದರೇನು ಫಲ ?

ಜ್ಞಾನಿ ಪುರಂದರವಿಠಲನ ನೆನೆಯದೆ
ಮೌನವ ಮಾಡಿದರೇನು ಫಲ? ೫

## ೨೨೦

ಭಾಷೆ ಹೀನರ ಆಸೆ ಪ್ರಾಣ ಗಾಸಿ ।
ಬೇಸತ್ತು ಬೇಲಿ ಮೇಲೊರಗಿದಂತೆ ಪ.

ಚಳಿಗೆ ನಡುಗುತ ಹೋಗಿ ಜಲದೊಳಗೆ ಪೊಕ್ಕಂತೆ ।
ಮಳೆಯ ರಭಸಕೆ ಮರವನೇರಿ ಕುಳಿತಂತೆ ।
ಹುಳುವಿನಟ್ಟುಳಿಗಂಜಿ ಹುತ್ತಿನೊಳು ಹೊಕ್ಕಂತೆ ।
ಎಳೆನರಿಯು ಒಂಟೆಯಾ ತುಟಿಗೆ ಜೋತಂತೆ ೧

ಹಸಿವೆಗಾರದೆ ಬೆಕ್ಕು ಹತ್ತಿಯನು ತಿಂದಂತೆ ।
ತೃಷೆಗಾರದವ ತೆವರ ತೋಡಿದಂತೆ ॥
ಬಿಸಿಲಿಗಾರದೆ ಕೋತಿ ಬಂಡೆ ಮೇಲ್ಕುಳಿತಂತೆ ।
ಕುಸುಬಿಯ ಹೊಲದೊಳಗೆ ಕಳ್ಳ ಪೊಕ್ಕಂತೆ ೨

ಹುಸಿಯನಾಡುವರಾಸೆ ಪುರುಷ ನಾರಿಯ ವೇಷ
ಬಿಸಿಲುಗುದುರೆಯ ಭಾವ ಒಂದೆ ಕಾಣೊ ॥
ಬಿಸಜಾಕ್ಷ ವರದ ಶ್ರೀ ಪುರಂದರವಿಠಲನ ।
ಎಸೆವ ಪಾದದ ಸೇವೆ ಪರಮಸುಖ ಮನುಜಾ ೩

## ೨೨೧

ಮಡಿ ಮಡಿ ಮಡಿಯೆಂದು ಅಡಿಗಡಿಗೆ ಹಾರುವೆ ।
ಮಡಿ ಮಾಡುವ ಬಗೆ ಬೇರುಂಟು ಪ.
ಪೊಡವಿಪಾಲಕನ ಧ್ಯಾನ ಮಾಡುವುದು ।
ಬಿಡದೆ ಭಜಿಸುವುದು ಅದು ಮಡಿಯೊ ಅಪ

ಬಟ್ಟೆಯ ನೀರೊಳಗಿಟ್ಟು ಒಣಗಿಸಿ ।
ಉಟ್ಟರೆ ಅದು ತಾ ಮಡಿಯಲ್ಲ ॥

ಹೊಟ್ಟೆಯೊಳಗಿನ ಕಾಮ – ಕ್ರೋಧಗಳ ।
ಬಿಟ್ಟರೆ ಅದು ತಾ ಮಡಿಯೊ ೧

ಪರಧನ ಪರಸತಿ ಪರನಿಂದೆಗಳನು ।
ಜರೆದಹಂಕಾರಗಳನೆ ತೊರೆದು ॥
ಹರಿಹರಿಯೆಂದು ದೃಢದಿ ಮನದಲಿ
ಇರುಳು ಹಗಲು ಸ್ಮರಿಸಲು ಮಡಿಯೊ ೨

ಎಚ್ಚರವಿಲ್ಲದೆ ಮಲ ಮೂತ್ರ ದೇಹವ ।
ನೆಚ್ಚಿ ಕೆಡಲು ಬೇಡಲೊ ಮನವೆ ॥
ಅಚ್ಚುತಾನಂತನ ನಾಮವ ಮನಗೊಂಡು ।
ಸಚ್ಚಿಂತೆಯಲಿರುವುದೆ ಮಡಿಯೊ ೩

ಭೂಸುರರು ಮಧ್ಯಾಹ್ನಕಾಲದಲಿ ।
ಹಸಿದು ಬಳಲಿ ಬಂದರೆ ಮನೆಗೆ ॥
ಬೇಸತ್ತು ನಮಗೆ ಗತಿಯಿಲ್ಲ ಹೋಗೆಂದು ।
ಹಸನಾಗಿ ಉಂಬುವುದು ಅದು ಮಡಿಯೊ ೪

ದಶಮಿ – ದ್ವಾದಶಿಯ ಪುಣ್ಯಕಾಲದಲಿ ।
ವಸುದೇವ ಸುತನ ಪೂಜಿಸದೆ ॥
ದೋಷಕಂಜದೆ ಪರರನ್ನ ಭುಜಿಸಿ ಯಮ – ।
ಪಾಶಕೆ ಬೀಳ್ವುದು ಹುಸಿಮಡಿಯೊ ೫

ಸ್ನಾನ – ಸಂಧ್ಯಾನ ಮೊದಲಾದ ಕರ್ಮಗಳೆಲ್ಲ ।
ಜ್ಞಾನ – ಮಾನ – ಸುಮ್ಮಾನದಿಂದ ॥
ದೀನವಂದ್ಯನ ಸುಜನ ಸಂತರ್ಪಣ ।
ಅನುದಿನ ಮಾಡುವುದು ಘನಮಡಿಯೊ ೬

ಗುರು ಹಿರಿಯರ ಹರಿದಾಸರ ನೆನೆದು ।
ಚರಣಕೆರಗಿ ಭಯ ಭಕ್ತಿಯಿಂದ ॥
ಪರಿಪರಿ ವಿಧದಲಿ ಪುರಂದರವಿಠಲನ ।
ನೆರನೆಂಬುವುದು ಉತ್ತಮ ಮಡಿಯೊ ೭

## ೨೨೨

ಮಡಿ ಮಡಿ ಮಡಿಯೆಂದು ಮುಮ್ಮಾರು ಹಾರುತಿ ।
ಮಡಿಯೆಲ್ಲಿ ಬಂದಿತೊ ಬಿಕನಾಶಿ ಪ.

ಮಡಿಯು ನೀನೆ – ಮೈಲಿಗೆ ನೀನೆ – ।
ಸುಡಲಿ ನಿನ್ನ ಮಡಿ ಬಿಕನಾಶಿ ಅಪ

ಎಲವು – ಚರ್ಮ – ಮಲ – ಮೂತ್ರ ಗುಂಡಿಯಲಿ ।
ನಲಿಯುತ ನಿಂತೆಯೊ ಬಿಕನಾಶಿ ॥
ನೆಲೆಗೊಂಡ ನವದ್ವಾರದ ಹೊಲೆಯೊಳು ।
ಅಳಲುತ ನೀ ಬಿದ್ದೆ ಬಿಕನಾಶಿ ೧

ಹುಟ್ಟಲು ಸೂತಕ ಸಾಯಲು ಸೂತಕ ।
ನಟ್ಟನಡುವೆ ಬಂತೆ ಬಿಕನಾಶಿ ॥
ಬಿಟ್ಟು ಬಿಡದೆ ಕಾವೇರಿಯ ಮುಳುಗಲು ।
ಮುಟ್ಟು ಹೋಹುದೆ ಬಿಕನಾಶಿ ೨

ಚರ್ಮವ ತೊಳೆದರೆ ಕರ್ಮವು ಹೋಹುದೆ ।
ಮರ್ಮವ ತಿಳಿಯದೆ ಬಿಕನಾಶಿ ॥
ಬೊಮ್ಮನಯ್ಯ ಪುರಂದರವಿಠಲನ ಪಾಡಿ ।
ನಿರ್ಮಲದಿ ಬಾಳೆಲೊ ಬಿಕನಾಶಿ ೩

## ೨೨೩

ಮನವ ಶೋಧಿಸಬೇಕು ನಿಚ್ಚ – ದಿನ – ।
ದಿನದಿ ಮಾಡುವ ಪಾಪ ಪುಣ್ಯದ ವೆಚ್ಚ ಪ

ಧರ್ಮ ಅಧರ್ಮ ವಿಂಗಡಿಸಿ – ದು – ।
ಷ್ಕರ್ಮಕೆ ಏರಿದ ಬೇರ ಕತ್ತರಿಸಿ ॥
ನಿರ್ಮಲಾಚಾರದಿ ಚರಿಸಿ – ಪರ – ।
ಬೊಮ್ಮ ಮೂರುತಿ ಪಾದಕಮಲವ ಭಜಿಸಿ ೧

ತನುವ ದಂಡಿಸಿ ಒಮ್ಮೆ ಮಾಣೊ – ನಿನ್ನ – ।
ಮನವ ಶೋಧಿಸಿ ಪರಮಾತ್ಮನ ಕಾಣೊ ॥
ನೀನು ನಿನ್ನೊಳಗೆ ಜಾಣನೊ – ಮುಕುತಿ – ।
ಯೇನೂ ದೂರಿಲ್ಲವೊ ಒಂದೇ ಗೇಣೊ ೨

ಆತನ ಭಕ್ತರಿಗೆ ಕೇಡಿಲ್ಲ – ಅವ – ।
ಪಾತಕ – ಪತಿತಸಂಗವ ಮಾಡ ಸಲ್ಲ ॥
ನೀತಿವಂತರು ಕೇಳಿರೆಲ್ಲ – ನಮ –।
ಗೀತನೆ ಗತಿಯೀವ ಪುರಂದರವಿಠಲ ೩

## ೨೨೪

ಮನವೆ ಚಂಚಲಮತಿಯ ಬಿಡು – ನಮ್ಮ ।
ವನಜನಾಭನ ಪಾದಭಜನೆಯ ಮಾಡು ಪ.

ಬಡಮನುಜಗೆ ಬಾಯಬಿಡುವ ದೈನ್ಯದಲವನ ।
ಅಡಿಗಳಿಗೆರಗಲು ಕೊಡುವನೇನೊ ॥
ಕಡಲಶಯನ ಜಗದೊಡೆಯನ ನೆನೆಯಲ್ಕೆ – ।
ಪಿಡಿದು ತಾ ಸಲಹುವ ಬಿಡದಲೆ ಅನುಗಾಲ ೧

ಬಲ್ಲಿದ ಭಕುತರ ಬಲ್ಲವ ಬಹುಸಿರಿ ।
ಯುಳ್ಳ ಕರುಣಿ ಲಕ್ಷ್ಮೀನಲ್ಲನಿರೆ ॥
ಕ್ಷುಲ್ಲಕರನು ಕಾಯಸಲ್ಲದೆಂದೆಂದಿಗು
ನಿಲ್ಲು ಹರಿಯ ಪಾದದಲ್ಲಿ ತಲ್ಲಣಿಸದೆ ೨

ಮುಗಿಲು ಮೇಲದೆಗಡ ಅಗಣಿತವಾದಾಪ – ।
ತ್ತುಗಳು ಬಂದಡರಲು ನಗುತಲಿರು ॥
ಜಗದಧೀಶನ ಮಹಿಮೆಗೆ ನಮೋ ನಮೋ ಎಂದು ।
ಪೊಗಳುತ ಬಾಳು ನೀ ಅಘಗಳ ಗಣಿಸದೆ ೩

ಆವಾವ ಕಾಲಕೆ ದೇವನಿಚ್ಛೆಯಿಂದ ।
ಆವಾವುದು ಬರೆ ನಿಜಸುಖವೆನ್ನು ॥

ಶ್ರೀವರ ಅನಾದಿಜೀವರ ಕ್ಲಪ್ತದಂತೆ ।
ಈವನು ನಿಜಸ್ವಭಾವ ಬಿಡದೆ ನಿತ್ಯ ೪

ಕೇಶವಾಚ್ಯುತ ಶ್ರೀನಿವಾಸ ಮುರಾರೇ ।
ದೋಷರಹಿತ ದೀನ ಪೋಷಕನೆನ್ನು ॥
ಮೋಸಗೊಳಿಪ ಭವಪಾಶವ ಖಂಡಿಪ ।
ಶ್ರೀಶ ಪುರಂದರವಿಠಲನು ಜಗಕಿರೆ ೫

## ೨೨೫

ಮನುಜ ಶರೀರವಿದೇನು ಸುಖ – ಇದ
ನೆನೆದರೆ ಘೋರವಿದೇನು ಸುಖ ಪ.

ಜನನ – ಮರಣ ಮಲಕೂಪದಲ್ಲಿದ್ದು
ಅನುಭವಿಸುವುದು ಇದೇನು ಸುಖ
ತನುವಿದ್ದಾಗಲೇ ಹೃದಯದ ಶೌಚದ
ಸ್ತನಗಳನುಂಬುವುದೇನು ಸುಖ ೧

ದಿನವು ಹಸಿವು ತೃಷೆ ಘನ ರೋಗಂಗಳ
ಅನುಭವಿಸುವುದು ಇದೇನು ಸುಖ
ನೆನೆಯಲು ನಿತ್ಯ ನೀರ್ಗುಳ್ಳೆಯಂತಿಪ್ಪ
ತನುಮಲಭಾಂಡವಿದೇನು ಸುಖ ೨

ಪರಿಪರಿ ವಿಧದಲಿ ಪಾಪವ ಗಳಿಸುತ
ನರಕಕೆ ಬೀಳುವುದೇನು ಸುಖ
ಪುರಂದರವಿಠಲನ ಮನದಿ ನೆನೆದು ಸ
ದ್ಧರುಮದೊಳ್ ನಡೆದರೆ ಆಗ ಸುಖ ೩

## ೨೨೬

ಮರುಳಾಟವೇಕೊ – ಮನುಜಾ ।
ಮರುಳಾಟವೇಕೊ? ಪ.

ಊರ್ಧ್ವ ಪುಂಡ್ರವಿಲ್ಲದ ಮುಖವ ತಿದ್ದಿ ನೋಡಲೇಕೊ ।
ಶುದ್ಧ ಸಾತ್ತ್ವಿಕವಿಲ್ಲದನ ಬುದ್ಧಿ ಏತಕೊ ॥
ಕದ್ದು ಹೊಟ್ಟೆಹೊರಕೊಂಬುವಗೆ ಶುದ್ಧ ಶೀಲವೇಕೊ ।
ಮಧ್ವಶಾಸ್ತ್ರ ಓದದವನ ವಿದ್ಯೆ ಏತಕೊ – ಮನುಜಾ ೧

ಮೃತ್ತಿಕೆ ಶೌಚವಿಲ್ಲದವಗೆ ಮತ್ತೆ ಸ್ನಾನ – ಜಪವೇಕೊ ।
ಹಸ್ತಕಟ್ಟಲರಿಯದವಗೆ ಅಗ್ನಿಹೋತ್ರವೇತಕೊ ॥
ತೊತ್ತು ಹೋಗುವವಗೆ ಪರತತ್ತ್ವವಿಚಾರವೇಕೋ ।
ಕರ್ತೃ ಕೃಷ್ಣನ ನೆನೆಯದವನ ಉತ್ತಮತನವೇಕೊ ೨

ಹಸಿವೆ ತೃಷೆಯ ತಾಳದವನ ಹುಸಿಯ ವೈರಾಗ್ಯವೇಕೊ ।
ವಿಷಯ ಮೆಚ್ಚಿದವಗೆ ಪರದ ಕುಶಲವೇತಕೊ ॥
ಹುಸಿಜಪಗಳ ಮಾಡುವವಗೆ ಮುಸುಕಿನ ಡಂಬಕವೇಕೊ ।
ಕುಸುಮನಾಭಗರ್ಪಿಸದ ಅಶನವೇತಕೊ – ಮನುಜಾ ೩

ಸೂಳೆಗಾರನಿಗೆ ತುಳಸಿ ಮಾಲೆಯ ಶೃಂಗಾರವೇಕೊ ॥
ಶ್ರೀಲೋಲನ ನೆನೆಯದವನ ಬಾಳುವೆಯೇತಕೊ ।
ಮೂಲಮಂತ್ರವರಿಯದವಗೆ ಮೇಲೆ ದೇವತಾರ್ಚನೆ ಏಕೊ ।
ಸಾಲಿಗ್ರಾಮದಭಿಷೇಕವಿಲ್ಲದ ತೀರ್ಥವೇತಕೊ ಮನುಜಾ ೪

ಕಂಡ ನಾರಿಯೀಕ್ಷಿಸುವ ಲಂಡಗೆ ಪುರಾಣವೇತಕೋ ।
ಭಂಡ ಮಾತನಾಡುವನ ಪಾಂಡಿತ್ಯವೇತಕೊ ।
ಪುಂಡರೀಕವರದ ಶ್ರೀ ಪುರಂದರವಿಠಲನ ।
ಕಂಡು ಭಜಿಸಲರಿಯದವನ ವಿತಂಡಬುದ್ಧಿಯೇತಕೋ ೫

## ೨೨೭

ಮರೆಯದಿರೆಲೆ ಮನವಿಲ್ಲಿ – ಯಮ
ಪುರಿಗೆ ಒಯ್ದು ಬಾಧಿಸುತಿಹರಲ್ಲಿ ಪ.

ಪರನಾರಿಯರ ಸಂಗವಿಲ್ಲಿ – ಉಕ್ಕು
ಎರೆದ ಸತಿಯರ ತಕ್ಕೈಸುವರಲ್ಲಿ

ಗುರು – ಹಿರಿಯರ ನಿಂದೆಯಿಲ್ಲಿ – ಬಾಯೊ
ಳೆರದು ಸೀಸವ ಕಾಸಿ ಹೊಯಿಸುವರಲ್ಲಿ ೧

ಉಂಡ ಮನೆಯ ಕೊಂಬುದಿಲ್ಲಿ – ಎದೆ
ಗುಂಡಿಗೆಯನು ಸೀಳಿ ಕೊಲುತಿಹರಲ್ಲಿ
ಗಂಡನ ದಣಿಸುವುದಿಲ್ಲಿ – ಯಮ
ಕುಂಡದೊಳಗೆ ಹಾಕಿ ಕುದಿಸುವರಲ್ಲಿ ೨

ಚಾಡಿಯ ಹೇಳಿಸುದಿಲ್ಲಿ – ನುಡಿ
ದಾಡುವ ನಾಲಿಗೆ ಕೇಳುವರಲ್ಲಿ
ಬೇಡಿದರಿಗೆ ಧರ್ಮವಿಲ್ಲಿ – ಇದ
ನೀಡದಿರಲು ಒದ್ದು ನೂಕುವರಲ್ಲಿ ೩

ಪುಸಿ – ಠಕ್ಕು – ಠವುಳಿಗಳಲ್ಲಿ – ಕಟ್ಟಿ
ಎಸೆದು ಕೊಲ್ಲುವರೊ ನಿನ್ನವರು ಕೇಳಿಲ್ಲಿ
ಅಶನಪ್ರಭೇದಗಳಿಲ್ಲಿ – ಮಾಡೆ
ಬಿಸಿಯ ಕೆಂಡವ ತಂದು ತಿನಿಸುವರಲ್ಲಿ ೪

ಸಿರಿಮದದೊಳಗಿಹುದಿಲ್ಲಿ – ಸೊಕ್ಕ
ಮುರಿದು ಹಲ್ಲುಗಳ ಕಳಚುವರಲ್ಲಿ
ಪುರಂದರವಿಠಲನ ಇಲ್ಲಿ – ನೆನೆಯೆ
ಸ್ಥಿರವಾದ ಮುಕುತಿ ಪಡಕೊಂಬುವರಲ್ಲಿ ೫

## ೨೨೮

ಮರೆಯದಿರು ಶ್ರೀ ಹರಿಯನು ಪ.

ಮರೆಯದಿರು ಶ್ರೀ ಹರಿಯ ಮರಣಾತುರದಿ ಮಗನ
ಕರೆದವಗೆ ಸಾಯುಜ್ಯವಿತ್ತ ನಾರಾಯಣನ
ಸ್ಮರಣೆಯನು ಮಾಡುವರ ಚರಣ ಸೇವಕರಿಗೆ
ಪರಮ ಪದವೀವ ಹರಿಯ ಅ.ಪ

ದೇವಕಿಯ ಬಂಧವನು ಪರಿದವನ ಪೂತನಿಯ
ಜೀವರಸವೀಂಟಿದನ ಮಾವನನು ಮಡುಹಿದನ
ಪಾವನ ತರಂಗಿಣಿಯ ಪದನಖದಿ ಪಡೆದವನ
ಗೋವರ್ಧನೋದ್ಧಾರನ ॥

ದಾವಾನಲನ ಪಿಡಿದು ನುಂಗಿದನ ಲೀಲೆಯಲಿ
ಗೋವತ್ಸ ಗೋಪಾಲ ರೂಪವನು ತಾಳ್ದವನ
ದೇವಮುನಿ ಮುಖ್ಯ ಸುರರಾರಾಧಿಸುವನ ಶ್ರೀಪಾದವನು
ಭಜಿಸು ಮನವೆ ೧

ಕಂಜಸಂಭವಪಿತನ ಕರುಣಾಪಯೋನಿಧಿಯ
ಕುಂಜರನ ನುಡಿ ಕೇಳಿ ಒದಗಿದನ ರಣದೊಳು ಧ–
ನಂಜಯನ ಜೀವವಂ ಕೃಪೆಯಿಂದ ಕಾಯ್ದವನ
ಆಂಜನೇಯನನಾಳ್ದನ ॥
ರಂಜಿಸುವ ಕೌಸ್ತುಭವಿಭೂಷಣನ ಜಲಧಿಯಲಿ
ನಂಜಿನೊಡೆಯನ ಮೇಲೆ ಮಲಗಿದನ ತಮದೊಳಗೆ ಪ –
ರಂಜ್ಯೋತಿಮಯನಾಗಿ ಬೆಳಗುವನ
ಶ್ರೀಚರಣಕಂಜವಂ ಭಜಿಸು ಮನವೆ ೨

ವಾರಿಧಿಯೊಳಾಡಿದನ ವರಗಿರಿಯ ತಾಳಿದನ
ಧಾರಿಣಿಯ ತಂದವನ ದೈತ್ಯನನು ಕೊಂದವನ
ಮೂರಡಿಯಲಳೆದವನ ಮೊನೆಗೊಡಲಿ ಪಿಡಿದವನ ನೀರಧಿಯ
ಬಂಧಿಸಿದನ॥
ದ್ವಾರಕೆಯನಾಳ್ದವನ ತ್ರಿಪುರಗಳ ಜಗುಳ್ದವನ
ಚಾರುಹಯವೇರಿದನ ಸಕಲ ಸುಜನರ ಪೊರೆವ
ಧೀರ ಪುರಂದರವಿಠಲನ ಚರಣಕಮಲವನು
ನಂಬಿ ನೀ ಭಜಿಸು ಮನವೇ ೩

## ೨೨೯

ಮರೆಯದೆ ಮನದಲಿ ಸಿರಿವರನ ಚರಣವನು
ಸ್ಮರಿಸಿದಂಥವರನ್ನು ನರರೆನ್ನಬಹುದೆ ? ಪ.

ಮುರಹರನಿಗೆರಗುವ ಶಿರವು ದ್ವಾರಕಾಪುರವು
ಹರಿಕಥೆ ಕೇಳುವ ಕರ್ಣ ಗೋಕರ್ಣವು
ಬಿರುದು ಪೊಗಳುವ ಜಿಹ್ವೆ ಸ್ಥಿರದಿ ಕ್ಷೀರಾರ್ಣವ
ವರದನ ಪೂಜಿಪ ಕರವು ರಾಮೇಶ್ವರವು ೧

ಸೃಷ್ಟೀಶ ನಿರ್ಮಾಲ್ಯ ಗ್ರಹಣ ನಾಸಿಕ ಕಾಶಿ
ಕೃಷ್ಣನ ನೋಡುವ ದೃಷ್ಟಿ ಶ್ರೀಮುಷ್ಣವು
ಅಷ್ಟಮದಗಳ ಜರೆದ ಮುಖ ಮಥುರಾಪುರ
ವಿಷ್ಣುವನು ಪಾಡುವ ಕಂಠ ಭೂವೈಕುಂಠ ೨

ಪರಕೆ ನಡೆಸುವ ಜಂಘೆ ಹರಿವ ಗಂಗೆಯು ಈ
ಪರಿಯಲೊಪ್ಪುವ ಅಂಗ ಶ್ರೀರಂಗವು
ಧರೆಯೊಳು ಪುರಂದರ ವಿಠಲರಾಯನ
ಪರಮ ಭಾಗವತರ ಉದರವೆ ಬದರಿ ೩

## ೨೩೦

ಮರೆಯಬೇಡ ಮನವೆ ನೀನು ।
ಹರಿಯ ಚರಣವ ಪ.

ಯಾಗ – ಯಜ್ಞ ಮಾಡಲೇಕೆ
ಯೋಗಿ – ಯತಿಯು ಆಗಲೇಕೆ ।
ನಾಗಶಯನ ನಾರದವಂದ್ಯನ
ಕೂಗಿ ಭಜನೆ ಮಾಡು ಮನುಜ ೧

ಸತಿಯು ಸುತರು ಹಿತರು ಎಂದು
ಮತಿಯು ಕೆಟ್ಟು ತಿರುಗಲೇಕೆ ।
ಗತಿಯು ತಪ್ಪಿ ಹೋಗುವಾಗ
ಸತಿಸುತರು ಬಾಹೊರೇನೊ ? ೨

ಹರಿಯ ಸ್ಮರಣೆ ಮಾತ್ರದಿಂದ
ದುರಿತ ಘೋರವೆಲ್ಲ ನಾಶ

ಪರಮಪುರುಷ ಪುರಂದರವಿಠಲ
ಪರದ ಪದವಿ ಕೊಡುವನೊ ೩

## ೨೩೧

ಮಲವು ತೊಳೆಯಬಲ್ಲುದೆ
ಮನವ ತೊಳೆಯದನಕ ಪ

ಹಲವು ನೀರಿನೊಳಗೆ ಪೊಕ್ಕು
ಹಲುಬಿದರಿನ್ನೇನು ಫಲ? ಅಪ

ಬೋಗಫಲವನುಂಡು ವಿಷಯಭೋಗದಿಂದ ಮತ್ತರಾಗಿ
ಭೋಗ ಬೇಡಿ ಜನರು ಜೀವಕಾಗಿ ಮುನಿವರು
ಯೋಗಿಯಂತೆ ಜನರ ಮೆಚ್ಚಿಗಾಗಿ ಹೋಗಿ ಉದಯದಲ್ಲಿ
ಕಾಗೆಯಂತೆ ಮುಳುಗಿದರೆ ಅಮೋಘ ಫಲವು ಬಾಹೊದೆ? ೧

ಪರರ ಕೇಡಬಯಸಿ ಗುರು – ಹಿರಿಯರನ್ನು ನಿಂದಿಸುತ
ಪರಮ ಸೌಖ್ಯದಿಂದ ಪರಸ್ತ್ರೀಯರನ್ನ ಆಳುತ
ಪರಮಯೋಗನಿಷ್ಟೆಯೆಂದು ಧರೆಯ ಮೇಲೆ ಡಂಭತೋರಿ
ಹರಿವ ನದಿಯ ತೀರದಲ್ಲಿ ಪರಿಯು ಬಕ ಧ್ಯಾನದಂಥ ೨

ತಂದೆ – ತಾಯಿ ತಿರುತಿನ್ನಲು ಒಂದು ದಿವಸ ಕೇಳಲಿಲ್ಲ
ಮಂದಗಮನೆಯರೊಡನೆ ಆನಂದದಿಂದ ನಲಿಯುತ
ತಂದೆಯ ಹೆಸರಿನಿಂದ ನೂರುಮಂದಿಗುಣಿಸಿ ಹರುಷದಿಂದ
ತಂದೆ ತೃಪ್ತನಾದನೆಂಬ ಮಂದಮತಿಯ ಜನರುಗಳ ೩

ಕಾಸುವೀಸಕ್ಕಾಗಿ ಹರಿಯದಾಸನೆಂದು ತಿರುಗಿ ತಿರುಗಿ
ದೇಶದಿಂದ ದೇಶಕಿಳಿದು ಕಾಶಿಯಾತ್ರೆ ಮಾಡಲು
ಆಶಾಪಾಶ ಬಿಡದ ಮನದ ಕೂಸಿನಂತೆ ಕಾಡುತಿಪ್ಪ
ವೇಶಧಾರಿಗಳಿಗೆ ಆ ಕಾಶಿಯ ಫಲ ಬಾಹೊದೆ? ೪

ಏನು ಮಾಡಲೇನು ಫಲ – ಏನು ನೋಡಲೇನು ಫಲ
ಜ್ಞಾನವಿಲ್ಲದಚ್ಯುತನ ಧ್ಯಾನವಿಲ್ಲದವರಿಗೆ
ಮೌನ ನೇಮ ನಿಷ್ಠೆ ಪರಾಧೀನವೆಂಬುದ ತಿಳಿದುಕೊಂಡು
ದೀನನಾಥ ಪುರಂದರವಿಠಲನ ನಿಲುಕಲೊಲ್ಲದೆ ೫

## ೨೩೨

ಮಾಡು ದಾನಧರ್ಮ ಪರ ಉಪಕಾರವ ಮರೆಯದಿರೆಚ್ಚರಿಕೆ ಪ.

ಕೇಡ ನೆನೆಯಬೇಡ ನಂಬಿದವರ ಮೇಲೆ ಕೆಡುವೆ ನೀನೆಚ್ಚರಿಕೆ ಅ

ಬಾಳು ಬದುಕು ಸಿರಿ ಇರುವಾಗ ಬಂಧು ಬಳಗಗಳೆಚ್ಚರಿಕೆ ।
ಹಾಳು ಸಂಸಾರಕ್ಕೆ ಹಲವರ ಬಾಯ್ಗಳ ಬಡಿಯದಿರೆಚ್ಚರಿಕೆ ೧

ಮೂಢರ ಒಡನಾಡಿ ಮುಂದೆ ಕೆಡಲು ಬೇಡ
ಮೋಸ ನೋಡೆಚ್ಚರಿಕೆ
ನಾಡೊಳು ಸುಜನರ ನೋಡಿ ನಡೆ
ಕಂಡ್ಯ ನಟನೆ ಬೇಡೆಚ್ಚರಿಕೆ ೨

ಚೆನ್ನಾಗಿ ಬದುಕಿದೆ ಗಳಿಸಿದೆ ನಾನೆಂಬ ಹೆಮ್ಮೆ ಬೇಡೆಚ್ಚರಿಕೆ ।
ನಿನ್ನಾಯು ಮುಗಿದಿರಲು ಯಮದೂತರು
ಬಂದು ಎಳೆಯುವರೆಚ್ಚರಿಕೆ ೩

ಒಬ್ಬರಂತೆಲ್ಲರ ನೋಡಿ ಸತ್ಕರ್ಮದಿ ಉಬ್ಬಬೇಡೆಚ್ಚರಿಕೆ ।
ಕಬ್ಬುಬಿಲ್ಲನಪಿತನ ಏಕಾಂತ ಭಾವದಿಂ
ನೆರೆನಂಬು ಎಚ್ಚರಿಕೆ ೪

ಹೆಣ್ಣು ಹೊನ್ನು ಮಣ್ಣು ನಿನ್ನನಗಲಿಸಿ ಹೋಗುವರೆಚ್ಚರಿಕೆ ।
ಮುನ್ನಮಾಡಿದ ಪುಣ್ಯ ಬೆನ್ನತ್ತಿ ಬರುವುದು
ಮುಂದೆ ನೋಡೆಚ್ಚರಿಕೆ ೫

ತಿಂದೋಡಿ ಬಂಧುಬಳಗ ತಪ್ಪಿಸಿ ಕೊಂಬರೆಂದು ನೋಡೆಚ್ಚರಿಕೆ ।
ಎಂದೆಂದು ಅಗಲದ ಬಂಧು ಶ್ರೀಹರಿ
ನಮಗೆಂದು ನೋಡೆಚ್ಚರಿಕೆ ೬

ಕಾಲನ ದೂತರು ಯಾವಾಗ ಎಳೆವರೋ ಕಾಣದು ಎಚ್ಚರಿಕೆ ।
ಬೇಲೂರು ಪುರವಾಸ ಪುರಂದರವಿಠಲನ ಆಳಾಗು ಎಚ್ಚರಿಕೆ * ೭

## ೨೩೩

ಮಾನಭಂಗವ ಮಾಡಿ ಮೇಲುಪಚಾರವ
ಏನ ಮಾಡಿದರಲ್ಲಿ ಇರಬಾರದಯ್ಯ ಪ.

ಕುಂದುಗಳನಾಡಿ ಕುಚೋದ್ಯಗಳನೆ ಮಾಡಿ
ಕಂದ ಬಾಯೆಂದು ಬಣ್ಣಿಸಿ ಕರೆಯಲು
ಹಿಂದೆ ಮುಮ್ಮೊಳೆಯಿಟ್ಟು ಮುಂದೆ ಬಣ್ಣಿಸಿ ಕರೆದು
ಮುಂದಲೆಯನು ಕೊಯ್ದು ಮಂಡೆಗೆ ಹೂವ ಮುಡಿಸಿದಂತೆ ೧

ನಗಗೇಡು ಮಾಡಿ ನಾಲುವರೊಳಗೆ ಕೈಯ
ಮುಗಿವೆ ಬಾಯೆಂದು ಬಣ್ಣಿಸಿ ಕರೆಯಲು
ಮಿಗಿಲಾದ ವಸ್ತ್ರಭೂಷಣವಿತ್ತು ಮನ್ನಿಸಲು
ತುದಿಮೂಗ ಕೊಯ್ದು ಚಿನ್ನದ ಮೂಗನಿಟ್ಟಂತೆ ೨

ಅರ್ಥ ಹೋದರೂ ಪ್ರಾಣ ಹೋದರೂ ಮಾನ
ವ್ಯರ್ಥವಾಗದ ಹಾಗೆ ಕಾಯಬೇಕು
ಕರ್ತೃ ಶ್ರೀಹರಿ ನಮ್ಮ ಪುರಂದರವಿಠಲನ
ಭಕ್ತರಿಲ್ಲದ ಸ್ಥಳ ಬಿಡಬೇಕು ಹರಿಯೆ ೩

## ೨೩೪

ಮಾನವಜನ್ಮ ದೊಡ್ಡದು – ಇದ ।
ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ ಪ.

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

ಕಣ್ಣು ಕೈಕಾಲ್ಕಿವಿ ನಾಲಿಗೆ ಇರಲಿಕ್ಕೆ ।
ಮಣ್ಣುಮುಕ್ಕಿ ಮರುಳಾಗುವರೆ ॥
ಹೊನ್ನು ಹೆಣ್ಣಿಗಾಗಿ ಹರಿನಾಮಾಮೃತವನು ।
ಉಣ್ಣದೆ ಉಪವಾಸವಿರುವರೇನೋ ೧

ಕಾಲನವರು ಬಂದು ಕರಪಿಡಿದೆಳೆವಾಗ ।
ತಾಳು ತಾಳೆಂದರೆ ಕೇಳುವರೆ ? ॥
ವೇಳೆ ಹೋಗದ ಮುನ್ನ ಧರ್ಮವ ಗಳಿಸಿರೊ ।
ಸುಳ್ಳಿನ ಸಂಸಾರ ಸುಳಿಗೆ ಸಿಲುಕಬೇಡಿ ೨

ಏನು ಕಾರಣ ಯದುಪತಿಯನು ಮರೆತಿರಿ ।
ಧಾನ್ಯ – ಧನ – ಸತಿ – ಸುತರಿವು ನಿತ್ಯವೆ? ॥
ಇನ್ನಾದರು ಶ್ರೀ ಪುರಂದರವಿಠಲನ ।
ಚೆನ್ನಾಗಿ ಭಜಿಸಿ ನೀವ್ ಸುಖಿಯಾಗಿರಯ್ಯ ೩

## ೨೩೫

ಮಾನಹೀನರಿಗೆ ಅಭಿಮಾನವೇಕೆ – ಪ್ರ
ಧಾನಿಯಿಲ್ಲದ ಅರಸುತನವೇಕೆ ಕೃಷ್ಣಾ ಪ.

ಕಾಡಿನೊಳು ತಿರುಗುವಗೆ ಕನಕ ಭೂಷಣವೇಕೆ
ಓಡಿನಲಿ ಉಂಬುವಗೆ ಹರಿವಾಣವೇಕೆ
ಬೇಡಿದರೆ ಕೊಡದ ಲೋಭಿಗೆ ಬಿಂಕವೇಕೆ
ಪಾಡಲರಿಯದೆ ಪ್ರೌಢತನವೇಕೆ ಕೃಷ್ಣಾ ೧

ಪತಿ ಮೀರಿ ನಡೆವಳ ವ್ರತ ನೇಮತನವೇಕೆ
ಸತಿಗಳುಕಿ ನಡೆವವಗೆ ಸ್ವಾತಂತ್ರ್ಯವೇಕೆ
ಮತಿಗೆಟ್ಟು ತಿರುಗುವಗೆ ಮಂತ್ರ – ತಂತ್ರಗಳೇಕೆ
ಅತಿಯಾಸೆ ಬಿಡದ ಸಂನ್ಯಾಸಿ ತಾನೇಕೆ ೨

ಕಾಮವಿಲ್ಲದವರಿಗೆ ಕಾಂತೆಯರ ಗೊಡವೇಕೆ
ಪ್ರೇಮವಿಲ್ಲದ ಬಂಧು – ಬಳಗವೇಕೆ

ಸ್ವಾಮಿ – ಶ್ರೀ ಪುರಂದರವಿಠಲನ ನೆನೆಯದ
ತಾಮಸದ ಜನರಿಗೆ ಕೈವಲ್ಯವೇಕೆ ೩

**೨೩೬**

ಮಾವನ ಮನೆಯೊಳಗೆ ಕೋವಿದರಿರಬಹುದೆ ಪ.

ಹಾವ ಹಿಡಿಯಲು ಬಹುದು ಹರಣ ನೀಡಲು ಬಹುದು ।
ಬೇವ ಕಿಚ್ಚನು ಹಿಡಿದು ನುಂಗಬಹುದು ॥
ಭಾಮೆಯ ತಂದ ಮನೆಯಲಿ ಜೀವಿಪುದಕಿಂತ
ಸಾವುದೇ ಲೇಸು ಅಭಿಮಾನಿಗಳಿಗೆ ೧

ಪರರ ಸೇರಲುಬಹುದು ಪತಿತರಲ್ಲಿರಬಹುದು ।
ಕೊರಳ ಘಾತಕರಲ್ಲಿ ಸೆರಗೊಡ್ಡಬಹುದು ॥
ತರುಣಿಯ ತಂದೆಯ ಮನೆಯವಾಸಕ್ಕಿಂತ ।
ತರುಗಿರಿಗುಹೆಗಳಲಿ ಇದ್ದು ಜೀವಿಸಬಹುದು ೨

ಮಾವ – ಅತ್ತೆಯ ನೊಂದು ಅತ್ತಿಗೆಯು ತಾ ಜರೆದು ।
ಹೇವವನಿಕ್ಕಿ ಚೂರ್ಣವ ಮಾಡಲು ॥
ಆವಾಗ ನೋಡಿದರೂ ಎನಗೆ ಹಿತರಿಲ್ಲೆಂದು
ಮಾವ ಹೊರಗಾಡುವನು ಚಿಕ್ಕ ನುಡಿಗಳನು ೩

ಒಂದೊಂದು ತೆಂಗಳೊಳು ಬಹುಮಾನ ನಡತೆಗಳು ।
ಒಂದೆರಡು ತಿಂಗಳೊಳಗೆ ಹಿತವಾದವು ॥
ಒಂದೊಂದಭದ್ರ ನುಡಿ ಒಳಗೊಳಗೆ ಹುಟ್ಟಿದುವು ।
ಸಂದೇಹವೇಕೆ ಸಂಸಾರಿಗೂ ೪

ಈ ಪರಿಯಲುಂಬಂಥ ಅಳಿಯ ಭೋಜನದಿಂದ ।
ಗೋಪಾಳ ಲೇಸು ಅಭಿಮಾನಿಗಳಿಗೆ ॥
ಶ್ರೀಪತಿ ನಮ್ಮ ಪುರಂದರವಿಠಲನ
ಈ ಪರಿ ಭಜಿಸಿ ಸುಖಿಯಾಗೊ ಮನವೆ * ೫

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

## ೨೩೭

ಮುಪ್ಪಿನ ಗಂಡನ ಒಲ್ಲೆನೆ ।
ತಪ್ಪದೆ ಪಡಿಪಾಟ ಪಡಲಾರೆನವ್ವ.......... ಪ.

ಉದಯದಲೇಳಬೇಕು ಉದಕ ಕಾಸಲು ಬೇಕು ।
ಹದನಾಗಿ ಬಜೆಯನು ಅರೆದಿಡಬೇಕು ॥
ಬದಿಯಲಿ ಎಲೆ ಅಡಿಕೆ ಕುಟ್ಟಿಡಬೇಕು ।
ಬಿದಿರಕೋಲು ತಂದು ಮುಂದಿಡಬೇಕು ೧

ಪಿತ್ತವ್ಹೋಕರಿಕೆ ಮುದುಕರಿಗೆ ವಿಶೇಷವು ।
ಹೊತ್ತು ಹೊತ್ತಿಗೆ ಜೊಲ್ಲ ಚೆಲ್ಲಬೇಕು ॥
ಮೆತ್ತನವೆರಡು ಮುದ್ದಿಯ ಮಾಡಲುಬೇಕು ।
ಒತ್ತೊತ್ತಿ ಕೂಗಿ ಕರೆಯಲುಬೇಕು ...... ೨

ಜಾಡಿ ಹಾಸಬೇಕು ನೋಡಿ ಬಾಡಬೇಕು ।
ಅಡಗಡಿಗೆ ಕಣ್ಣೀರ ಸುರಿಸಬೇಕು ॥
ಒಡೆಯ ಶ್ರೀ ಪುರಂದರವಿಠಲನ ನೆನೆಯುತ ।
ಮಿಡಿಗೊಂಡು ಮೂಲೆಗೆ ಒರಗಬೇಕು ೩

## ೨೩೮

ಮುತ್ತೈದೆಯಾಗಿರಬೇಕು ಮುದದಿಂದಲಿ ।
ಹತ್ತುನೂರು ನಾಮದೊಡೆಯ ಹರಿ ನಮ್ಮ ಪತಿಯೆಂದು ಪ.

ಗುರುಮಧ್ವಶಾಸ್ತ್ರವನು ಓದುವುದೆ ಮಾಂಗಲ್ಯ ।
ವರವೈರಾಗ್ಯವೆಂಬ ಒಪ್ಪುವ ಮೂಗುತಿ ॥
ತಾರತಮ್ಯದರಿವೆ ತಾಯಿತಿ ಮುತ್ತುಸರ ।
ಕರುಣರಸಾಗಳೆ ಉಳ್ಳ ಕಟ್ಟಾಣಿ ಕಟ್ಟಿಕೊಂಡು ೧

ಹರಿಕಥೆಯ ಕೇಳುವುದೆ ಕಿವಿಗೆ ಮುತ್ತಿನ ಓಲೆ ।
ನಿರುತ ಸತ್ಕರ್ಮವೇ ನಿಜಕಾಂತಿಯು ॥

ಪರಮ ಭಕ್ತರ ಪಾದರಜ ಹರಳು ಬಂಗಾರ ।
ಗುರುಭಕುತಿಯೆಂಬಂಥ ಗಂಧ ಕುಂಕುಮ ಧರಿಸಿ ೨

ಪೊಡವಿಯೊಳು ಪರಹಿತದ ಪಟ್ಟವಾಳಿಯನುಟ್ಟು ।
ಕೊಡುವ ಧರ್ಮವೆಂಬ ಕುಪ್ಪಸವ ತೊಟ್ಟು ॥
ಬಿಡದೆ ಎನ್ನೊಡೆಯ ಶ್ರೀ ಪುರಂದರವಿಠಲನ ।
ದೃಢ ಭಕ್ತಿಯೆಂಬಂಥ ಕಡಗ – ಬಳೆ ಇಟ್ಟುಕೊಂಡು ೩

## ೨೩೯

ಮೂರ್ಖರಾದರು ಇವರು ಲೋಕದೊಳಗೆ
ಏಕದೈವವ ಬಿಟ್ಟು ಕಾಕುದೈವವ ಭಜಿಸಿ ಪ.

ಒಂಟಿಯಲಿ ಹೆಂಡತಿಯ ಬಿಡುವಾತನೇ ಮೂರ್ಖ
ಗಂಟನೊಬ್ಬನ ಕೈಯಲಿಡುವವನೆ ಮೂರ್ಖ
ನಂಟರಿಗೆ ಸಾಲವನು ಕೊಡುವಾತ ಮೂರ್ಖ – ಜಗ
ಕಂಟಕನಾದವನು ಕಡು ಮೂರ್ಖನಯ್ಯಾ ೧

ಮುಪ್ಪಿನಲಿ ಹೆಂಡತಿಯ ಮಾಡಿಕೊಂಬವ ಮೂರ್ಖ
ಸರ್ಪನಲಿ ಗಾರುಡವ ನಡಸುವನೆ ಮೂರ್ಖ
ಇಪ್ಪತ್ತು ಒಂದು ಕುಲ ಉದ್ಧರಿಸದವ ಮೂರ್ಖ
ಅಪ್ಪ ರಂಗಯ್ಯನನು ನೆನೆಯದವ ಮೂರ್ಖ ೨

ಸತ್ತ ಕರುವಿನ ತಾಯ ಹಾಲು ಕರೆವವ ಮೂರ್ಖ
ಒತ್ತೆಯಿಲ್ಲದೆ ಸಾಲ ಕೊಡುವವನೆ ಮೂರ್ಖ
ಹತ್ತೆಂಟು ಬಗೆಯಲಿ ಹಂಬಲಿಸುವವ ಮೂರ್ಖ
ಹೆತ್ತ ತಾಯ್ ಬೈವವನು ಕಡು ಮೂರ್ಖನಯ್ಯ ೩

ಪಡೆದ ಮಗಳನು ಮಾರಿ ಒಡಲಹೊರೆವವ ಮೂರ್ಖ
ಮಡದಿ ಹುಟ್ಟಿದ ಮನೆಯೊಳಿರುವವನೆ ಮೂರ್ಖ
ಬಡತನವು ಬಂದರೆ ಬಯಸಿಕೊಂಬವ ಮೂರ್ಖ
ದೃಢಬುದ್ಧಿಯಿಲ್ಲದವ ಕಡು ಮೂರ್ಖನಯ್ಯ ೪

ರಾಮನಾಮವ ಸ್ಮರಿಸದಿದ್ದಾತನೇ ಮೂರ್ಖ
ಹೇಮವನು ಗಳಿಸಿ ಉಣದಿದ್ದವನೆ ಮೂರ್ಖ
ನೇಮದಲಿ ಹಿರಿಯರನು ನೋಡದವ ಮೂರ್ಖ ದುರ್
ನಾಮವನು ಕೊಂಬಾತ ಕಡು ಮೂರ್ಖನಯ್ಯ ೫

ಕಾಶಿಯಲಿ ದೇಹವನು ತೊಳೆಯದಿದ್ದವ ಮೂರ್ಖ
ಭೂಸುರರಿಗನ್ನವನು ಕೊಡದವನೆ ಮೂರ್ಖ
ಶೇಷಪತಿ ಕೃಷ್ಣನ ನೆನೆಯದವ ಮೂರ್ಖ ಹರಿ
ದಾಸನಾಗಿರದವನು ಕಡು ಮೂರ್ಖನಯ್ಯ ೬

ಉಂಡ ಮನೆಗೆರಡನ್ನು ಬಗೆವಾತನೇ ಮೂರ್ಖ
ಕೊಂಡೆಯವ ಪೇಳಿ ತಿರುಗುವವ ಮೂರ್ಖ
ಪುಂಡರೀಕಾಕ್ಷ ಶ್ರೀ ಪುರಂದರವಿಠಲನ
ಕೊಂಡು ಭಜಿಸದ ಮನುಜ ಕಡು ಮೂರ್ಖನಯ್ಯ ೭

## ೨೪೦

ಮೂಢ ಬಲ್ಲನೆ ಜ್ಞಾನ – ದೃಢ ಭಕುತಿಯ ?
ಕಾಡ ಕಪಿ ಬಲ್ಲುದೇ ಮಾಣಿಕದ ಬೆಲೆಯ ? ಪ.

ಕೋಣ ಬಲ್ಲುದೆ ವೇದಗಳನೋದಿ ಪಠಿಸಲಿಕೆ
ಗೋಣಿ ಬಲ್ಲುದೆ ಎತ್ತಿನಾ ದುಃಖವ
ಪ್ರಾಣ ತೊಲಗಿದ ಹೆಣವು ಕಿಚ್ಚಿಗಂಜಬಲ್ಲುದೆ
ಕ್ಷೋಣಿಯೊಳು ಕುರುಡ ಬಲ್ಲನೆ ಹಗಲು – ಇರುಳ ? ೧

ಬಧಿರ ಕೇಳುವನೆ ಸಂಗೀತವನು ಪಾಡಿದರೆ ?
ಚದುರ ಮಾತುಗಳಾಡುವನೆ ಮೂಕನು ?
ಕ್ಷುಧೆಯಿಲ್ಲದವನು ಅಮೃತಾನ್ನವನು ಸವಿಯುವನೆ ?
ಮಧುರ ವಚನವ ನುಡಿವನೇ ದುಷ್ಟ ಮನುಜ ೨

ಅಜ ಬರೆದ ಬರಹವನು ತೊಡೆಯಬಲ್ಲನೆ ಜಾಣ?
ನಿಜಭಕುತಿ ಮುಕುತಿ ಸುಖವನ್ನು ಕೊಡುವ

ಭುಜಗೇಂದ್ರಶಯನ ಶ್ರೀ ಪುರಂದರವಿಠಲನ
ಭಜಿಸಲಿಕ್ಕರಿಯದವ ಕಡು ಪಾಪಿ ಮನುಜ ೩

## ೨೪೧

ಮೇರೆಯಿಲ್ಲದೆ ಮಾತನಾಡುತಲಿರಲೊಮ್ಮೆ ಕೃಷ್ಣಾ ಎನಬಾರದೆ
ದಾರಿಯ ನಡೆಯುತ ಭಾರವ ಹೊರುವಾಗ ಕೃಷ್ಣಾ ಎನಬಾರದೆ ಪ.

ತಿರುಗಾಡುತ ಮನೆಯೊಳಗಾದರು ಒಮ್ಮೆ – ಕೃಷ್ಣಾ
ಪರಿಪರಿ ಕೆಲಸದೊಳಿದುವೊಂದು ಕೆಲಸವು – ಕೃಷ್ಣಾ ೧

ಮಲಗಿಯೆದ್ದು ಮೈಮುರಿದೇಳುತಲೊಮ್ಮೆ – ಕೃಷ್ಣಾ
ಹಲವು ಯೋಚಿಸುತಲಿ ಮಂದಿರದಲಿ ಒಮ್ಮೆ – ಕೃಷ್ಣಾ ೨

ಚೆಂದುಳ್ಳ ಹಾಸಿಗೆ ಮೇಲೆ ಕುಳಿತು ಒಮ್ಮೆ ಕೃಷ್ಣಾ
ಕಂದನ ಬಿಗಿದಪ್ಪಿ ಮುದ್ದಾಡುತಲೊಮ್ಮೆ – ಕೃಷ್ಣಾ ೩

ಗಂಧವ ಪೂಸಿ ತಾಂಬೂಲ ಮೆಲ್ಲುತಲೊಮ್ಮೆ – ಕೃಷ್ಣಾ
ಮಂದಗಮನೆಯೊಳು ಸರಸವಾಡುತಲೊಮ್ಮೆ – ಕೃಷ್ಣಾ ೪

ಕ್ಷೀರಸಾಗರ ಶಯನ ನೀನೇ ಗತಿಯೆಂದು ಕೃಷ್ಣಾ
ದ್ವಾರಕಾಪುರವಾಸ ಪುರಂದರ ವಿಠಲ ಕೃಷ್ಣಾ ೫

## ೨೪೨

ರಾಮ ಗೋವಿಂದ ಸೀತಾ – ರಾಮ ಗೋವಿಂದ ಪ.

ತೃಪ್ತಿಯಹುದೆ ಹೆತ್ತ ತಾಯಿ ಇಕ್ಕದನಕ
ಭಕ್ತಿಯಹುದೆ ಭಕ್ತಜನರ ಸಲಹದನಕ
ಮುಕ್ತಿಯಹುದೆ ಭಾವಶುದ್ಧಿ ಇಲ್ಲದನಕ
ಚಿತ್ತಶುದ್ಧಿ ಆತ್ಮನಿಜವು ತಿಳಿಯದನಕ ೧

ಓದಲೇಕೊ ಮನದಿ ಜ್ಞಾನವಿಲ್ಲದನಕ
ಭೇದವೇಕೊ ಗತಿಯು ಗಮನ ತಿಳಿಯದನಕ
ಕಾದಲೇಕೊ ಭುಜದಿ ಶಕ್ತಿಯಿಲ್ಲದನಕ
ವಾದವೇಕೊ ಶ್ರುತಿ - ಶಾಸ್ತ್ರ ತಿಳಿಯದನಕ ೨

ನಳಿನವಿದ್ದರೇನು ತುಂಬಿಯೊದಗದನಕ
ದಳವು ಇದ್ದರೇನು ಧೈರ್ಯಕೊಡದನಕ
ಲಲನೆಯಿದ್ದರೇನು ಪುತ್ರರಿಲ್ಲದನಕ
ಚೆಲುವನಾದರೇನು ವಿದ್ಯೆ ಕಲಿಯದನಕ ೩

ವನವಿದ್ದೇಕೊ ಶುಕ - ಪಿಕವಿಲ್ಲದನಕ
ತನುವಿದ್ದೇಕೊ ಪರಹಿತಕೆ ಬಾರದನಕ
ಮನೆಯಿದ್ದೇಕೊ ಅತಿಥಿಯೊಬ್ಬರಿಲ್ಲದನಕ
ಧನವಿದ್ದರೇನು ದಾನ - ಧರ್ಮಕ್ಕೊದಗದನಕ ೪

ಹರಿಯ ಚಿಂತೆಯಿರಲು ಅನ್ಯ ಚಿಂತೆಯೇತಕೊ
ಹರಿಯ ಧ್ಯಾನವಿರಲು ಅನ್ಯ ಧ್ಯಾನವೇತಕೊ
ಸಿರಿ ಪುರಂದರವಿಠಲನಿರಲು ಭಯವು ಏತಕೊ
ಹರಿಯು ಒಲಿದ ಮನುಜನಿಗೆ ದೈನ್ಯವೇತಕೊ ೫

## ೨೪೩

ರಾಮ ಮಂತ್ರವ ಜಪಿಸೊ - ಏ ಮನುಜಾ ಶ್ರೀ
ರಾಮ ಮಂತ್ರವ ಜಪಿಸೊ ಪ

ಆ ಮಂತ್ರ ಈ ಮಂತ್ರ ನೆಚ್ಚಿ ಕೆಡಲು ಬೇಡ
ಸೋಮಶೇಖರಗಿದು ಭಜಿಸಿ ಬಾಳುವ ಮಂತ್ರ ಅ.ಪ

ಕುಲಹೀನನಾದರೂ ಕೂಗಿ ಜಪಿಸುವ ಮಂತ್ರ
ಛಲದಿ ಬೀದಿಯೊಳು ಉಚ್ಚರಿಪ ಮಂತ್ರ ॥
ಹಲವು ಪಾತಕಗಳ ಹಸನಗೆಡಿಸುವ ಮಂತ್ರ
ಸುಲಭದಿಂದಲಿ ಸ್ವರ್ಗ ಸೂರೆಗೊಂಬುವ ಮಂತ್ರ ೧

ಸನುಮುನಿಗಳಿಗೆಲ್ಲ ಸಲುಗೆಯಾಗಿಹ ಮಂತ್ರ
ಮನುಮುನಿಗಳಿಗೆಲ್ಲ ಮೌನ ಮಂತ್ರ ॥
ಹೀನಗುಣಗಳೆಲ್ಲ ಹಿಂಗಿ ಹೋಗುವ ಮಂತ್ರ
ಏನೆಂಬೆ ಧ್ರುವನಿಗೆ ಪಟ್ಟಗಟ್ಟಿದ ಮಂತ್ರ ೨

ಸಕಲ ವೇದಗಳಿಗೆ ಸಾರವಾಗಿಹ ಮಂತ್ರ
ಮುಕುತಿ ಪಥಕೆ ಇದು ಮೂಲಮಂತ್ರ ॥
ಶಕುತ ಪರಕೆ ಇದು ಬಟ್ಟೆದೋರುವ ಮಂತ್ರ
ಸುಖನಿಧಿ ಪುರಂದರವಿಠಲ ಮಹಾಮಂತ್ರ ೩

## ೨೪೪

ರಾಮ ರಾಮ ರಾಮ ರಾಮ ರಾಮವೆನ್ನಿರೊ ।
ರಾಮ ರಾಮವೆಂಬ ನಾಮ ಮನದಿ ನೆನೆಯಿರೊ ಪ.

ಇಂದ್ರಿಯಂಗಳೆಲ್ಲ ಕೂಡಿ ಬಂದು ತನ್ನ ಮುಸುಕಿದಾಗ ।
ಸಿಂಧುಸುತಾಪತಿಯ ಧ್ಯಾನ ಅಂದಿಗೆ ಒದಗಲೀಯದು ೧

ಭರದಿ ಯಮನ ಭಟರು ಬಂದು ಹೊರಡು ಎಂದು ಮುಟ್ಟಲು ।
ಕೊರಳಿಗಾತ್ಮ ಸೇರಿದಾಗ ಹರಿಯ ಧ್ಯಾನ ದೊರೆಯದಯ್ಯ . ೨

ಕಾಸಶ್ವಾಸದಲ್ಲಿ ಸಿಲುಕಿ ದೋಷ ಬಲಿದು ಪೋಗುವಾಗ ।
ವಾಸುದೇವನೆಂಬ ನಾಮ ವದನದಲ್ಲಿ ಒದಗದಯ್ಯ ೩

ಶೃಂಗಾರವಾದ ದೇಹ ತಂಗಿಬಿಟ್ಟು ಪೋಗುವಾಗ ।
ಕಂಗಳಿಗಾತ್ಮ ಸೇರಿದಾಗ ರಂಗನ ಧ್ಯಾನ ದೊರಕದಯ್ಯ ೪

ಕಷ್ಟಜನ್ಮದಲ್ಲಿ ಬಂದು ದುಷ್ಟಕರ್ಮಗಳನು ಮಾಡಿ ।
ಬಿಟ್ಟು ಹೋಗುವಾಗ ಪುರಂದರವಿಠಲನ ನೆನೆಮನವೆ ೫

## ೨೪೫

ರಾಮ ರಾಮ ರಾಮ ಸೀತಾ ರಾಮ ಎನ್ನಿರೋ ಪ.

ಇಂದ್ರಿಯಂಗಳೆಲ್ಲ ಕೂಡಿ
ಬಂದು ತನುವ ಮುಸುಕಲು
ಸಿಂಧು ಸುತೆಯ ಪತಿಯಧ್ಯಾನ
ಎಂದಿಗಲ್ಲಿ ದೊರೆಯದೊ ೧

ಭರದಿ ಯಮನ ಭಟರಾಗಲೆ
ಹೊರಡು ಎಂದು ಮೆಟ್ಟಿ ತುಳಿಯೆ
ಕೊರಳಿಗಾತ್ಮ ಸೇರಿದಾಗ
ಹರಿಯ ಧ್ಯಾನ ದೊರೆಯದೊ ೨

ದೋಷ ಕ್ಲೇಶ – ದುಃಖವೆಂಬ
ಶ್ಲೇಷ್ಮದಲ್ಲಿ ಸಿಕ್ಕಿ ಇರಲು
ವಾಸುದೇವ ಕೃಷ್ಣನೆಂಬು
ದಾಸಮಯಕ್ಕೆ ದೊರೆಯದೊ ೩

ಸಿಂಗಾರವಾದ ದೇಹವೆಲ್ಲ
ಅಂಗವಳಿದು ಮುರಿದು ಬೀಳೆ ॥
ಅಂಗಳಿಗಾತ್ಮ ಸೇರಿದಾಗ
ರಂಗನ ಧ್ಯಾನವು ದೊರೆಯದೊ ೪

ಕೆಟ್ಟ ಕೆಟ್ಟರಲ್ಲೊ ಬರಿದೆ
ಕಟ್ಟ ಕಡೆಯಲ್ಲಿ ಕಾಯ
ಬಿಟ್ಟು ಹೋಗುವಾಗ ಪುರಂದರ
ವಿಠಲ ಧ್ಯಾನ ದೊರೆಯದೊ ೫

## ೨೪೬

ರೊಕ್ಕ ಎರಡಕ್ಕೆ ದುಃಖ
ಗಕ್ಕನೆ ಹೋದರೆ ಘಾತ ಕಾಣಕ್ಕ ಪ.

ಚಿಕ್ಕತನಕೆ ತಂದು ಕೆಡಿಸುವುದು ರೊಕ್ಕ
ಮಕ್ಕಳ ಮರಿಗಳ ಮಾಳ್ಪದು ರೊಕ್ಕ
ಸಕ್ಕರೆ ತುಪ್ಪವ ಸಲಿಸುವುದು ರೊಕ್ಕ
ಕಕ್ಕುಲಾತಿಗೆ ತಂದು ಕೆಡಿಸುವುದು ರೊಕ್ಕ ೧

ಕುಂಟರ ಕುರುಡರ ಕುಣಿಸುವುದು ರೊಕ್ಕ
ಗಂಟು ಮಾಡಲಿಕ್ಕೆ ಕಲಿಸುವುದು ರೊಕ್ಕ
ಬಂಟರನೆಲ್ಲ ವಶ ಮಾಡುವುದು ರೊಕ್ಕ
ತುಂಟತನಕೆ ತಂದು ನಿಲಿಸುವುದು ರೊಕ್ಕ ೨

ಇಲ್ಲದ ಗುಣಗಳ ಕಲಿಸುವುದು ರೊಕ್ಕ
ಸಲ್ಲದ ನಾಣ್ಯವ ಸಲಿಸುವುದು ರೊಕ್ಕ
ಬೆಲ್ಲದಕ್ಕಿಂತಲೂ ಸವಿಯಾದ ರೊಕ್ಕ
ಕೊಲ್ಲಲಿಕ್ಕೆ ಕಾರಣವಾಯಿತು ರೊಕ್ಕ ೩

ಉಂಟಾದ ಗುಣಗಳ ಬಿಡಿಸುವುದು ರೊಕ್ಕ
ನಂಟರ ಇಷ್ಟರ ಮಾಡುವುದು ರೊಕ್ಕ
ಒಂಟೆ – ಆನೆ –ಕುದುರೆ ತರಿಸುವುದು ರೊಕ್ಕ
ಕಂಟಕಗಳನೆಲ್ಲ ಬಿಡಿಸುವುದು ರೊಕ್ಕ ೪

ವಿದ್ವಜ್ಜನರ ವಶ ಮಾಡುವುದು ರೊಕ್ಕ
ಹೊದ್ದಿದವರನು ಹೊರೆವುದು ರೊಕ್ಕ
ಮುದ್ದು ಪುರಂದರವಿಠಲನ ಮರೆಸುವ
ಬಿದ್ದು ಹೋಗುವ ರೊಕ್ಕ ಸುಡು ನೀನಕ್ಕ ೫

## ೨೪೭

ಲೊಳಲೊಟ್ಟೆ – ಬದುಕು – ಲೊಳಲೊಟ್ಟೆ ಪ.

ಆನೆ ಕುದುರೆ ಮಂದಿ ಲೊಳಲೊಟ್ಟೆ – ಬಲು ।
ಸೈನ್ಯ ಭಂಡಾರವು ಲೊಳಲೊಟ್ಟೆ ॥
ಮಾನಿನಿಯರ ಸಂಗ ಲೊಳಲೊಟ್ಟೆ – ಮಹಾ ।
ಮಾನ್ಯ – ವಿಜಯರೆಲ್ಲ ಲೊಳಲೊಟ್ಟೆ ೧

ಮುತ್ತು – ಮಾಣಿಕ – ಚಿನ್ನ ಲೊಳಲೊಟ್ಟೆ – ಬಲು ।
ಛತ್ರ – ಚಾಮರಗಳು ಲೊಳಲೊಟ್ಟೆ ॥
ಸುತ್ತಗಳು ಕೋಟೆಯು ಲೊಳಲೊಟ್ಟೆ – ಅಲ್ಲಿ ।
ಸುತ್ತುವ ಜನವೆಲ್ಲ ಲೊಳಲೊಟ್ಟೆ ೨

ನೆಂಟರು – ಇಷ್ಟರು ಲೊಳಲೊಟ್ಟೆ – ದೊಡ್ಡ ।
ಕಂಟಕಾನಾಹೊದು ಲೊಳಲೊಟ್ಟೆ ॥
ಉಂಟಾದ ಗುಣನಿಧಿ ಪುರಂದರವಿಠಲನ ।
ಬಂಟನಾಗದವ ಲೊಳಲೊಟ್ಟೆ ೩

## ೨೪೮

ವಂದಿಸಿದವರೆ ಧನ್ಯರು – ನಮ್ಮ – ।
ಇಂದಿರಾಪತಿಗಡ್ಡಬೀಳುತಲೊಮ್ಮೆ ಪ.

ಒಂದೊಂದು ಸ್ತೋತ್ರದಿ ಒಂದೊಂದು ಮಂತ್ರದಿ ।
ಒಂದೊಂದು ನಾಮವ ನೆನೆಯುತಲಿ ॥
ಮಂದರೋದ್ಧರನನು ಕುಂದದೆ ಪೂಜಿಸಿ ।
ವಂದಿಸುವಾನಂದದಿಂದ ೧

ಬಿಟ್ಟು ಲಜ್ಜೆಯನು ದೃಷ್ಟಿಸಿ ನೋಡುತ ।
ವಿಟ್ಠಲ ವಿಟ್ಠಲ ಎನುತ ಮನ – ॥
ಮುಟ್ಟಿ ಮಾಡುವ ಭಕ್ತಿ – ಸ್ತೋತ್ರ – ಸ್ತುತಿಗಳಿಂದ ।
ಅಷ್ಟಾಂಗದಲಿ ವಂದನೆಯ ಮಾಡುತಲಿ ೨

ಸಿರಿಲಕ್ಷ್ಮೀಪತಿ ಶರಣಾಗತರನು ।
ಕರುಣಿಸೆಂದೆನುತ ಕರವ ಮುಗಿದು ॥
ಹರುಷ ಪುಳಕದಿಂದ ಮರೆತು ದೇಹವನು ಶ್ರೀ – ।
ಪುರಂದರವಿಠಲರಾಯನ ಚರಣಕೆ ೩

## ೨೪೯

ವರಕವಿಗಳಿದ್ದಲ್ಲಿ ನರಕವಿಗಳ ಕೊಂಡಾಡಬಾರದು – ಇಂಥಾ
ಧರಣಿಯ ಕಲ್ಲಿಗೆ ಸ್ಥಿರವೆಂದು ಪೂಜೆಯಮಾಡಬಾರದು ಪ.

ಅಡಿಹೋದ ಮಡಕಿಗೆ ಜೋಡಿಸಿ ಒಲೆಗುಂಡ ಹೂಡಬಾರದು
ಬಡತನ ಬಂದರೆ ನಂಟರ ಬಾಗಿಲ ಸೇರಬಾರದು ೧

ಮಡದಿಯ ನುಡಿ ಕೇಳಿ ಬಡವರ ಜಗಳಕೆ
ಹೋಗಬಾರದು – ಬಹಳ
ಬಡತನ ಬಂದವಳ ಕೈಯಿಂದ ಅಡಿಗೆಯ ಉಣ್ಣಬಾರದು ೨

ಪಾಪಿಗಳಿದ್ದಲ್ಲಿ ರೂಪದ ಒಡವೆಯ ತೋರಬಾರದು – ಕಡು
ಕೋಪಿಗಳಿದ್ದಲ್ಲಿ ಅನುಕೂಲ ಗೋಷ್ಠಿಮಾಡಬಾರದು ೩

ಪರರ ನಿಂದಿಸಿ ಪರಬ್ರಹ್ಮ ರೂಪೇಂದ್ರನ ಜರೆಯಬಾರದು
ವರದ ಶ್ರೀ ಪುರಂದರವಿಠಲನ ಸ್ಮರಣೆಯ ಮರೆಯಬಾರದು ೪

## ೨೫೦

ವರತೀರ್ಥರಾಜ ಪ್ರಯಾಗವೆನಿಸುವ ಕ್ಷೇತ್ರ – ।
ದೊರೆ ಮಾಧವನ ಭಜಿಸಿರೈ ೩

ಆ ಮಾಘಮಾಸದತಿಶಯವಾದ ಸ್ನಾನವನು ।
ಈ ಮಹಾನದಿಯೊಳಗೆ ಮಾಡಲೋಸುಗ ಬೊಮ್ಮ ।
ಸೋಮಶೇಖರ ಮುಖ್ಯ ದೇವತೆಗಳೈತಹರು ।
ಪ್ರೇಮದಿಂದಲಿ ನಿರುತ ॥

ನೇಮವಿದು ದ್ವಿಜಕುಲೋತ್ತಮರಾದವರು ಕೇಳಿ ।
ಕಾಮ – ಕ್ರೋಧವ ಜರಿದ ಪ್ರಯಾಗ ಕ್ಷೇತ್ರದಲಿ ।
ರಾಮಣೀಯಕ ಸ್ನಾನನುಷ್ಠಾನ ತೀರ್ಥವಿಧಿ ।
ಹೋಮಗಳ ಮಾಡಿರಯ್ಯ ೪

ಆರ್ಯಾವರ್ತದ ಬ್ರಹ್ಮವರ್ತ ದೇಶದ ಮಧ್ಯೆ ।
ಧಾರ್ಯವಾದಲೆ ಪುಣ್ಯವಾರಾಣಾಸೀ ಕ್ಷೇತ್ರ ।
ಕಾರ್ಯವಿಶ್ವೇಶತಾರಕ ಮಂತ್ರವುಪದೇಶಿ ।
ಸೂರ್ಯಚಂದ್ರಾಗ್ನಿನಯನ॥
ತ್ವರ್ಯುಗ್ರನೆನಿಪ ಭೂತೇಶ ಭೈರವನಲ್ಲಿ ।
ವೀರ್ಯದಿಂದಘಕಾರಿ ಜೀವಿಗಳ ಶಿಕ್ಷಿಸುವ ।
ಶೌರ್ಯ ಅಗಣಿತ ಮಹಿಮ ಶ್ರೀ ಬಿಂದುಮಾಧವಗೆ ।
ಕಾರ್ಯದೊರೆತನವು ಅಲ್ಲಿ ೫

ಅರ್ತಿಯಲಿ ಪಂಚಗಂಗೆಯಲಿ ಮಜ್ಜನಮಾಡಿ ।
ನಿತ್ಯ ನೈಮಿತ್ತ್ಯ ಕರ್ಮಂಗಳನು ಪತಿಕರಿಸಿ ।
ಸುತ್ತಿ ಅಂತರ್ವೇದಿಯನ್ನು ಪಂಚಕ್ರೋಶ – ।
ಯಾತ್ರೆಗಳ ಮಾಡಿ ಬಳಿಕ ॥
ಮತ್ತೆ ಶ್ರೀ ವಿಶ್ವೇಶ್ವರಗೆ ಪ್ರದಕ್ಷಿಣೆ ಮಾಡಿ ।
ಭಕ್ತಿಪೂರ್ವಕವಾಗಿ ಅಲ್ಲಲ್ಲಿ ಇಹ ವೈಷ್ಣ – ।
ವೋತ್ತಮರಿಗೆರಗಿ ಸದ್ಧರ್ಮಗಳ ಮಾಡಿ –
ಕೃತ ಕೃತ್ಯರೆಂದೆನಿಸಿದರಯ್ಯ ೬

## ೨೫೧

ವರುಷ ಕಾರಣವಿಲ್ಲ ಹರಿಭಜನೆಗೆ ।
ಅರಿತ ಸಜ್ಜನರೆಲ್ಲ ಕೇಳಿ ಸಮ್ಮುದದಿ ಪ.

ತರಳತನದಲಿ ಕಂಡ ಹರಿಯ ಧ್ರುವರಾಯನು ।
ಹಿರಿಯ ತಾನವನಯ್ಯ ಕಂಡನೇನೊ ? ॥
ತರಳ ಪ್ರಹ್ಲಾದ ನರಹರಿಯನು ತಾ ಕಂಡ ।
ಹಿರಿಯನವನಪ್ಪ ತಾ ಮರೆಯಲಿಲ್ಲವೇನೊ ? ೧

ಹಿರಿದಾಗಿ ಬಹುಕಾಲ ಮರದ ಮೇಲ್ಬಾಳುವ ।
ಇರುಳುಗಣ್ಣಿನ ಗೂಗೆ ತಾ ದೊಡ್ಡದೆ ? ॥
ಮರೆಯಾದ ಅರಗಿಣಿ ಹರಿಕೃಷ್ಣ ಎಂದೊದರೆ ।
ಮರಿ ದೊಡ್ಡದೆಂತೆಂದು ಪೇಳುವರು ಬುಧರು ೨

ಸರುವದಾ ಒದರುವರು ಅರಣ್ಯವಾಸಿಗಳು ।
ಮರದಡಿಗೆ ಬಿದ್ದ ಎಲೆಗಳ ತಿನ್ನುತ ॥
ಪರಮಪಾತಕಿ ಅಜಾಮಿಳನು ನಾರಗ ಎನಲು ।
ಭರದಿಂದ ಸಲುಹಿದನು ಪುರಂದರವಿಠಲ ೩

## ೨೫೨

ವ್ಯರ್ಥವಲ್ಲವೆ – ಜನುಮ ವ್ಯರ್ಥವಲ್ಲವೆ ಪ.

ತೀರ್ಥಪದನ ಭಜಿಸಿ ತಾ ಕೃ – ।
ತಾರ್ಥನಾಗದವನ ಜನುಮ ಅ.ಪ

ಒಂದು ಶಂಖವುದಕದಿಂದ ।
ಚೆಂದದಲಭಿಷೇಕ ಮಾಡಿ ॥
ಗಂಧ – ಪುಷ್ಪ ಹರಿಗೆ ಅರ್ಪಿಸಿ ।
ವಂದನೆ ಮಾಡದವನ ಜನುಮ ೧

ಮುಗುಳುದೆನೆಯ ಎಳೆ ತುಳಸಿ ದ – ।
ಳಗಳ ತಂದು ಪ್ರೇಮದಿಂದ ॥
ಜಗನ್ಮೋಹನನ ಪೂಜೆಯ ಮಾಡಿ ।
ಚರಣಕೆರಗದವನ ಜನುಮ ೨

ಕಮಲ ಮಲ್ಲಿಗೆ ಸಂಪಿಗೆ ಜಾಜಿ ।
ವಿಮಲ ಕೇದಗೆ ಪ್ರೇಮದಿಂದ ॥
ಕಮಲನಾಭನ ಅರ್ಚನೆ ಮಾಡಿ ।
ಕರವ ಮುಗಿಯದವನ ಜನುಮ ೩

ಪಂಚಭಕ್ಷ್ಯ ಪಾಯಸ ಘೃತ ।
ಪಂಚಾಮೃತ ಹರಿಗರ್ಪಿಸದೆ ॥
ಮುಂಚೆ ಉಂಡು ಹೊರಗೆ ತಾ ಪ್ರ – ।
ಪಂಚಮಾಡುವವನ ಜನುಮ ೪

ಸಜ್ಜನಸಂಗ ಮಾಡದವನ ।
ದುರ್ಜನ ಸಂಗವ ಬಿಡದವನ
ಅರ್ಜುನಸಖ ಪುರಂದರ ।
ವಿಠಲನನ್ನು ಭಜಿಸಿದವನ ೫

## ೨೫೩

ವಾರಿಜನಾಭನ ಕರುಣವೆ ಸ್ಥಿರ ಸಂ –
ಸಾರವು ಎರವು ಕೇಳಾತ್ಮಾ ।
ಜಾರುತಿದೆ ಆಯುಷ್ಯ ದೂರದ ಮುಕುತಿಗೆ
ದಾರಿ ಯಾವುದು ಪೇಳಾತ್ಮಾ ಪ.

ಸತಿ ಸುತರೆಂಬಾಶೆಯ ಬಿಡು ಮುಂದಿನ ।
ಹಿತವರವರುಂಟೇನಾತ್ಮಾ ॥
ಮತಿಗೆಟ್ಟು ಕೆಡಬೇಡ ಮರಣ ತಪ್ಪದು ಮುಂದೆ ।
ಗತಿಯಾವುದು ಹೇಳಾತ್ಮ ? ೧

ಎರವಿನ ಸಿರಿಗೆ ನೀ ಬಿರಿಬಿರಿದು ಬಿಚ್ಚುವೆ ।
ನೀರ ಕಡೆದರೆ ಬೆಣ್ಣೆಯುಂಟೇನಾತ್ಮ ॥
ಉರಗನ ಹೆಡೆಯಲಿ ನೆರಳ ಕೋರಿದ ಕಪ್ಪೆ ।
ಸ್ಥಿರವೆಂದು ಬಗೆವರೇನಾತ್ಮಾ ? ೨

ಆನೆ ಕುದುರೆ ಒಂಟೆ ಸೇನೆ ಭಾಂಡಾರವ
ಏನು ಪಡೆದರೇನಾತ್ಮಾ ॥
ನಾನಾಪರಿಯಿಂದ ಕಳೆದು ಉಳಿದು ಮುನ್ನ
ಹಾನಿ ತಪ್ಪದು ಕೇಳಾತ್ಮ ೩

ಕೆರೆಯ ಕಟ್ಟಿಸು ಪೂದೋಟವ ಹಾಕಿಸು ।
ಸೆರೆಯ ಬಿಡಿಸು ಪುಣ್ಯಾವಾತ್ಮಾ ॥
ಮರೆಯದೆ ಮನೆಗೆ ಬಂದವರಿಗನ್ನವನಿತ್ತು ॥
ಪರಮಪದವಿ ಕಂಡೆಯಾತ್ಮಾ ೪

ಲೆತ್ತ – ಪಗಡೆ– ಚದುರಂಗ ಜೂಜಾಟವ ।
ಮತ್ತಾಡಿ ಕೆಡಬೇಡವಾತ್ಮಾ ॥
ಭಕ್ತಿಯಲಿ ಪುರಂದರವಿಠಲನ ನೆನೆದರೆ ।
ಮುಕ್ತಿಸಾಧನ ಕಂಡೆಯಾತ್ಮಾ ೫

## ೨೫೪

ವಾಸವನೆ ಮಾಡಿರೋ ಕಾಶಿಯಲಿ ಪ

ವಾಸವನೆ ಮಾಡಿ ಕಾಶಿಯಲಿ ವಸುಧೆಯ ಜನರು ।
ಏಸುಜನ್ಮದ ಪಾಪವನೆ ಕಳೆದು ಯಮಪುರಿಯ ॥
ಹೇಸಿಕೆಯ ರಾಶಿಗಳ ಒದೆದು ಹೆಚ್ಚಳವಾದ ।
ಮೀಸಲಳಿಯದ ಪದವಿ ಸಾರಿರಯ್ಯ ಅಪ

ಶ್ರೀ ವಿಷ್ಣು ಸಿರಿಸಹಿತ ಗರುಡ ವಾಹನನಾಗಿ ।
ಜೀವಿಗಳ ಸ್ಥಿತಿಯ ನೋಡುತ ಬರಲು ಮರುಗಿ ಆ ।
ದೇವಿ ಬಿನ್ನಹ ಮಾಡಲಾಗ ಕರುಣಾಕರನು ।
ಭಾವಿಸಿದನೀ ಕೃತಿಯನು ।
ದೇವತ್ರಿಧಾಮನವ ದಿವ್ಯ ವೈಕುಂಠದೊಳು ।
ಪಾವನಸ್ಥಳವಿದೆಂದೊರೆದ ಧರೆಯೊಳು ಕಾಶಿ ।
ಶ್ರೀ ವಾರಣಾಸಿ ಪಂಚಕ್ರೋಶಮಿತಿಯಲ್ಲಿ
ಆ ವಿಪುಳ ಮಣಿಕರಣಿಕೆ ೧

ಬಲಿಯ ಬಳಿ ಮೂರಡಿಯ ಭೂದಾನವನೆ ಬೇಡಿ ।
ನೆಲನಳೆಯೆ ಈರಡಿಗೆ ಸಾಲದಿರೆ ಬ್ರಹ್ಮಾಂಡ ।
ಬಲಪದದ ನಖದಿ ಸೀಳಲ್ಕೆ ಬಹಿರಾವರಣ ।
ಜಲಸುರಿಯೆ ಅಂಗುಟದಲಿ ॥

ಸಲೆ ತೀರ್ಥವೆಂದಜ ಕಮಂಡಲದೊಳಗೆ ಧರಿಸಿ ।
ತೊಳೆದನಾ ಚರಣಗಳ ಬಲು ಗಂಗೆ ಬರಲು ಜಡೆ – ।
ತಲೆಯೊಳಿಟ್ಟಾ ಶಿವ ಭಗೀರಥನ ಯತ್ನದಿಂ ।
ದಿಳಿದಿಹಳು ಕಾಶಿಯಲ್ಲಿ ೨

ಪರಮನಿರ್ಮಲ ಶುಭ್ರತರದ ಭಾಗೀರಥಿಯ
ನಿರಜೆ ನೀಲಾಭೆ ಯಮುನೆಯ ಮಧ್ಯದಲಿ ಕಾರ್ತ ।
ಸ್ವರವರ್ಣದಿಂದಲ್ಲಿ ಗುಪ್ತಗಾಮಿನಿಯಾದ ।
ಸರಸತಿಯ ಸಂಗಮದಲಿ ॥
ಮೆರೆಯುವ ತ್ರಿವೇಣಿಯೆನಿಸುವ ತೀರದಲ್ಲಿ ವಟ – ।
ತರುಛಾಯೆಯಲ್ಲಿಹುದು ದೇವ ಋಷಿ – ಮೌನಿಗಣ ೩

## ೨೫೫

ವಿಷಯದ ವಿಚಾರ ಬಿಡು ವಿಹಿತಕರ್ಮವ ಮಾಡು ।
ವೈರಾಗ್ಯ ಭಾಗ್ಯಬೇಡು ಪ.

ವಿಷವೆಂದು ಕಾಮ – ಕ್ರೋಧಗಳೆಲ್ಲವೀಡಾಡು ।
ಮಸಣಮನವೇ ಮಾಧವನನು ಕೊಂಡಾಡು ಅಪ

ಅನುದಿನದಿ ಹರಿಕಥೆಯ ಕೇಳಿ ಸಂತೋಷಪಡು ।
ದಿನದಿನವು ಸಜ್ಜನರ ಕೂಡು ॥
ಮನಮುಟ್ಟಿ ದುರಾಚಾರ ಮಾಳ್ಪರನು ನೀ ಕಾಡು ।
ಹಣ – ಹೊನ್ನು ಪರಹೆಣ್ಣು ಹೆಂಟೆಯಂತೆ ನೋಡು ೧

ವೇದ ಶಾಸ್ತ್ರಾರ್ಥ ತತ್ವದ ವಿಚಾರವ ಮಾಡು ।
ಮಾಧವನ ಭಕ್ತಿ ಬೇಡು ॥
ಪಾದದಲಿ ಪುಣ್ಯತೀರ್ಥದ ಯಾತ್ರೆಮಾಡು ಮಧು – ।
ಸೂದನನ ಕೀರ್ತಿ ಸಂಕೀರ್ತನೆಯ ಮಾಡು ೨

ಅಂಬುಗುಳ್ಳೆಗಳಂತೆ ಎಂದಿಗಿದ್ದರು ದೇಹ ।
ನಂಬಿ ನೀ ಕೆಡಲುಬೇಡ ॥

ಕೊಂಬುವರು ಬಂದರಾಕ್ಷಣಕೆ ಬೆಲೆಯಾಗುವುದು ।
ಅಂಬುಜಾಕ್ಷ ಪುರಂದರವಿಠಲನ ನೆನೆ ಮನವೆ ೩

## ೨೫೬

ವೈದ್ಯ ಬಂದ ನೋಡಿ – ವೆಂಕಟನೆಂಬ ।
ವೈದ್ಯ ಬಂದ ನೋಡಿ ಪ.

ವೈದ್ಯ ಬಂದನು ವೇದವೇದ್ಯ ನೋಡೀಗಲೇ
ಶ್ರೀದೇವಿರಮಣನು ಶ್ರೀನಿವಾಸನೆಂಬ ಅಪ

ಎಷ್ಟು ದಿನದ ರೋಗಗಳೆಂಬುದ ಬಲ್ಲ ।
ಗಟ್ಟಿಯಾಗಿ ಧಾತುರಸಗಳನು ಬಲ್ಲ ॥
ಕಷ್ಟ ಬಡಿಸದಲೆನ್ನ ಭವರೋಗ ಬಿಡಿಸುವ ।
ಶಿಷ್ಟವಾದ ದೇಹ ಕೊಟ್ಟು ಕಾಯುವನಿವ ೧

ಹೊನ್ನು – ಹಣಂಗಳ ಅನ್ನವ ಅನುಸರಿಸಿ ।
ತನ್ನ ದಾಸನೆಂಬ ನಿಜವ ನೋಡಿ ॥
ಚೆನ್ನಾಗಿ ಜಿಹ್ವೆಗೆ ಸ್ವಾದವಾಗಿರುವಂಥ ।
ತನ್ನ ನಾಮಾಮೃತ ದಿವ್ಯ ಔಷಧವೀವ ೨

ಈತ ದಿಟ್ಟಿಸಿ ನೋಡೆ ಎಳ್ಳಷ್ಟು ರೋಗವಿಲ್ಲ ।
ಈ ತನುವಿಗೆಂದೆಂದು ರೋಗಬರಲರಿಯದು ॥
ಈತ ಅನಂತರೂಪದಿ ಜೀವರಿಗೆ ಮುನ್ನ ।
ಪ್ರೀತಿಯಿಂದಲಿ ಭವರೋಗ ಬಿಡಿಸುವ ೩

ಧರ್ಮವೈದ್ಯನಿವ ಜಗಕ್ಕೆಲ್ಲ ಒಬ್ಬನೆ ।
ಮರ್ಮಬಲ್ಲ ರೋಗಜೀವಂಗಳ ॥
ನಿರ್ಮಲವಾಗಿಹ ತನ್ನ ನಾಮಸ್ಮರಣೆ ।
ಒಮ್ಮೆ ಮಾಡಲು ಭವರೋಗ ಬಿಡಿಸುವ ೪

ಅನ್ಯ ವೈದ್ಯನೇಕೆ ಅನ್ಯ ಔಷಧವೇಕೆ ? ।
ಅನ್ಯ ಮಂತ್ರ - ತಂತ್ರ - ಜಪವೇತಕೆ ? ॥
ಚೆನ್ನ ಪುರಂದರವಿಠಲನ್ನ ನೆನೆದರೆ ।
ಮನ್ನಿಸಿ ಸಲಹುವ ವೈದ್ಯಶಿರೋಮಣಿ ೫

## ೨೫೭

ಶಕ್ತನಾದರೆ ನಂಟರೆಲ್ಲ ಹಿತರು - ಅ
ಶಕ್ತನಾದರೆ ಆಪ್ತರವರೆ ವೈರಿಗಳು ಪ.

ಕಮಲಾರ್ಕರಿಗೆ ನಿರುತ ಕಡುನಂಟುತನವಿರಲು
ಕಮಲ ತಾ ಜಲದೊಳಗೆ ಆಡುತಿಹುದು
ಕ್ರಮತಪ್ಪಿ ನೀರಿನಿಂದ ತಡಿಗೆ ಬೀಳಲು ರವಿಯ
ಅಮಿತ ಕಿರಣಗಳಿಂದ ಕಂದಿ ಪೋಗುವುದು ೧

ವನದೊಳುರಿ ಸುಡುತಿರಲು ವಾಯು ತಾ ಸೋಂಕಲ್ಕೆ
ಘನ ಪ್ರಜ್ವಲಿಸುತಿಹುದು ಗಗನಕಡರಿ
ಮನೆಯೊಳಿರ್ದಾ ದೀಪ ಮಾರುತನು ಸೋಂಕಿದರೆ
ಘನಶಕ್ತಿ ತಪ್ಪಿ ತಾ ನಂದಿ ಹೋಗುವುದು ೨

ವರದ ಶ್ರೀ ಪುರಂದರವಿಠಲನ ದಯವಿರಲು
ಸರುವ ಜನರೆಲ್ಲ ಮೂಜಗದಿ ಹಿತರು
ಕರಿಯ ಸಲಹಿದ ಹರಿಯ ಕರುಣ ತಪ್ಪಿದ ಮೇಲೆ
ಮೊರೆಹೊಕ್ಕರೂ ಕಾಯ್ವ ಮಹಿಮರುಂಟೇ ದೇವ ೩

## ೨೫೮

ಸಕಲವೆಲ್ಲವು ಹರಿಸೇವೆಯೆನ್ನಿ
ರುಕುಮಿಣಿಯ ರಮಣ ವಿಠಲನಲ್ಲದಿಲ್ಲವೆನ್ನಿ ಪ.

ನುಡಿಗಳೆಲ್ಲವು ನಾರಾಯಣನ ಕೀರ್ತನೆಯೆನ್ನಿ
ನಡೆವುದೆಲ್ಲವು ಹರಿಯಾತ್ರೆಯೆನ್ನಿ ॥

ಕೊಡುವುದೆಲ್ಲವು ಕಾಮಜನಕಗರ್ಪಿತವೆನ್ನಿ
ಎಡೆಯ ಅನ್ನವು ಶ್ರೀಹರಿಯ ಪ್ರಸಾದವೆನ್ನಿ ೧

ಹೊಸವಸ್ತ್ರ ಉಡುವಲ್ಲಿ ಹರಿಯ ಬೆಳ್ಳುಡೆಯೆನ್ನಿ
ಕುಸುಮ ಪರಿಮಳವು ಕಂಜನಾಭಗೆನ್ನಿ ॥
ಎಸೆವಾಭರಣವು ಯಶೋದೆನಂದನಗೆನ್ನಿ
ಶಶಿಮುಖಿಯರ ಕೂಟ ಸೊಬಗು ಗೋವಳಗೆನ್ನಿ ೨

ಆಟಪಾಟಗಳೆಲ್ಲ ಅಂತರ್ಯಾಮಿಗೆಯೆನ್ನಿ
ನೋಟ ಬೇಟಗಳೆಲ್ಲ ನಾಟಕಧಾರಿಗೆನ್ನಿ ॥
ನೀಟಾದ ವಸ್ತುಗಳೆಲ್ಲ ಕೈಟಭಮರ್ದನಗೆನ್ನಿ
ಕೋಟಲೆ ಸಂಸಾರ ಕಪಟನಾಟಕಗೆನ್ನಿ ೩

ನಿದ್ರೆ ಜಾಗರವು ಸಮುದ್ರಶಯನಗೆನ್ನಿ
ಭದ್ರಗಜನಿಧಿ ವರದಗೆನ್ನಿ
ರೌದ್ರದಾರಿದ್ರವು ರಾಘವನ ಮಾಯೆಯೆನ್ನಿ ಶ್ರೀ
ಮುದ್ರೆ ಧರಿಸಿದವ ಹರಿದಾಸನೆನ್ನಿ ೪

ಅಣು ರೇಣು ತೃಣ ಕಾಷ್ಠ ಪರಿಪೂರ್ಣನಹುದೆನ್ನಿ
ಎಣಿಸಬಾರದನಂತಮಹಿಮನೆನ್ನಿ
ಸೆಣಸುವ ರಕ್ಕಸರ ಶಿರವ ಚಂಡಾಡುವ
ಪ್ರಣವಗೋಚರ ಪುರಂದರವಿಠಲರಾಯನೆನ್ನಿ ೫

## ೨೫೯

ಸತ್ಯವೇ ಸ್ನಾನ ಜಪ ನೇಮ – ಹೋಮ – ಅ – ।
ಸತ್ಯದಲಿ ನಡೆದು ಮಾಳ್ಪುದು ವ್ಯರ್ಥಕರ್ಮ ಪ.

ಅಪ್ಪಳಿಸಿ ಪರರ ದ್ರವ್ಯಗಳನ್ನು ತಂದುಂಡು ।
ಒಪ್ಪದಲಿ ಉಪವಾಸ ವ್ರತವ ಮಾಡಿ ॥
ತಪ್ಪದಲೆ ತಾ ಸ್ವರ್ಗ ಸೂರೆಗೊಂಬುವನೆಂಬ ।
ಸರ್ಪಗಳು ಮಾಡಿದಪರಾಧವೇನಯ್ಯ ? ೧

ಭಂಡು ಮಾಡಿ ಬಾಯಿ ತೆರಿಸ್ಯಾಳು – ನಿನ್ನ
ಕೊಂಡ ಕೋತಿಯಂತೆ ಕುಣಿಸ್ಯಾಳು ೪

ಕರೆಕರೆ ಸಂಸಾರ ಸ್ಥಿರವಲ್ಲ – ಈ
ದುರುಳ ಹೆಣ್ಣಿನ ಸಂಗ ಸುಖವಿಲ್ಲ
ನೆರೆದೊರೆಯವರು ನಗುವರೆಲ್ಲ – ನಮ್ಮ
ಪುರಂದರವಿಠಲನು ತಾ ಬಲ್ಲ ೫

## ೨೬೧

ಸಂಗವೇತಕೆ ಅಲ್ಪರೊಡನೆ ಗುಣವಿಲ್ಲ
ಮಂಗ ಮನುಜನ ಕೂಡ ಮಾತಾಡಸಲ್ಲ ಪ.

ಪರರ ಕೆಣಕಿ ತನ್ನ ಹಿರಿಯತನ ಕೆಡಲೇಕೆ
ಹರಕೆಯಿಲ್ಲದ ಮೇಲೆ ಹಾರಯಿಸಲೇಕೆ
ಮುರುಕು ಮನೆಯಲಿ ತಾ ಕಷ್ಟವ ಪಡಲೇಕೆ
ಸರಿಬಾರದವರೊಡನೆ ಸರಸ ಮಾತುಗಳೇಕೆ ೧

ತೊತ್ತಿನ ಕೂಡಾಡಿ ಅತಿದೀಕ್ಷೆ ಕೆಡಲೇಕೆ
ಹೊತ್ತಿಗಲ್ಲದವನ ಕೂಡ ಗೆಳೆತನದ ಮಾತೇಕೆ
ರತ್ನವನು ನಾಯ ಕೊರಳಿಗೆ ಸುತ್ತಿ ಬಿಡಲೇಕೆ
ಕತ್ತೆಯ ಮೇಲೇರಿ ಕೆಡಲೇಕೆ ಮನುಜಾ ೨

ನೆಲೆ ತಪ್ಪಿದ ಮೇಲೆ ನಂಟ – ಬಂಧುಗಳೇಕೆ
ಸಲುಗೆಯಿಲ್ಲದ ಮೇಲೆ ಛಲವು ತನಗೇಕೆ
ಬುಲುದೈವ ಪುರಂದರವಿಠಲನಿರಲಿಕ್ಕೆ
ಹಲವು ದೈವದ ಗೊಡವೆ ನಮಗೇಕೆ ಮನುಜಾ ೩

## ೨೬೨

ಸ್ಮರಣೆಯೊಂದೆ ಸಾಲದೆ – ಗೋವಿಂದನ ।
ಸ್ಮರಣೆಯೊಂದೆ ಸಾಲದೆ ಪ.

ಪರಿಪರಿ ಸಾಧನ ಭ್ರಾಂತಿಯ ಬಿಡಿಸುವ ।
ಪರಮಾತ್ಮನ ಪಾದ ನೆರೆನಂಬಿದವರಿಗೆ ಅಪ

ಕಡುಮೂರ್ಖನಾದರೇನು – ದಾನ – ಧರ್ಮ – ।
ಕೊಡದಾತನಾದರೇನು ॥
ಬಡವನಾದರೇನು ವಿಜಾತಿಯಾದರೇನು ।
ಒಡನೆ ಪ್ರಹ್ಲಾದನ್ನುದ್ಧರಿಸಿದ ಶ್ರೀಹರಿಯ ೧

ಪಾತಕಿಯಾದರೇನು – ಸರ್ವಲೋಕ – ।
ಘಾತಕಿಯಾದರೇನು ॥
ಮಾತೆಯಂದದಿ ತನ್ನ ದಾಸರ ಸಲಹುವ ।
ಚೇತನಾತ್ಮಕನ ಪಾದವ ನಂಬಿದವರಿಗೆ ೨

ಪಾತಕ ವೆಗ್ಗಳವೊ – ನಾಮವು ಪ್ರಾಯ – ।
ಶ್ಚಿತ್ತಕೆ ವೆಗ್ಗಳವೊ ॥
ಪಾತಕವೆನಗಿಲ್ಲ ಪ್ರಾಯಶ್ಚಿತ್ತ ಮುನ್ನಿಲ್ಲ ।
ಏತರ ಭಯವಯ್ಯ ಪುರಂದರವಿಠಲನ ೩

## ೨೬೩

ಸಾಮಾನ್ಯವಲ್ಲ ಶ್ರೀಹರಿಸೇವೆ ಪ.
ಪಾಮರಜನರಿಗೆ

ಸಾಮಜವರದನ ಪ್ರೇಮದಿ ನೆನೆವುದು
ತಾಮಸ ಬುದ್ಧಿಯ ತಾ ತಗ್ಗಿಸದೆ ಅಪ

ಅಂತರ ಮಲಿನವಳಿಯಲು ಬೇಕು ಸಂತತ ಶ್ರವಣದಿ ಶ್ರೀ
ಕಾಂತನ ಚರಿತವ ಕೇಳಲು ಬೇಕು ಸಂತಸದಿರಬೇಕು
ಸಂತಜನರ ಗುಣ ಸಂತತ ಮನದಿ ನಿ
ರಂತರದಲಿ ತಾ ಚಿಂತಿಸಬೇಕು ೧

ಜ್ಞಾನ ಕರ್ಮೇಂದ್ರಿಯಗಳ ನಿಗ್ರಹಿಸಿ ಜ್ಞಾನವ ಸಂಗ್ರಹಿಸಿ
ಹಾನಿ ವೃದ್ಧಿಗಳೆರಡನು ತಾ ಸಹಿಸಿ ದೀನತೆಯನು ವಹಿಸಿ ॥

ಮಾನಾಪಮಾನ ಸಮಾನವೆಂದರಿದು ನಿ
ಧಾನದಿ ಹರಿಗುಣ ಧ್ಯಾನವ ಮಾಳ್ಪುದು ೨

ಸರ್ವಾಂತರ್ಯಾಮಿ ಶ್ರೀ ಹರಿಯೆಂದು ಸರ್ವೇಶ್ವರನೆಂದು
ಸರ್ವರ ಧಣಿ ಸ್ವರಮಣನೆಂದು ಸರ್ವಾನುರಾಗನೆಂದು
ಸರ್ವಮೂರುತಿ ಶ್ರೀ ಪುರಂದರವಿಠಲನ
ಸರ್ವದಾ ಧ್ಯಾನಿಸಿ ಗರ್ವವಳಿಯಬೇಕು ೩

## ೨೬೪

ಸಾರಿಗೆಯ ಮಾಡೋಣ ಸಜ್ಜನರು ಬನ್ನಿರೋ
ನಾರಾಯಣನ ದಿವ್ಯನಾಮ ಭಾರಿ ಕೊಂಬ ಬನ್ನಿರೋ ಪ.

ಹೃದಯವೆಂಬ ಚೀಲದೊಳಗೆ ಹರಿಯ ನಾಮ ಹೊನ್ನಹಾಕಿ
ತುದಿ ನಾಲಿಗೆಯಿಂದ ತೆಗದು ವೆಚ್ಚವನ್ನು ಮಾಡಿರೊ ೧

ಜ್ಞಾನವೆಂಬ ಎತ್ತಿನಲ್ಲಿ ಕರುಣವೆಂಬ ಗೋಣಿಹಾಕಿ
ದಾನ – ಧರ್ಮವೆಂಬ ದವಸ ಸರಕುಗಳ ತುಂಬಿರೊ ೨

ನೇಮ – ನಿತ್ಯವೆಂಬ ಗಟ್ಟಿ ನಡುವಿನಲ್ಲಿ ಬಿಗಿದು ಸುತ್ತಿ
ಪ್ರೇಮವೆಂಬ ಚೊಕ್ಕ ಬುತ್ತಿ ಸೆರಗಿನಲ್ಲಿ ಕಟ್ಟಿರೋ ೩

ಕಾವಲಿಗರೈವರನ್ನು ಕಾಣದಂತೆ ಠಕ್ಕುದೋರಿ
ಭಾವವೆಂಬ ಮಾರ್ಗದಲ್ಲಿ ಬೇಗ ಬೇಗ ಬನ್ನಿರೊ ೪

## ೨೬೫

ಸುಮ್ಮನೆ ಕಾಲವ ಕಳೆವರೆ – ಯಮ – ।
ಧರ್ಮರಾಯನ ದೂತರೆಳೆಯರೆ ಪ.

ನರಿ – ನಾಯಿ ಜನುಮವು ಬಾರದೆ – ಹಾಗೆ – ।
ನರಜನ್ಮದಲಿ ಬಂದು ಸೇರದೆ ॥

ಹರಿಯ ಸ್ಮರಣೆ ಮಾಡಲಾರದೆ - ಸುಮ್ಮ ।
ನಿರಲು ಪಾಪದ ವಿಷವೇರದೆ ೧

ಬಾಲನಾಗಿದ್ದಾಗ ಬಹುಲೀಲೆ - ಮುಂದೆ ।
ಲೋಲನಾಗಿ ಬಾಳಿದ ಮೇಲೆ ॥
ಮೂಳ ವೃದ್ಧಾಪ್ಯ ಬಂತಾಮೇಲೆ - ಇನ್ನು - ।
ಬಾಳುವುದೆಲ್ಲ ನೂಲಮಾಲೆ ೨

ಮಡದಿ - ಮಕ್ಕಳ ಕೂಡಣ ಬಾಳು - ತನ್ನ ।
ಒಡಲಿಗಾಗೆ ತಾನು ಕರವಾಳು ॥
ಬಿಡದೆ ಸಂಕೀರ್ತನೆ ಮಾಡೇಳು - ಮಿಕ್ಕ - ।
ನುಡಿದ ನುಡಿಗಳೆಲ್ಲವು ಬೀಳು ೩

ಮನೆಮನೆ ವಾರ್ತೆಯು ಸ್ಥಿರವಲ್ಲ - ಈ ।
ಮನುಜರ ಮಾತೇನು ಘನವಲ್ಲ ॥
ವನಜಸಂಭವಗೂ ನಿಶ್ಚಯವಿಲ್ಲ - ಮುಂದೆ ।
ಹನುಮಂತ ಪಟ್ಟಕೆ ಬಹನಲ್ಲ ೪

ಇಂದಿನ ಹಮ್ಮು ನಾಳೆಗೆ ಇಲ್ಲ - ಭವ ।
ಬಂಧನದೊಳು ಸಿಕ್ಕಿ ನರಳಿದೆನಲ್ಲ ॥
ಮುಂದನರಿತು ನಡೆದುದಿಲ್ಲ - ಮೃತ್ಯು ।
ಬಂದಾಗ ಬಿಡಿಸಿಕೊಳ್ಳುವರಿಲ್ಲ ೫

ಮರಣವು ಆವಾಗ ಬರುವುದೋ - ತನ್ನ ।
ಶರೀರವು ಆವಾಗ ಮುರಿವುದೊ ॥
ಕರಣಂಗಳೆಲ್ಲವು ಜರಿವುದೊ - ತನ್ನ ।
ಗರುವದುಬ್ಬಸವೆಲ್ಲ ಮುರಿವುದೊ ೬

ಮರಣಕಾಲಕೆ ಅಜಮಿಳನಾಗ - ತನ್ನ ।
ತರಳನ ನಾರಗನೆಂದು ಕರೆದಾಗ ॥
ಕರುಣದಿ ವೈಕುಂಠ ಪದವೀಗ - ನಿತ್ಯ - ।
ಪುರಂದರವಿಠಲನ ನೆನೆ ಬೇಗ ೭

## ೨೬೬

ಸುಮ್ಮನೆ ದೊರಕುವುದೇ ಶ್ರೀರಾಮನ ದಿವ್ಯನಾಮವು ।
ಜನ್ಮಜನ್ಮಾಂತರದ ದುಷ್ಕರ್ಮ ಹೋದವಗಲ್ಲದೆ ಪ.

ಕಂತುಪಿತನ ಮೂರುತಿಯ ತನ್ನಂತರಂಗದೊಳಿಟ್ಟು ।
ಚಿಂತೆ ಎಲ್ಲ ಬಿಟ್ಟು ನಿಶ್ಚಿಂತನಾದವಗಲ್ಲದೆ ೧

ಭಕ್ತಿರಸದಲಿ ತನ್ನ ಚಿತ್ತಪರವಶನಾಗಿ ।
ಅಚ್ಯುತನ ನಾಮವನು ಬಚ್ಚಿಟ್ಟು ಕೊಂಡವಗಲ್ಲದೆ ೨

ತನ್ನೊಳಗೆ ಇದ್ದ ಮೂರುತಿಯ ಕಣ್ಣೊಳಗೆ ತಂದರೆ ।
ಆನಂದ ಪೂರ್ಣ ಪುರಂದರವಿಠಲನ ನೋಡಿದವಗಲ್ಲದೆ ೩

## ೨೬೭

ಸುಮ್ಮನೆ ಬಾಹೊದೆ ಮುಕುತಿ – ನಮ್ಮ ।
ಚೆನ್ನಾದಿ ಕೇಶವನ ದಯವಾಗದನಕ ಪ.

ಮನದಲ್ಲಿ ದೃಢವಿರಬೇಕು – ದುರ್ ।
ಜನರ ಸಂಗತಿಯನು ನೀಗಲುಬೇಕು ॥
ಅನುಮಾನಂಗಳ ಬಿಡಬೇಕು – ತನ್ನ ।
ತನು – ಮನ ಹರಿಗೆ ಒಪ್ಪಿಸಿ ಕೊಡಬೇಕು ೧

ಕಾಮ – ಕ್ರೋಧವ ಬಿಡಬೇಕು – ಹರಿ ।
ನಾಮಸಂಕೀರ್ತನೆ ಮಾಡಲುಬೇಕು ॥
ಹೇಮದಾಸೆಯ ಸುಡಬೇಕು – ತ ।
ನ್ನಾ ಮನ ಹರಿಯ ಪಾದದಲಿಡಬೇಕು ೨

ಪಾಪಗಳನೆ ಕಳೆಯಬೇಕು – ಜ್ಞಾನ ।
ದೀಪ ಬೆಳಕಿನಲಿ ಲೋಲಾಡ ಬೇಕು ॥
ತಾಪ ರಹಿತಗ್ಯೆಯಬೇಕು – ನಮ್ಮ
ಓಪ ಪುರಂದರವಿಠಲನೊಲಿಯ ಬೇಕು ೩

## ೨೬೮

ಸುಮ್ಮನೆ ವೈಷ್ಣವನೆಂದಿರಿ – ಪರ – ।
ಬ್ರಹ್ಮ ಸುಜ್ಞಾನವನರಿಯದ ಮನುಜನ ಪ.

ಮುಖವ ತೊಳೆದು ನಾಮವಿಟ್ಟವನಲ್ಲದೆ ।
ಮಿಕ್ಕ ಶಾಸ್ತ್ರಂಗಳ ನೋಡಿದನೆ ? ॥
ಸುಖ ಶೃಂಗಾರಕೆ ಮಾಲೆ ಧರಿಸಿದನಲ್ಲದೆ ।
ಭಕುತಿಯ ರಸದೊಳು ಮುಳುಗಿದನೇನಯ್ಯ ೧

ಊರ ಮಾತುಗಳೆಲ್ಲನಾಡಿದನಲ್ಲದೆ ।
ನಾರಾಯಣ ಕೃಷ್ಣ ಶರಣೆಂದನೆ ? ।
ನಾರಿಯರಿಗೆ ಮೆಚ್ಚಿ ಮರುಳಾದನಲ್ಲದೆ ।
ಗುರುಹಿರಿಯರಿಗೆಲ್ಲ ಎರಗಿದನೇನಯ್ಯ ೨

ಗಂಗೆಯಲಿ ಮಣ್ಣು ತೊಳವವನಲ್ಲದೆ ।
ಹಿಂಗದೆ ಸ್ನಾನವ ಮಾಡಿದನೆ ? ।
ರಂಗ ಶ್ರೀ ಪುರಂದರವಿಠಲನ ದಾಸರ ।
ಸಂಗಡ ಕೂಡಾಡಿ ತಿರುಗಿದನೇನಯ್ಯ ೩

## ೨೬೯

ಸುಲಭಪೂಜೆಯ ಕೇಳಿ ಬಲವಿಲ್ಲದವರು
ಕಾಲಕಾಲದ ಕರ್ಮ ಕಮಲಾಕ್ಷಗರ್ಪಿಸಿರಿ ಪ.

ಇರುಳು ಹಚ್ಚುವ ದೀಪ ಹರಿಗೆ ನೀಲಾಂಜನವು ।
ಮರುವುಡುವ ಧೋತರವು ಪರಮವಸ್ತ್ರ ॥
ತಿರುಗಾಡಿ ದಣಿಯುವುದು ಹರಿಗೆ ಪ್ರದಕ್ಷಿಣೆಯು
ಮರಳಿ ಹೊಡೆಮರಳುವುದು ನೂರೆಂಟು ದಂಡ ೧

ನುಡಿವ ಮಾತುಗಳೆಲ್ಲ ಪಾಂಡುರಂಗನ ಜಪವು
ಮಡದಿ ಮಕ್ಕಳು ಎಲ್ಲ ಒಡನೆ ಪರಿವಾರ ॥

ನಡುಮನೆಯೆ ಅಂಗಳವು ಉಡುಪಿ ಭೂವೈಕುಂಠ
ಎಡ ಬಲದ ಮನೆಯವರು ಕಡುಭಾಗವತರು ೨

ಹೀಗೆ ಈ ಪರಿಯಲಿ ನಿತ್ಯ ನೀವರಿತಿರಲು
ಜಗದೊಡೆಯ ಶ್ರೀಕೃಷ್ಣ ದಯವ ತೋರುವನು ॥
ಬೇಗದಿ ತಿಳಿದು ಕೇಳಿ ಹೋಗುತಿದೆ ಆಯುಷ್ಯ
ಯೋಗಿ ಪುರಂದರವಿಠಲ ಸಾರಿ ಪೇಳಿದನು ೩

## ೨೭೦

ಹಂಚಿನ ಇದಿರಲಿ ಹಲ್ಲನು ತೆಗೆಯಲು
ಮಿಂಚುವ ಕನ್ನಡಿಯಾದೀತೆ ? ಪ.

ಮಿಂಚಿನ ಬೆಳಕಲಿ ದಾರಿಯ ನಡೆದರೆ
ಮುಂಚುವ ಊರಿಗೆ ಮುಟ್ಟೀತೆ ? ಅಪ

ಬಾಲರ ಭಾಷೆಯ ನಂಬಿ ನಡೆದರೆ
ಶೀಲದ ಕೆಲಸಗಳಾದೀತೆ ?
ಜೋಲುವ ಹೋತಿನ ಮೊಲೆಗಳ ಹಿಂಡಲು
ಹಾಲಿನ ಹನಿಯದು ಹೊರಟೀತೆ ?
ಕಾಲುವೆ ಬಚ್ಚಲಕುಣಿ ನೀರಿಗೆ – ಘನ
ಬಾಳೆಯ ತೋಟವು ಆದೀತೆ ?
ಮೇಲುಬಣ್ಣದಾ ಆಲದ ಹಣ್ಣು
ನಾಲಿಗೆಸವಿಯನು ಕೊಟ್ಟೀತೆ ? ೧

ಭಾಷೆಯ ನುಡಿಗಳಿಗಾಸೆ ಮಾಡೆ ಮನ
ದಾಸೆಯ ಕಾರ್ಯಗಳಾದೀತೆ ?
ದೋಸೆಯ ಛಿದ್ರದಿ ಆರಿಸೆ ಕಾಳಿನ
ರಾಶಿಯು ಹಸನವು ಆದೀತೆ ?
ಕಾಸಿ ಕಬ್ಬಿಣವ ಗಟ್ಟಿ ಕೂಡಿಟ್ಟರೆ
ಮಾಸದ ಮನೆ ಬದುಕಾದೀತೆ ?

ಕಾಸಾರದೆದುರಿಗೆ ಹರಿಕಥೆ ಹೇಳ್ದರೆ
ಸೂಸಿ ಕೇಳ್ದು ತಲೆದೂಗೀತೆ ? ೨

ಮಿಥ್ಯಾವಚನಿಯ ಮಾತನು ನಂಬಲು
ಹೊತ್ತಿಗೆ ಅದು ಬಂದೊದಗೀತೆ ?
ಸತ್ತವನೆದುರಿಗೆ ಸುತ್ತಲು ಕುಳಿತು
ಅತ್ತರೆ ಆ ಹೆಣ ಕೇಳೀತೆ ?
ನಿತ್ಯನಪುಂಸಕನೈದಲು ತರುಣಿಗೆ
ಚಿತ್ತ ಸುಖವು ಸೂರ್‍ಯಾದೀತೆ ?
ಕುತ್ತಿಗೆಗೊಯ್ಯನ ಕಾಲು ಹಿಡಿದರೆ
ಹತ್ಯದೊಳ್ ಹೇಸಿಕೆ ಹುಟ್ಟೀತೆ ? ೩

ಬೋರಗಲ್ಲಿನ ಮುಂದೆ ಬಡತನ ಹೇಳಲು
ಸಾರಸುಖಕ್ಕನುವಾದೀತೆ ?
ಚೋರನು ಚಂದ್ರಗೆ ಕೈಮರೆ ಮಾಡಲು
ಚೌರ್ಯಕೆ ಕತ್ತಲು ಒದಗೀತೆ ?
ನೀರಿಲ್ಲದ ಕೆರೆಯೊಳಗೆ ಮತ್ಸ್ಯದಾ
ಹಾರಿಗೆ ಮೀನವು ದೊರಕೀತೆ
ಕಾರಣವಿಲ್ಲದ ಲೌಕಿಕ ಕಥೆಯಿಂ
ಘೋರ ನರಕ ಭಯ ತಪ್ಪೀತೆ ? ೪

ಬೆಟ್ಟಕೆ ಕಲ್ಲನು ಹೊತ್ತೊಯ್ದೊಗೆಯಲು
ಹೊಟ್ಟೆಗೆ ಓದನ ಸಿಕ್ಕಿತೆ ?
ಹುಟ್ಟು ಬಂಜೆಗೆ ಹಡೆಯುವ ವ್ಯಥೆ ಹೇಳಲು
ಹೊಟ್ಟೆಯಲಿ ಕಳವಳ ಹುಟ್ಟೀತೆ ?
ಕೆಟ್ಟ ಬಯಸುವರಿಗೆ ಮೃಷ್ಟಾನ್ನವುಣಿಸಲು
ಕೆಟ್ಟ ಮಾತು ಅದು ಬಿಟ್ಟೀತೆ ?
ದಿಟ್ಟ ಪುರಂದರವಿಠಲರಾಯನ
ಬಿಟ್ಟರೆ ಸದ್ಗತಿಯಾದೀತೆ? ೫

## ೨೭೧

ಹಂಚು ಬಲ್ಲುದೆ ಹಲ್ಲ ತೆಗೆದರಪಕಾರವನು
ಮಿಂಚುಳ್ಳ ಕಂಚು – ಕನ್ನಡಿಯಲ್ಲದೆ ಪ.

ಕಳ್ಳ ಬಲ್ಲನೆ ತನ್ನ ಕರುಣದುಪಕಾರವನು ?
ಕೊಳ್ಳಿ ಬಲ್ಲುದೆ ತನ್ನ ಮನೆಯೆಂಬುದ ?
ಸುಳ್ಳ ಬಲ್ಲನೆ ಗ್ರಾಮದೊಳಗಣಾ ಸುದ್ದಿಯನು ?
ಬಳ್ಳಿಬಲೆ ಬಲ್ಲುದೇ ತನ್ನ ವನವೆಂಬುದನು ? ೧

ಬಾಳಬಲ್ಲುದೆ ತಾನು ಮೇಲೊಗೆವ ಫಲಗಳನು ?
ಸೂಳೆ ಬಲ್ಲಳೆ ಮನೆಯ ಬಡತನಗಳ ?
ಖೂಳ ಬಲ್ಲನೆ ಜಾಣರೊಳಗೊಂದು ಸವಿನುಡಿಯ ?
ಕೇಳಬಲ್ಲನೆ ಕಿವುಡ ಏಕಾಂತವ ? ೨

ಯೋಗಿ ಬಲ್ಲನೆ ಭೋಗದೊಳಗಣಾ ಸುದ್ದಿಯನು ?
ಭೋಗಿ ಬಲ್ಲನೆ ಕೆಲಸ – ಉದ್ಯೋಗವ ?
ಕಾಗೆಬಲ್ಲುದೆ ಕೋಗಿಲಂತೆ ಸ್ವರಗೈವುದನು ?
ಗೂಗೆ ಬಲ್ಲುದೆ ಹಗಲ ಹರಿದಾಟವ ? ೩

ಕೋಣ ಬಲ್ಲುದೆ ಕುದುರೆಯಂತೆ ವೈಹಾಳಿಯನು ?
ಕಾಣಬಲ್ಲನೆ ಕುರುಡ ಕನ್ನಡಿಯನು ?
ದೀನವತ್ಸಲ ನಮ್ಮ ಪುರಂದರವಿಠಲನನು
ಕಾಣಬಲ್ಲನೆ ಜ್ಞಾನವಿಲ್ಲದವನು ? ೪

## ೨೭೨

ಹಮ್ಮುನಾಡಲಿಬೇಡ ಹಮ್ಮು ಈಡೇರದು
ಹಮ್ಮಿನಿಂದಲಿ ನೀವು ಕೆಡಬೇಡಿರಯ್ಯ ಪ.

ಮುನ್ನೊಮ್ಮೆ ರಾವಣನು ಜನಕನಾ ಸಭೆಯಲ್ಲಿ
ತನ್ನಳವನರಿಯದಲೆ ಧನುವೆತ್ತಲು

ಉನ್ನತದ ಆ ಧನು ಎದೆಯ ಮೇಲೆ ಬೀಳಲು
ಬನ್ನ ಬಟ್ಟುದ ನೀವು ಕೇಳಿಬಲ್ಲಿರಯ್ಯ ೧

ಕುರುಪತಿಯ ಸಭೆಯಲ್ಲಿ ಕೃಷ್ಣ ತಾ ಬರಲಾಗಿ
ಕರೆದು ಮನ್ನಣೆಯನ್ನು ಮಾಡದಿರಲು
ಧರೆಗೆ ಶ್ರೀಕೃಷ್ಣನಂಗುಟವನಂದೊತ್ತಲು
ಅರಸು ಆಸನ ಬಿಟ್ಟು ಉರುಳಾಡಿದ ೨

ಅತಿ ವೇಗದಲಿ ಕೃಷ್ಣ ಸತ್ಯಭಾಮೆಯ ಕರೆದು
ಸೀತೆ ನೀನಾಗೆಂದು ನೇಮಿಸಿದನು
ಮತಿವಂತೆ ಬಗೆಬಗೆಯ ಶೃಂಗಾರವಾದರೂ
ಸೀತಾಸ್ವರೂಪ ತಾನಾಗಲಿಲ್ಲ ೩

ಹನುಮನನು ಕರೆಯೆಂದು ಖಗಪತಿಯನಟ್ಟಲು
ಮನದಲಿ ಕಡುಕೋಪದಿಂದ ನೊಂದು
ವಾನರನೆ ಬಾಯೆಂದು ಗರುಡ ತಾ ಕರೆಯಲು
ಹನುಮ ಗರುಡನ ತಿರುಹಿ ಬೀಸಾಡಿದ ೪

ಇಂತಿಂತು ದೊಡ್ಡವರು ಈ ಪಾಡು ಪಟ್ಟಿರಲು
ಪಂಥಗಾರಿಕೆ ತರವೆ ನರಮನುಜಗೆ ?
ಚಿಂತಾಯತನು ಚೆಲ್ವ ಪುರಂದರವಿಠಲನ
ಸಂತತವು ನೆನೆ ನೆನೆದು ಸುಖಿಯಾಗೊ ಮನುಜ ೫

## ೨೭೩

ಹರಿಕಥಾಮೃತ ಸವಿಯ ಹರಿದಾಸರಲ್ಲದೆ
ದುರುಳ ಮಾನವರದರ ಪರಿ ಬಲ್ಲರೇನಯ್ಯ ಪ.

ಸ್ತನ್ಯ ಪಾನದ ರುಚಿಯ ಚಿಣ್ಣರು ಬಲ್ಲರಲ್ಲದೆ
ಮಣ್ಣ ಬೊಂಬೆಗಳದರ ಬಗೆ ಬಲ್ಲುವೆ ॥
ಅನ್ನಪಾನದ ರುಚಿಯ ಕೊನೆ ನಾಲಿಗೆಯಲ್ಲದೆ
ಅಣಿ ಮಾಡಿಕೊಡುವ ಆ ಕರ ಬಲ್ಲುದೇನಯ್ಯ ೧

ನವನೀರದಾರ್ಭಟಕೆ ನವಿಲುಗಳು ನಲಿವಂತೆ
ಕಾವು ಕಾವೆಂಬ ಕಾಕವು ಬಲ್ಲುದೆ ? ॥
ದಿವಸಕರನುದಯಿಸಲು ಅರಳುವಬ್ಜಗಳಂತೆ
ದಿವಸಾಂಧ ಪಕ್ಷಿಗಳು ಬಗೆಬಲ್ಲುವೇನಯ್ಯ ೨

ಮೊಲ್ಲೆ – ಮಲ್ಲಿಗೆ ಮುಡಿಯಬಲ್ಲ ಮಾನವರಂತೆ
ಭಲ್ಲೂಕಗಳು ಅದರ ಬಗೆ ಬಲ್ಲುವೆ ?
ಫುಲ್ಲಾಕ್ಷ ಶ್ರೀ ಪುರಂದರವಿಠಲರಾಯನನು
ಬಲ್ಲ ಮಾನವರಲ್ಲದೆಲ್ಲರೂ ಬಲ್ಲರೆ ? ೩

## ೨೭೪

ಹರಿಕಥಾ ಶ್ರವಣ ಮಾಡೊ – ನಿರಂತರ
ಪರಗತಿಗಿದು ನಿರ್ಧಾರ ನೋಡೊ ಪ.

ಸರಸಿಜನಾಭನ ಸರ್ವದಾ ಹೊಗಳುತ
ದುರಿತ ದೂರಕೀಡಾಡೊ – ಮನುಜಾ ೧

ಜ್ಞಾನ – ಭಕುತಿ – ವೈರಾಗ್ಯವೀವ ನಮ್ಮ
ಆನಂದತೀರ್ಥರ ಪಾಡೊ ಮನುಜಾ ೨

ಪರಮಪುರುಷ ಶ್ರೀ ಪುರಂದರವಿಠಲನ
ಚರಣಕಮಲಗಳ ಕೂಡೊ – ಮನುಜಾ ೩

## ೨೭೫

ಹರಿಕೃಷ್ಣಾಚ್ಯುತ ಗೋವಿಂದ – ವಾಸುದೇವ ।
ನರಹರಿ ಎನಬಾರದೆ ? ಪ.

ಉದಯಕಾಲದಿ ಏಳುತ – ಸಿರಿಯರಸನ ।
ಒದಗಿ ಸೇವೆಯ ಮಾಡುತ ॥
ತದನಂತರ ಭೋಜನದಲಿ ಸ್ಮರಿಸುತ ।
ಮದಗಜಗಮನೆಯೊಳ್ ಸರಸವಾಡುತಲೊಮ್ಮೆ ೧

ಸಿರಿ ಬಂದಡಸಿದಾಗ – ಮೆರೆಯದಿರು ।
ಹಿರಿ ಹಿರಿ ಹಿಗ್ಗದಿರು ॥
ನೆರೆ ಬಡತನಕೆ ಜರ್ಜರಿತನಾದೆ ನೀನು ?
ಹರಿನಾಮಸ್ಮರಣೆಯ ಮರೆಯದಿರೆಲೊ ಮನುಜ ೨

ದುಷ್ಟರುಪದ್ರದೊಳಾಗಲಿ – ರಣರಂಗದ ।
ದಿಟ್ಟ ಸಮರದೊಳಾಗಲಿ ॥
ಕಟ್ಟಾರಣ್ಯದೊಳು ಹುಲಿಯು ಬಾಧಿಸುತಿರೆ ।
ಸೃಷ್ಟಿಗೊಡೆಯ ಪುರಂದರವಿಠಲ ಕಾಯ್ವ ೩

## ೨೭೬

ಹರಿ ಕೊಟ್ಟಕಾಲಕ್ಕೆ ಉಣಲಿಲ್ಲ ।
ಹರಿ ಕೊಡದ ಕಾಲಕ್ಕೆ ಬಾಯಿಬಿಡುವೆಯೊ ಪ್ರಾಣಿ ಪ.

ಉಡಲಿಲ್ಲ ಉಣಲಿಲ್ಲ ಕೊಡಲಿಲ್ಲ ಧರ್ಮವ ।
ಅಡಗಿಸಿ ಇಟ್ಟಿಹೆ ಮಣ್ಣೊಳಗೆ ॥
ಬಡತನ ಬಂದು ಕಂಬಳಿ ಹೊದೆವಾಗ ।
ತುಡುಗು ನಿನ್ನ ಜನ್ಮ ಸುಡು ಕಾಣೊ ಖೋಡಿ ೧

ಹುಗ್ಗಿಯು ತುಪ್ಪವು ಮನೆಯೊಳಗಿರಲಿಕ್ಕೆ ।
ಗುಗ್ಗರಿಯನು ಮಾಡಿ ತಿನ್ನುವಿಯೊ ॥
ವೆಗ್ಗಳವಾದ ಯಮದೂತರು ಎಳೆವಾಗ ।
ಬುಗ್ಗೆಯ ಹೊಯ್ಕೊಂಡು ಹೋದೆಯೊ ಖೋಡಿ ೨

ನಂಟರು – ಬಂಧುಗಳೂರೊಳಗಿರಲಿಕ್ಕೆ ।
ಕುಂಟು ಸುದ್ದಿಗಳನು ಆಡುವೆ ನೀ ॥
ಕಂಟಕರಾದ ಯಮದೂತರು ಎಳೆವಾಗ ।
ನಂಟ ಪುರಂದರವಿಠಲನ ದ್ರೋಹಿ ೩

## ೨೭೭

ಹರಿದಾಡುವಂಥ ಮನವ ನಿಲಿಸುವುದು ಬಹುಕಷ್ಟ ಪ.

ಕಾಶಿಗೆ ಹೋಗಲುಬಹುದು
ದೇಶ ತಿರುಗಲುಬಹುದು
ಆಶೆ ಸುಟ್ಟು ತಾನಿರಬಹುದು ೧

ಜಪವ ಮಾಡಲುಬಹುದು
ತಪವ ಮಾಡಲುಬಹುದು
ಉಪವಾಸದಲ್ಲಿ ತಾನಿರಬಹುದು ೨

ಸ್ನಾನ ಮಾಡಲುಬಹುದು
ದಾನ ಮಾಡಲುಬಹುದು
ಧ್ಯಾನದಿ ಪುರಂದರವಿಠಲನ ಚರಣದಿ ೩

## ೨೭೮

ಹರಿದಾಸರಿಗಿನ್ನು ಸರಿಯುಂಟೆ – ನರ – ।
ಹರಿಯ ನಂಬಿದವರಿಗೆ ಕೇಡುಂಟೆ ಮನುಜಾ ? ಪ.

ಮಾರಿಯ ಕೈಯಲಿ ನೀರ ಹೊರಿಸುವರು ।
ಘೋರ ಮಸಣಿಯಿಂದ ಕಸ ಬಳಿಸುವರು ॥
ಕ್ರೂರ ಮೃತ್ಯುವಿನ ಕೈ ಭತ್ತ ಕುಟ್ಟಿಸುವರು ।
ಜವನ ಕೈಯಲಿ ಜಂಗುಳಿ ಕಾಯಿಸುವರು ೧

ಬೊಮ್ಮ ಬೀರ ಬೇತಾಳ ಜಟ್ಟಿಗರೆಲ್ಲ ।
ಕರ್ಮದ ಕಡಲೊಳು ಮುಳುಗಿರಲು ॥
ಒಮ್ಮೆ ಹರಿದಾಸರ ಪಾದ ಸೋಕಲು ಬೇಗ ।
ಕರ್ಮದ ಕಡಲಿಂದ ಕಡೆಹಾಯಿಸುವರು ೨

ಜಕ್ಕಣಿ ಜಲದೇವರು ಮೊದಲಾದ ।
ಬಿಕ್ಕಾರಿ ದೈವವ ಪೂಜಿಸರು ॥
ಲೋಕನಾಯಕ ಸಿರಿ ಪುರಂದರವಿಠಲನ ।
ಸಾಕಾರವಾದಂಥ ಪರಮ ಭಾಗವತರು ೩

## ೨೭೯

ಹರಿ ನಿನ್ನೊಲುಮೆಯು ಆಗುವತನಕ ।
ಅರಿತು ಸುಮ್ಮಗಿರುವುದೆ ಲೇಸು ಪ.

ಮರಳಿ ಮರಳಿ ತಾ ಪಡೆಯದ ಭಾಗ್ಯವು ।
ಮರುಗಿದರೆ – ತನಗಾದೀತೆ ? ಅಪ

ದೂರು ಬರುವ ನಂಬಿಗೆಯನು ಕೊಟ್ಟರೆ ।
ದುರ್ಜನ ಬರುವುದು ತಪ್ಪೀತೆ ॥
ದೂರ ನಿಂತು ಮೊರೆಯಿಟ್ಟು ಕೂಗಿದರೆ ।
ಚೋರರಿಗೆ ದಯ ಪುಟ್ಟೀತೆ ।
ಜಾರನಾರಿ ತಾ ಪತಿವ್ರತೆ ಎನ್ನಲು ।
ಜಾಣರಿಗೆ – ನಿಜ ತೋರೀತೆ ॥
ಊರ ಬಿಟ್ಟು ಬೇರೂರಿಗೆ ಹೋದರೆ ।
ಪ್ರಾರಬ್ಧವು ಬೇರಾದೀತೆ ೧

ಪಾಟುಪಡುವುದು ಪಣೆಯಲ್ಲಿರಲು ।
ಪಟ್ಟೆಮಂಚ ತನಗಾದೀತೆ ॥
ಹೊಟ್ಟೆಯಲ್ಲಿ ಸುತರಿಲ್ಲೆಂದು ಹೊರಳಲು ।
ಹುಟ್ಟು ಬಂಜೆಗೆ ಮಕ್ಕಳಾದೀತೆ ?॥
ಬೆಟ್ಟದ ನವಿಲಿಗೆ ಕಣ್ಣೀರು ಬಂದರೆ ।
ಬೇಟೆಗಾರಗೆ ದಯ ಪುಟ್ಟೀತೆ ॥
ಕೆಟ್ಟ ಹಾವು ತಾ ಕಚ್ಚಿದ ವಿಷವದು ।
ಬಟ್ಟೆಯಲೊರಸಲು ಹೋದೀತೆ ೨

ಧನಿಕನ ಕಂಡು ಪಾಡಿ ಪೊಗಳಿದರೆ ।
ದಾರಿದ್ರ್ಯವು ತಾ ಹಿಂಗೀತೆ ॥
ದಿನದಿನ ನೊಸಲೊಳು ನಾಮವನಿಟ್ಟರೆ ।
ದೇವರಿಗೆ ತೃಪ್ತಿಯಾದೀತೆ ॥
ಎಣಿಸಿಕೊಂಡು ಎಳೆ ಹಂಜಿಯ ನೂತರೆ ।
ಅಣೆಯದ ಸಾಲವು ತೀರೀತೆ ।
ಅನುದಿನದಲಿ ಶ್ರೀ ಪುರಂದರವಿಠಲನ ।
ನೆನೆಯದಿದ್ದರೆ ಭವ ಹಿಂಗೀತೆ ೩

## ೨೮೦

ಹರಿಪದಯುಗಲವ ನಿತ್ಯ ನೆನೆದವಗೆ ।
ಪರಮಪದವಿಯೇ ಸಾಕ್ಷಿ ॥
ಹರಿ – ಗುರು ದೂಷಣ ಮಾಡಿದ ಮನುಜಗೆ ।
ನರಕರೌರವವೆ ಸಾಕ್ಷಿ ಪ.

ಕಡುಭಕ್ತಿಯಲಿ ಕೃಷ್ಣನ ನೆನೆದರೆ ।
ನಡೆಯಲಿ ಸತ್ಯವೆ ಸಾಕ್ಷಿ ॥
ದೃಢ ಭಕುತಿಯಿಂದ ಉಣಬಡಿಸಿದವಗೆ ।
ಷಡುರಸಾನ್ನವೇ ಸಾಕ್ಷಿ ೧

ತಾನೊಂದುಂಡು ಪರರಿಗೊಂದಿಕ್ಕುವಗೆ ।
ಗುಲ್ಮರೋಗವೇ ಸಾಕ್ಷಿ ॥
ಹೀನನಾಗಿ ಹಿರಿಯರನು ದೂಷಿಪಗೆ ।
ಹೀನ ನರಕವೇ ಸಾಕ್ಷಿ ೨

ಕನ್ಯಾದಾನವ ಮಾಡಿದವಗೆ ದಿವ್ಯ ।
ಹೆಣ್ಣಿನ ಭೋಗವೆ ಸಾಕ್ಷಿ ॥
ಕನ್ಯಾದಾನವ ಮಾಡದ ಮನುಜಗೆ ।
ಹೆಣ್ಣಿನ ದೈನ್ಯವೇ ಸಾಕ್ಷಿ ೩

ಅನ್ನದಾನ ಮಾಡಿದ ಮನುಜಗೆ ದಿ - ।
ವ್ಯಾನ್ನವನುಂಬುದೆ ಸಾಕ್ಷಿ ॥
ಅನ್ನದಾನ ಮಾಡದ ಮನುಜಗೆ ತಿರಿ -
ದುಣ್ಣುತಿರುವುದೇ ಸಾಕ್ಷಿ ೪

ಕ್ಷೇತ್ರದಾನ ಮಾಡಿದ ಮನುಜಗೆ ಏಕ - ।
ಛತ್ರವನಾಳ್ವುವದೆ ಸಾಕ್ಷಿ ॥
ಪಾತ್ರವರಿತು ಧರ್ಮಮಾಡಿದವಗೆ ಸತ್ -
ಪುತ್ರರಾಗುವುದೆ ಸಾಕ್ಷಿ ೫

ಕಂಡ ಪುರುಷರಿಗೆ ಕಣ್ಣಿಡುವ ನಾರಿಗೆ ।
ಗಂಡನು ಕೇಳುವುದೆ ಸಾಕ್ಷಿ ॥
ಪುಂಡನಾಗಿ ಪರಸ್ತ್ರೀಯರ ಸೇರುವಗೆ ।
ಹೆಂಡಿರ ಕಳೆವುದೆ ಸಾಕ್ಷಿ ೬

ಭಕ್ತಿಯರಿಯದ ಅಧಮನಿಗೊಂದು ।
ಕತ್ತಲಮನೆಯೇ ಸಾಕ್ಷಿ ॥
ಮುಕ್ತಿಪಡೆವುದಕೆ ಪುರಂದರವಿಠಲನ ।
ಭಕ್ತನಾಗುವುದೆ ಸಾಕ್ಷಿ ೭

## ೨೮೧

ಹರಿಭಕುತಿ ಸುಖವು ಅನುಭವಿಗಲ್ಲದೆ ಮಿಕ್ಕ - ।
ನರಗುರಿಗಳದರ ಸ್ವಾದವ ಬಲ್ಲವೆ ? ಪ.

ಎಸೆವ ತಂಗಿನಕಾಯ ಎತ್ತು ಮೆಲಬಲ್ಲುದೆ ?
ರಸಭರಿತ ಖರ್ಜೂರ ಕುರಿ ಮೆಲ್ಲಬಲ್ಲುದೆ ? ॥
ಹಸು ಕರೆದ ಪಾಲಸವಿ ಸುಖಿಗಳಿಗೆ ಅಲ್ಲದೆ ।
ಕಸದಿ ವಾಸಿಸುವ ಉಣ್ಣೆಗಳು ಬಲ್ಲವೆ ? ೧

ಸರಸಿಜದ ಪರಿಮಳವ ಮಧುಕರನು ಅರಿವಂತೆ ।
ನಿರುತ ಬಳಿಯೊಳಗಿರುವ ಕಪ್ಪೆಗಳು ಬಲ್ಲುವೆ ? ।

ಸರಸ ಪಂಚಾಮೃತವ ಶ್ವಾನ ತಾ ಬಲ್ಲುವೆ ? ।
ಹರಿಕಥಾ ಶ್ರವಣಸುಖ ಕತ್ತೆಯದು ಬಲ್ಲುದೆ ? ೨

ಅಂಧ ದೀಪದ ಬೆಳಕ ಮೂಢ ಮಾತಿನ ಸವಿಯ ।
ಮಂದ ಬಧಿರನು ಹಾಡ ಕೇಳಿ ಸುಖಿಸುವರೆ ? ॥
ಅಂದ ಮುತ್ತಿನ ದಂಡೆ ಕಪಿಗಳಿಡಬಲ್ಲುವೆ ? ।
ಮಂದಮತಿ ಪುರಂದರವಿಠಲನನು ಬಲ್ಲನೆ ? ೩

## ೨೮೨

ಹರಿಭಕುತಿಯುಳ್ಳವರ ಶರೀರವೆ ಕುರುಕ್ಷೇತ್ರ – ಇವರು ।
ನರರೆಂದು ಬಗೆವವರೆ ನರಕವಾಸಿಗಳು ಪ.

ಸದಮಲನ ಧ್ಯಾನಿಸುವ ಹೃದಯ ಕಾಶೀಪುರವು ।
ಮಧುವೈರಿಗೊಲಿದ ಮನ ಮಣಿಕರ್ಣಿಕೆ ॥
ಪದುಮನಾಭನ ಪಾಡಿ ಪೊಗಳುವಾತನ ದಿವ್ಯ ।
ವದನವು ಅಯೋಧ್ಯೆಪುರವಾಗಿ ಇಹುದು ೧

ನರಹರಿಯನೀಕ್ಷಿಸುವ ನಯನ ದ್ವಾರಾವತಿಯು ।
ಹರಿಯ ನಿರ್ಮಾಲ್ಯ ವಾಸಿಪ ಮೂಗು ಮಥುರೆ ॥
ಕರುಣಾಕರನ ಕಥೆಯ ಕೇಳ್ವ ಕಿವಿ ಕೇದಾರ ।
ಸಿರಿಧರಗೆ ಎರಗುವಾ ಶಿರವೆ ಬದರಿ ೨

ಚಕ್ರಧರಗೆ ಪೋಪ ಚರಣ ಮಾಯಾವತಿ ತ್ರಿ – ।
ವಿಕ್ರಮನ ಪೂಜಿಸುವ ಕರವೆ ಕಂಚಿ ॥
ಅಕ್ರೂರಗೊಲಿದ ಸಿರಿ ಪುರಂದರವಿಠಲನ
ಸತ್ಕೃಪೆಯು ಉಳ್ಳವರ ಅಂಗ ಸಾಯುಜ್ಯವು ೩

## ೨೮೩

ಹರಿಯ ಚರಣವೆಂಬ ಸುರಧೇನುವನು
ಗುರುಬೋಧೆಯೆಂಬ ಕಣ್ಣಿಯಲಿ ಕಟ್ಟಿರಯ್ಯ ಪ.

ಭಕುತಿಯೆಂಬ ಕರುವನೆ ಬಿಟ್ಟು ನಿರುತ ವಿ
ರಕುತಿಯೆಂಬ ಚೆನ್ನದಳಿಯ ಹಾಕಿ ॥
ಯುಕುತವಾದ ನಿತ್ಯಕಾಯ ಚರಿಗೆಯೊಳು
ಮುಕುತಿನಾಮಾಮೃತ ಕರೆದುಕೊಳ್ಳಿರಯ್ಯ ೧

ಕಾಮ ಕ್ರೋಧ ಲೋಭ, ಮೋಹ ಮದ ಮತ್ಸರಗಳೆಂಬ
ಹಮ್ಮೆಂಬ ಕುರುಳನೆ ತಾಳಿ ಹಾಕಿ ॥
ತಾಮಸ ಜ್ಞಾನಾಗ್ನಿ ಪುಟಗೈದು ಇಂದ್ರಿಯ
ನೇಮದ ನೀರ ಬೆರಸಿ ಕಾಯಲಿಡಿರೊ ೨

ಶಾಂತಗುಣವೆಂಬ ಹದನರಿತು ಆರಿಸಿ ಮತ್ತೆ
ಭ್ರಾಂತಮನ ಮಜ್ಜಿಗೆಯ ಹೆಪ್ಪನಿಕ್ಕಿ ॥
ಕಾಂತವಿಷ್ಣು ಮಾಯಾಮಂಥದಿ ಶೋಧಿಸಿ ಸಿ –
ದ್ಧಾಂತವೆಂಬ ಕಡೆಗೋಲ ನೇಣನೆ ಪಿಡಿದು ೩

ಪರಬೊಮ್ಮನೆನಿಪ ಬೆಣ್ಣೆಯ ಮುದ್ದಿಯನೆ ತೆಗೆದು
ಶರಣಮಣಿಯೆಂಬ ತುಪ್ಪವನೆ ಕಾಯಿಸಿ ॥
ಮರಣವೆಂಬ ನೊರೆ ತೆಗೆದೊಗೆದು ಅಮೃತವ
ನಿರುತ ಹೃದಯವೆಂಬ ಕೊಡವನೆ ತುಂಬಿರೊ ೪

ಅನವರತ ಹರಿಸ್ಮರಣೆಯೆಂಬ ಬೀಸೂರಿಗೆ
ಅನುವಾಗಿ ಕುಳಿತುಂಡು ಸುಖದಿ ತೇಗಿ ॥
ಚಿನುಮಯ ಚಿದಾನಂದ ಪುರಂದರವಿಠಲನ
ಅನುದಿನ ನೆನೆನೆನೆದು ಸುಖಿಯಾಗಿರಯ್ಯ ೫

## ೨೮೪

ಹರಿಯಧಿಕ ಹರನಧಿಕ ಎಂದು ಹೋರಾಡದಿರಿ ।
ಹರಿಹರರ ಭಕ್ತರೇ ಸಾಕ್ಷಿ ಲೋಕದೊಳು ಪ.

ಹರಿಯೆಂದು ಪ್ರಹ್ಲಾದ ಬಂದ ದುರಿತವ ಗೆಲಿದ ।
ಹರನೆಂದು ಅವನ ಪಿತ ತಾನೆ ಅಳಿದ ॥

ಹರಿಯೆಂದ ವಿಭೀಷಣನು ಸ್ಥಿರಪಟ್ಟವೈದಿದ ।
ಹರನೆಂದ ರಾವಣನು ಹತನಾದನಯ್ಯ ೧

ಹರಿಯೆಂದು ಭೀಮ ಪರಿಪೂರ್ಣಕಾಮನು ಆದ ।
ಹರನೆಂದ ಆ ಜರಾಸಂಧ ಹತನಾದ ॥
ಹರಿಯು ಬಾಗಿಲ ಕಾಯ್ದು ಬಲಿ ಭಾಗ್ಯವಂತನಾದ ।
ಹರನು ಬಾಗಿಲ ಕಾಯ್ದು ಬಾಣನಳಿದ ೨

ಹರನ ವರವನು ಪಡೆದ ಭಸ್ಮಾಸುರನು ಅವನ ।
ಶಿರದಲ್ಲಿ ತನ್ನ ಕರವಿಡಲು ಬರಲು ॥
ಹರಿ ನೀನೆ ಗತಿಯೆಂದು ತ್ರಿಪುರಾರಿ ಮೊರೆಯಿಡಲು ।
ವರದ ಪುರಂದರವಿಠಲ ಕಾಯ್ದುದರಿಯ ? ೩

## ೨೮೫

ಹರಿಯೆನ್ನು ಹರಿಯೆನ್ನು ಹರಿಯೆನ್ನು ಪ್ರಾಣಿ
ಹರಿಯೆನ್ನದಿದ್ದರೆ ನರಹರಿಯಾಣೆ ಪ.

ಹೆಂಗಸು ಮಕ್ಕಳು ಹೆರವರು ಪ್ರಾಣಿ ।
ಸಂಗಡ ಬರುವವರೊಬ್ಬರ ಕಾಣೆ ೧

ದಾನವಿಲ್ಲದ ದ್ರವ್ಯ ಗಳಿಸಿದೆ ಪ್ರಾಣಿ
ಪ್ರಾಣ ಹೋಗುವಾಗ ಕಾಣೆ ದುಗ್ಗಾಣಿ ೨

ನೀರ ಮೇಲಿನ ಗುಳ್ಳೆ ಸಂಸಾರ ಪ್ರಾಣಿ
ಸಾರಿದೆ ಪುರಂದರವಿಠಲನ ವಾಣಿ ೩

## ೨೮೬

ಹರಿಯ ನೆನೆಯದ – ನರಜನ್ಮವೇಕೆ ? ಶ್ರೀ
ಹರಿಯ ಕೊಂಡಾಡದ ನಾಲಿಗೆಯಿನ್ನೇಕೆ ಪ.

ಸತ್ಯ – ಶೌಚವಿಲ್ಲದ ಆಚಾರವೇಕೆ ?
ಚಿತ್ತ ಶುದ್ಧಿಯಿಲ್ಲದ ಜ್ಞಾನವೇಕೆ ?
ಭಕ್ತಿ – ಭಾನವಿಲ್ಲದ ದೇವಪೂಜೆ ಏಕೆ ?
ಉತ್ತಮರಿಲ್ಲದ ಸಭೆಯು ಇನ್ನೇಕೆ ? ೧

ಕ್ರೋಧವ ಬಿಡದಿಹ ಸಂನ್ಯಾಸವೇಕೆ ?
ಆದರವಿಲ್ಲದ ಅಮೃತಾನ್ನವೇಕೆ ?॥
ವೇದ – ಶಾಸ್ತ್ರವಿಲ್ಲದ ವಿಪ್ರತನವೇಕೆ
ಕಾದಲಂಜುವನಿಗೆ ಕ್ಷಾತ್ರ ತಾನೇಕೆ ? ೨

ಸಾಲದಟ್ಟುಳಿಯೆಂಬ ಸಂಸಾರವೇಕೆ ?
ಬಾಲಕರಿಲ್ಲದ ಭಾಗ್ಯವಿನ್ನೇಕೆ ?
ವೇಳೆಗೆ ಒದಗದ ನೆಂಟರಿನ್ನೇಕೆ ? ಅನು
ಕೂಲವಿಲ್ಲದ – ಸತಿಯ ಸಂಗವೇಕೆ ೩

ಮಾತೆ – ಪಿತರ ತೊರೆದ ಮಕ್ಕಳಿನ್ನೇಕೆ ?
ಮಾತು ಕೇಳದ ಮಗನ ಗೊಡವೆ ಇನ್ನೇಕೆ ॥
ನೀತಿ ತಪ್ಪಿದ ದೊರೆಯ ಸೇವೆ ಇನ್ನೇಕೆ ? ಅ
ನಾಥನಾಗಿರುವಗೆ ಕೋಪವಿನ್ನೇಕೆ ? ೪

ಅಳಿದಳಿದುಳಿದಿಹ ಮಕ್ಕಳುಗಳಿನ್ನೇಕೆ ?
ತಿಳಿದು ಬುದ್ಧಿಯ ಹೇಳದ ಗುರುತನವೇಕೆ ?
ನಳಿನನಾಭ ಶ್ರೀ ಪುರಂದರವಿಠಲನ
ಚೆಲುವ ಮೂರುತಿಯ ಕಾಣದ ಕಂಗಳೇಕೆ ೫

## ೨೮೭

ಹರಿಯ ನೆನೆಯಿರೋ – ನಮ್ಮ
ಹರಿಯ ನೆನೆಯಿರೊ ಪ.

ಬರಿದೆ ಮಾತನಾಡಿ ಬಾಯ
ಬರಡು ಮಾಡಿ ಕೆಡಲುಬೇಡಿ ಅಪ

ನಿತ್ಯವಲವೀ ಶರೀರವ ।
ನಿತ್ಯವೆಂದು ನೋಡಿರಯ್ಯ ॥
ಹೊತ್ತು ಕಳೆಯಬೇಡಿ ಕಾಲ ।
ಮೃತ್ಯು ಬಾಹೊದೇಗಲೊ ೧

ಹಾಳು ಹರಟೆ ಮಾಡಿ ಮನವ ।
ಬೀಳುಮಾಡಿಕೊಳ್ಳ ಬೇಡಿ ॥
ಏಳುದಿನದ ಕಥೆಯ ಕೇಳಿ ।
ಏಳಿರಯ್ಯ ವೈಕುಂಠಕೆ ೨

ಮೆಟ್ಟಿ ಪುಣ್ಯಕ್ಷೇತ್ರಗಳನು ।
ಸುಟ್ಟು ಹೋಹುದು ಪಾಪ ಮನ ॥
ಮುಟ್ಟಿ ಭಜಿಸಿರಯ್ಯ ಪುರಂದರ
ವಿಠಲನಾ ಚರಣವನ್ನು ೩

## ೨೮೮

ಹರಿಯೆಂದು ಮನದಲ್ಲಿ ಮರೆದೊಮ್ಮೆ ನೆನೆದರೆ ।
ದುರಿತಪರ್ವತ ಖಂಡಿಪುದು ವಜ್ರದಂತೆ ಪ.

ಮೇರು ಸುವರ್ಣದಾನವ ಮಾಡಲು ಪುಣ್ಯ ।
ನೂರು ಕನ್ಯಾದಾನವ ಮಾಡಲು ॥
ಧಾರಿಣಿಯೆಲ್ಲವ ಧಾರೆಯ ನೆರೆಯಲು ॥
ನಾರಾಯಣ ಸ್ಮರಣೆಗೆ ಸರಿಬಹುದೆ ? ೧

ಹತ್ತುಲಕ್ಷ ಗೋದಾನ ಮಾಡಲು ಪುಣ್ಯ – ।
ವ್ರತಗಳ ಅನುದಿನ ಆಚರಿಸಲು ॥
ಶತಕೋಟಿ ಯಜ್ಞವ ಮಾಡಲು ಲಕ್ಷ್ಮೀ – ।
ಪತಿನಾಮ ಸ್ಮರಣೆಗೆ ಸರಿಯೆನ್ನಬಹುದೆ ೨

ಗಂಗೆ ಕಾಳಿಂದಿ ಗೋದಾವರಿ ಕಾವೇರಿ ।
ತುಂಗಭದ್ರೆಯಲಿ ಸ್ನಾನವ ಮಾಡೆ ॥

ಮಂಗಳಮೂರುತಿ ಪುರಂದರವಿಠಲ ।
ರಂಗನ ಸ್ಮರಣೆಗೆ ಸರಿಯೆನ್ನಬಹುದೆ ? ೩

## ೨೮೯

ಹಿಗ್ಗುವೆಯೇಕೊ - ಏ ಮನುಜಾ
ಹಿಗ್ಗುವೆಯೇಕೊ ಅ

ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ
ಅಗ್ನಿಯೊಳಗೆ ದಗ್ಧವಾಗುವ ದೇಹಕೆ ಅ.ಪ

ಸತಿ ಪುರುಷರು ತಮ್ಮ ರತಿಕ್ರೀಡೆಗಳ ಮಾಡೆ
ಪತನವಾದಿಂದ್ರಿಯ ಪ್ರತಿಮೆಯ ದೇಹಕೆ ೧
ತೋರುವುದೊಂಬತ್ತು ದಾರಿಯ ಮಲವಾದ
ನೀರಿಲ್ಲದಿದ್ದರೆ ನಾರುವ ದೇಹಕೆ ೨

ಆಗದ ಭೋಗವ ಆಗು ಮಾಡುತಲಿಪ್ಪ
ರೋಗಬಂದರೆ ಬಿದ್ದು ಹೋಗುವ ದೇಹಕೆ ೩

ನರರ ಸೇವೆಯಮಾಡಿ ನರಕಭಾಜನನಾಗಿ
ಮರಳಿ ಮರಳಿ ಹುಟ್ಟಿ ನರಳುವ ದೇಹಕೆ ೪

ಪುರಂದರವಿಠಲನ ಚರಣಕಮಲಕೆ
ಎರಗದೆ ಇರುತಿಪ್ಪ ಗರುವಿನ ದೇಹಕೆ ೫

## ೨೯೦

ಹುಚ್ಚುಕುನ್ನಿ ಮನವೇ ನೀ
ಹುಚ್ಚುಗೊಂಬುದು ಘನವೇ ಅ

ಕಚ್ಚುಕದತನವ ಬಿಟ್ಟು
ಅಚ್ಯುತನ ಪದವ ಮುಟ್ಟು ಅ.ಪ

ಸ್ನಾನ ಮಾಡಿದರೇನು – ಸಂ
ಧ್ಯಾನವ ಮಾಡಿದರೇನು
ಹೀನತನವ – ಬಿಡಲಿಲ್ಲ
ಸ್ವಾನುಭವ ಕೂಡಲಿಲ್ಲ ೧

ಜಪವ ಮಾಡಿದರೇನು – ನೀ
ತಪವ ಮಾಡಿದರೇನು
ಕಪಟ ಕಲ್ಮಷ ಕಳೆಯಲಿಲ್ಲ
ಕಾಮಿತಾರ್ಥ ಪಡೆಯಲಿಲ್ಲ ೨

ಮೂಗು ಹಿಡಿದರೇನು – ನೀ
ಮುಸುಕನಿಕ್ಕಿದರೇನು
ಭೋಗಿಶಯನನುವರ್ತಿಸಲಿಲ್ಲ
ದೇವಪೂಜೆ ಮಾಡಲಿಲ್ಲ ೩

ಗರುವನಾದರೇನು – ನೀ
ಗೊರವನಾದರೇನು
ಗುರುವಿನ ಸ್ವಾಮ್ಯವ ತಿಳಿಯಲಿಲ್ಲ
ಗುರುವುಪದೇಶ ಪಡೆಯಲಿಲ್ಲ ೪

ಹೋಮ ಮಾಡಿದರೇನು – ನೀ
ನೇಮವ ಮಾಡಿದರೇನು
ರಾಮನಾಮ ಸ್ಮರಿಸಲಿಲ್ಲ
ಮುಕುತಿ ಪಥವ ಪಡೆಯಲಿಲ್ಲ ೫

ನವದ್ವಾರವ ಕಟ್ಟು ನೀ
ನಡುವಣ ಹಾದಿಯ ಮುಟ್ಟು
ಅವಗುಣಗಳ ಬಿಟ್ಟು ಭಾನು
ಮಂಡಲ ಮನೆಯ ಮುಟ್ಟು ೬

ಏನು ನೋಡಿದರೇನು ನೀ
ನೇನ ಮಾಡಿದರೇನು

ಧ್ಯಾನವನ್ನು ಮಾಡಲಿಲ್ಲ
ಪುರಂದರ ವಿಠಲನ ಸ್ಮರಿಸಲಿಲ್ಲ ೭

## ೨೯೧

ಹೆಣ್ಣ ನಿಚ್ಚಿಸುವರೆ ಮೂಢ – ಇದನು
ಕಣ್ಣು – ಮೈ ಮನಗಳಿಂ ಸೋಂಕಲು ಬೇಡ ಪ.

ತಾಯಾಗಿ ಮೊದಲು ಪಡೆದಿಹುದು – ಮತ್ತೆ
ಜಾಯೆಯೆಂದೆನಿಸಿ ಕಾಮದಿ ಕೆಡಹುವುದು
ಕಾಯದಿ ಜನಿಸುತ ಬಹುದು – ಇಂತು
ಮಾಯೆಯು ನಿನ್ನ ಬಹು ವಿಧದಿ ಕಾಡುವುದು ೧

ಹಿತಶತ್ರುವಾಗಿ ಹೊಂದುವುದು – ನಿಮಿಷ
ರತಿಗೊಟ್ಟು ನಿತ್ಯಮುಕ್ತಿಯ ಸೆಳೆಯುವುದು
ಕ್ಷಿತಿಯ ಪೂಜ್ಯತೆ ಕೆಡಿಸುವುದು – ಮುಂದೆ
ಶತಜನ್ಮಗಳಿಗೆ ಹೊಣೆಯಾಗಿ ನಿಲ್ಲುವುದು ೨

ಬಗೆಯದು ತನುವೆಲುವು ನರ ಖಂಡ ಅದರೊ
ಳಗೆ ವಾಯುರಂಧ್ರ ಕಿಸುಕುಳದ ಉದ್ದಂಡ
ಭಗವೆಂಬುದು ಮೂತ್ರದ ಭಾಂಡ – ಆದ
ನೊಗಡಿಸದೆ ನಿಜಸುಖವಿಲ್ಲ ಕಂಡೆಯ ೩

ವಶನಾದ ವಾಲಿಯ ಕೊಲಿಸಿಹುದು – ಹೀಗೆ
ಹೆಸರು ಮಾತ್ರದಿ ದಶಶಿರನಳಿದಿಹುದು
ಶಶಿಯಂಗದಲಿ ಕ್ಷಯವಿಹುದು – ಹೀಗೆ
ಹೆಸರು ಪಡೆದ ಕೀಚಕನನಳಿದಿಹುದು ೪

ಪಶುಪತಿಯ ದೆಸೆಗೆಡಿಸಿಹುದು – ಹೀಗೆ
ವಸುಧೆಯೊಳು ಜೀವರ ಹಸಗೆಡಿಸಿಹುದು
ವಸುಧೇಶನ ನಾಮ ಮರೆಸುವುದು – ನಮ್ಮ
ಅಸಮ ಪುರಂದರವಿಠಲನ ತೊರೆಸುವುದು ೫

## ೨೯೨

ಹೇಗೆ ಮಾಡಲಿ ಮಗುವಿಗೇನಾಯಿತೊ – ಇದರ – ।
ಆಗಮವ ಬಲ್ಲವರು ತಿಳಿದೆಲ್ಲ ಪೇಳಿ ಪ.

ತೂಗಿ ಮಲಗಿಸೆ ಕಣ್ಣ ಮುಚ್ಚಲೊಲ್ಲನು, ಬೆನ್ನ – ।
ಮೇಗೆ ಬುಗುಟಿಯು, ಎದೆಯು ಕಲ್ಲಾಗಿದೆ ।
ರೋಗವನೆ ಕಾಣೆ ದಾಡೆಯಲಿ ನೀರಿಳಿಯುತಿದೆ ।
ಕೂಗುವ ಧ್ವನಿಯೊಮ್ಮೆ ಕುಂದಲಿಲ್ಲ ೧

ಖಂಡಸಕ್ಕರೆ ಹಣ್ಣ ಕೊಟ್ಟರೊಲ್ಲದೆ ಮಣ್ಣ ।
ಹೆಂಡೆಯನು ಬೇಡಿ ತಾ ಪಿಡಿವ ಕೊಡಲಿ ॥
ಮಂಡೆ ಜಡೆಗಟ್ಟಿಹುದು ಮಾಡಲಿನ್ನೇನಿದಕೆ ।
ಹಿಂಡು ಸತಿಯರ ದೃಷ್ಟಿ ಘನವಾಯಿತೇನೊ ೨

ಮೊಲೆಯನುಂಬಾಗ ಮೈಯಂಬರವನೊದೆಯುತಿದೆ ।
ಕಲಕಿತನದಲಿ ಎನ್ನ ಕೊಲುವುದೇಕೋ ॥
ತಿಳಿದಿದರ ನೆಲೆಯನರಿತವರನೊಬ್ಬರ ಕಾಣೆ ।
ಚೆಲುವ ಸಿರಿ ಪುರಂದರವಿಠಲ ತಾ ಬಲ್ಲ ೩

## ೨೯೩

ಹೊಲೆಯ ಹೊರಗಹನೆ ಊರೊಳಗಿಲ್ಲವೆ
ಸಲೆ ಶಾಸ್ತ್ರವನು ತಿಳಿದು ಬಲ್ಲವರು ನೋಡಿ ಪ.

ಭಾಳದಲಿ ಭಸಿತ ಭಂಡಾರವಿಡದವ ಹೊಲೆಯ
ಕೇಳಿ ಸಲೆ ಶಾಸ್ತ್ರವನು ತಿಳಿಯದವ ಹೊಲೆಯ
ಆಳಾಗಿ ಅರಸರಿಗೆ ಕೈಮುಗಿಯದವ ಹೊಲೆಯ
ಸೂಳೆಯರ ಕೂಡುವಾತನೇ ಶುದ್ಧ ಹೊಲೆಯ ೧

ಇದ್ದ ಧನ ದಾನ – ಧರ್ಮವ ಮಾಡದವ ಹೊಲೆಯ
ಕದ್ದು ತನ್ನೊಡಲ ಹೊರೆವಾತನೇ ಹೊಲೆಯ

ಬದ್ಧವಹ ನಡೆ - ನುಡಿಗಳಿಲ್ಲದಿದ್ದವ ಹೊಲೆಯ
ಮದ್ದಿಕ್ಕಿ ಕೊಲುವವನೆ ಮರುಳು ಹೊಲೆಯ ೨

ಆಶೆಯನು ತೋರಿ ಭಾಷೆಗೆ ತಪ್ಪುವವ ಹೊಲೆಯ
ಲೇಸು ಉಪಕಾರಗಳನರಿಯದವ ಹೊಲೆಯ
ಮೋಸದಲಿ ಪ್ರಾಣಕ್ಕೆ ಮುನಿಯುವವನೇ ಹೊಲೆಯ
ಹುಸಿ ಮಾತನಾಡುವವನೇ ಸಹಜ ಹೊಲೆಯ ೩

ಕೊಂಡ ಋಣವನು ತಿರುಗಿ ಕೊಡಲರಿಯದವ ಹೊಲೆಯ
ಭಂಡ ಮಾತುಗಳಾಡುವವನೆ ಹೊಲೆಯ
ಗಂಡ - ಹೆಂಡಿರ ನಡುವೆ ಭೇದಗೈವವ ಹೊಲೆಯ
ಹೆಂಡರಿಚ್ಚೆಗೆ ನಡೆವ ಹೇಡಿ ಹೊಲೆಯ ೪

ಪರಧನಕೆ ಪರಸತಿಗೆ ಅಳುಪಿದವನೇ ಹೊಲೆಯ
ಗುರು ಹಿರಿಯರನು ಕಂಡು ಎರಗದಿದ್ದವ ಹೊಲೆಯ
ಅರಿತು ಆಚಾರವನು ಮಾಡದಿದ್ದವ ಹೊಲೆಯ
ಪುರಂದರವಿಠಲನನು ನೆನೆಯದವ ಹೊಲೆಯ ೫

## ೨೯೪

ಹೊಲೆಯ ಹೊಲತಿ ಇವರವರಲ್ಲ
ಹೊಲಗೇರಿಯೊಳು ಹೊಲೆಯ ಹೊಲತಿಯಿಲ್ಲ ಪ.

ಸತಿಯಳ ವಶನಾಗಿ ಜನನಿ - ಜನಕರಿಗೆ
ಅತಿ ನಿಷ್ಠುರ ನುಡಿವವ ಹೊಲೆಯ
ಸುತರ ಪಡೆದು ವಾರ್ಧಿಕ್ಯಮದವೇರಿ
ಪತಿದ್ವೇಷ ಮಾಡುವಳೆ ಹೊಲತಿ ೧

ಗುರುಗಳಲ್ಲಿ ವಿದ್ಯೆಗಳನು ಕಲಿತು
ಹಿರಿಯರ ಬಳಲಿಸುವವ ಹೊಲೆಯ
ಪರಪುರುಷಗೊಲಿದು ತನ್ನ ಪುರುಷನ
ವಿರಸವ ಮಾಡುವ ಕುಲಗೇಡಿತಾ ಹೊಲತಿ ೨

ಒಡೆಯನನ್ನವನುಂಡು ಅಡಿಗಡಿಗೆ ಬಾಯ್
ಬಿಡದೆ ತರ್ಕಿಸುವ ಜಡ ಹೊಲೆಯ
ಬಡತನ ಬಂದರೆ ಪುರುಷನ ರಚ್ಚೆಗೆ
ಬಿಡದೆ ತಹಳೆ ಶುದ್ಧ ಹೊಲತಿ ೩

ನೂರೊಂದು ಕುಲ ಕುಂಭೀಪಾಕಕಟ್ಟುವ
ಪರನಾರಿಯಲ್ಲಿ ವೀರ್ಯವಿಟ್ಟವ ಹೊಲೆಯ
ಆರೊಳು ಕಲಹಾಪಸ್ಮಾರಿ ದುರ್ಮುಖಿಯು – ಕ
ಠೋರಕುಮತಿ ಶುದ್ಧ ಹೊಲತಿ ೪

ಅಜನುತ ಪುರಂದರವಿಠಲನ ದಾಸರ
ಭಜನೆಯ ದಾರಿಯ ಬಿಟ್ಟವ ಹೊಲೆಯ
ನಿಜವರ್ಯರಾದ ಸಜ್ಜನರ ಪಾದಪದ್ಮವ
ಭಜಿಸದಿರುವಳೆ ಶುದ್ಧ ಹೊಲತಿ ೫

## ೨೯೫

ಜ್ಞಾನವೊಂದೇ ಸಾಕು ಮುಕ್ತಿಗೆ – ಇ – ।
ನ್ನೇನು ಬೇಕು ಹುಚ್ಚುಮರುಳು ಮಾನವನೆ ಪ.

ಪಿತ ಮಾತೆ ಸತಿ ಸುತರನಗಲಿರಬೇಡ ।
ಯತಿಯಾಗಿ ಆರಣ್ಯ ಚರಿಸಲು ಬೇಡ ॥
ವ್ರತ – ನೇಮವ ಮಾಡಿ ದಣಿಯಲು ಬೇಡ ।
ಸತಿಯಿಲ್ಲದವಗೆ ಸದ್ಗತಿಯಿಲ್ಲೋ ಮೂಢ ೧

ಜಪತಪವನೆ ಮಾಡಿ ಸೊರಗಲುಬೇಡ ।
ಕಪಿಯಂತೆ ಅಡಿಗಡಿಗೆ ಹಾರಲುಬೇಡ ॥
ಉಪವಾಸಪಾಶಕ್ಕೆ ಸಿಕ್ಕಲುಬೇಡ ।
ಚಪಲತನದಲೇನು ಫಲವಿಲ್ಲೋ ಮೂಢ ೨

ಜಾಗರದಲಿ ನಿದ್ರೆ ಕೆಡಿಸಲು ಬೇಡ ।
ಓಗರವನು ಬಿಟ್ಟು ಒಣಗಲು ಬೇಡ ॥

ಸೋಗುಮಾಡಿ ಹೊತ್ತು ಕಳೆಯಲು ಬೇಡ ।
ಗೊಗೆ ಹಾಗೆ ಕಣ್ಣು ತಿರುಗಿಸಬೇಡ ೩

ಹೊನ್ನು – ಹೆಣ್ಣು – ಮಣ್ಣು ಜರೆದಿರಬೇಡ ।
ಅನ್ನ – ವಸ್ತ್ರಗಳನ್ನು ತೊರೆದಿರಬೇಡ ॥
ಬಣ್ಣದ ದೇಹವ ನೆಚ್ಚಲುಬೇಡ ।
ತಣ್ಣೀರೊಳಗೆ ಮುಳುಗಿ ನಡುಗಲು ಬೇಡ ೪

ಮಹಾವಿಷ್ಣುಮೂರ್ತಿಯ ಮರೆತಿರಬೇಡ ।
ಸಾಹಸದಿಂದಲಿ ಶ್ರಮ ಪಡಬೇಡ ॥
ಕುಹಕಬುದ್ಧಿಯಲಿ ಕುಣಿದಾಡಬೇಡ ।
ಮಹಿಮ ಪುರಂದರವಿಠಲನ ಮರೆಯದಿರೊ ಮೂಢ ೫

## ಸಂಪ್ರದಾಯದ ಹಾಡುಗಳು

### ೨೯೬

ಆಡಿದನೋಕುಳಿಯ ನಮ್ಮ ರಂಗ !
ಆಡಿದನೋಕುಳಿಯ ಪ.

ಕುಂದದ ಕಸ್ತುರಿಯ–ಅಳಿ–।
ಗಂಧದ ಓಕುಳಿಯ ॥
ಬಂದರು ಹೊರಗಿನ ನಾರಿಯರಾಡುತ।
ಚೆಂದದ ಜೀಕುಳಿಯ ೧

ಪಟ್ಟೆ ಮಂಚದ ಮೇಲೆ–ನಮ್ಮ ರಂಗ ।
ಇಟ್ಟ ಮುತ್ತಿನ ಹಾರ
ಬಟ್ಟಕುಚಕೆ ಕಣ್ಣಿಟ್ಟು ಒಗೆದನು ।
ಕುಟ್ಟಿದನೋಕುಳಿಯ ೨

ಆರು ಹತ್ತು ಸಾವಿರ–ಗೋಪ ।
ನಾರಿಯರನು ಕೂಡಿ ॥
ಮಾರನಯ್ಯ ಶ್ರೀಪುರಂದರವಿಠಲ ।
ಹಾರಿಸಿ ಜೀಕುಳಿಯ ೩

### ೨೯೭

ಆರತಿಯ ಬೆಳಗಿರೆ ಪ

ಅರಸಿ ರುಕ್ಮಿಣಿ ಕೂಡ ಅರಸು ವಿಠಲಗೆ
ಬಿರುದಿನ ಶಂಖವ ಪಿಡಿದ ವಿಠಲಗೆ ॥
ಸರಸಿಜಸಂಭವ ಸನ್ನುತ ವಿಠಲಗೆ
ನಿರುತ ಇಟ್ಟಿಗೆ ಮೇಲೆ ನಿಂತ ವಿಠಲಗೆ ೧

ದಶರಥರಾಯನ ಉದರದಿ ವಿಠಲ
ಶಿಶುವಾಗಿ ಜನಿಸಿದ ಶ್ರೀರಾಮ ವಿಠಲ
ಪಶುಪತಿ ಗೋಪಿಯ ಕಂದನೆ ವಿಠಲ
ಅಸುರೆ ಪೂತನಿಯ ಕೊಂದ ವಿಠಲಗೆ ೨

ಕಂಡಿರ ಬೊಬ್ಬುರ ವೆಂಕಟವಿಠಲನ
ಅಂಡಜವಾಹನ ಅಹುದೋ ನೀ ವಿಠಲ ॥
ಪಾಂಡುರಂಗ ಕ್ಷೇತ್ರ ಪಾವನ ವಿಠಲ
ಪುಂಡರೀಕಾಕ್ಷ ಶ್ರೀ ಪುರಂದರವಿಠಲಗೆ ೩

## ೨೯೮

ಆರೋಗಣೆಯ ಮಾಡೇಳಯ್ಯ ಶ್ರೀಮನ್
ನಾರಾಯಣ ಭೋಗ ಸ್ವೀಕರಿಸಯ್ಯ ಪ.

ಸರಸಿಜಭವಾಂಡದ ಮೇರು ಮಂಟಪದಿ ದಿನ
ಕರಕರದೀಪ್ತ ಜ್ಯೋತಿಶ್ಚಕ್ರವು ॥
ತರಣಿಮಂಡಲ ಪೋಲುವ ರತುನದ ಹೊನ್ನ
ಹರಿವಾಣದಲಿ ದೇವಿ ಬಡಿಸಿಹಳಯ್ಯ ೧

ಅಲ್ಲ ಹೇರಳೆ ಲಿಂಬೆ ಯಾಲಕ್ಕಿ ಮೆಣಸು ಕಾಯ್
ನೆಲ್ಲಿ ಅಂಬಟೆಕಾಯಿ ಚೆಲ್ವ ಮಾಂಗಾಯಿ ॥
ಬೇಲ ಮಂಗರೋಳಿ ಹುಣಸೆ ಪಾಪಟೆಕಾಯಿ
ಎಲ್ಲ ಧರಾದೇವಿ ಅಣಿಗೊಳಿಸಿಹಳಯ್ಯ ೨

ಹಪ್ಪಳ ಸಂಡಿಗೆ ವಿವಿಧ ಶಾಕಂಗಳು
ತುಪ್ಪ ಸಕ್ಕರೆ ಹಣ್ಣು–ಹಂಪಲವು ॥
ಕರ್ಪೂರ ಕಸ್ತೂರಿ ಬೆರಸಿದ ಸಿಖರಿಣಿ
ಒಪ್ಪದಿ ಶ್ರೀದೇವಿ ಬಡಿಸಿಹಳಯ್ಯ ೩

ಎಣ್ಣೂರಿಗತಿರಸ ಚೆನ್ನಾದ ಮಂಡಿಗೆ
ಅನ್ನ ಕ್ಷೀರಾನ್ನ ಪರಮಾನ್ನಗಳು ॥

ಸಣ್ಣ ಸೇವಿಗೆ ಶಾಲ್ಯನ್ನವ ನಿಮಿಷದಿ
ಚೆನ್ನೆ ದುರ್ಗಾದೇವಿ ಬಡಿಸಿಹಳಯ್ಯ ೪

ನೀ ನಿತ್ಯತೃಪ್ತನಹುದು ನಿನ್ನ ಉದರದೊಳು
ನಾನಾಜನರು ಬಂದು ಉಣ್ಣಬೇಕೋ ॥
ಶ್ರೀನಾಥ ಗದುಗಿನ ವೀರನಾರಾಯಣ
ಅನಾಥ ಬಂಧು ಶ್ರೀ ಪುರಂದರವಿಠಲ ೫

## ೨೯೯

ಆರೋಗಣೆಯ ಮಾಡೋ ಎನ್ನಯ್ಯ
ಆರೋಗಣೆಯ ಮಾಡೋ ಪ.

ನಾರದಾರ್ಚಿತಪಾದ ನಾರಾಯಣ ಸ್ವಾಮೀ ಅ.ಪ

ಸರಸಿಜಾಲಯೆ ಲಕ್ಷ್ಮಿ ಸರಸ್ವತಿ ಭಾರತಿ
ಪರಿಪರಿ ಅಡಿಗೆಯ ಸಿದ್ಧ ಮಾಡಿಹರೊ ॥
ಪರಿಮಿತಿಯಿಲ್ಲದ ರುಚಿಯ ಪದಾರ್ಥವ
ಪರಮಪುರುಷ ಉಂಡು ದಯಮಾಡೋ ಸ್ವಾಮಿ ೧

ಅಂಬುಜಮುಖಿ ಲಕ್ಷ್ಮಿ ತಾಂಬೂಲ ಕೊಡುವಳು
ಕಂಬುಕಂಧರನೇ ನೀ ಕೈಕೊಳು ಬೇಗ ॥
ರಂಭೆ ಊರ್ವಸಿ ಮೇನಕೆ ಮೊದಲಾದವರು
ಸಂಭ್ರಮದಿ ಬಂದು ನಾಟ್ಯಕೆ ಕಾದಿಹರೊ ಸ್ವಾಮಿ ೨

........................................................
........................................................
ಸರಸಿಜಭವನಯ್ಯ ಪುರಂದರವಿಠಲ
ಸರುವ ಭೋಗ ಭುಂಜಿಪ ನರರ ಪಾಲಿಸೊ ದೇವಾ ೩

## ೩೦೦

ಉಪ್ಪವಡಿಸಯ್ಯ ಹರಿಯೇ
ಏಳೈ ಹೃಷೀಕೇಶ ಏಳು ರವಿ – ಶಶಿನಯನ ಪ.

ಏಳು ಪಶುಗಳ ಕಾಯ್ದು ಪಾಲಿಸಿದೆ ಗೋಕುಲವ
ಏಳು ಸುರವಂದಿತನೆ ಏಳು ಭೂಸತಿರಮಣ
ಉಪ್ಪವಡಿಸಯ್ಯ ಹರಿಯೇ ಅಪ

ಪಚ್ಚೆ ಮುಡಿವಾಳಗಳು ಅಚ್ಚ ಸೇವಂತಿಗೆಯು
ಬಿಚ್ಚುಮಲ್ಲಿಗೆ ಜಾಜಿ ಸಂಪಿಗೆಯು ಪುನ್ನಾಗ
ಅಚ್ಚರಿಯ ಬಕುಲ ಕೆಂಜಾಜಿ ಕೇತಕಿ ಕುಸುಮಗುಚ್ಛಗಳ
ಪಿಡಿದುಕೊಂಡು ॥
ಅಚ್ಚ ಜಾಣೆಯರು ಶ್ರೀಗಂಧ ಕಸ್ತೂರಿ ಪುನುಗು
ಬಿಚ್ಚು ಬಿಳಿಯೆಲೆಯಡಿಕೆ ಪಿಡಿದು ನಿಂತಿಹರಯ್ಯ
ಮುಚ್ಚುತಿವೆ ತಾರೆಗಳು ಹೆಚ್ಚುತಿವೆ ರವಿಕಿರಣ ಅಚ್ಯುತನೆ
ಉಪ್ಪವಡಿಸೊ ೧

ಚೆನ್ನೆಯರು ಚದುರೆಯರು ಸುಗುಣಸಂಪನ್ನೆಯರು
ಪನ್ನೀರು ತುಂಬಿರ್ದ ಪೊನ್ನ ತಂಬಿಗೆಗಳನು
ರನ್ನಗನ್ನಡಿಯನ್ನು ಪಿಡಿದು ನಿಂತಿರುವರ್ಕೆ ಪನ್ನಂಗಶಯನ ಏಳ್ಳೈ ॥
ಮನ್ನಣೆಯ ನಾರದರು ಮೊದಲಾದ ಮುನಿನಿಕರ
ನಿನ್ನ ಮಹಿಮೆಗಳನ್ನು ಪಾಡಿ ನಲಿಯುವರಯ್ಯ
ಇನ್ನು ಏಳೇಳು ಉದಯದ ಸಮಯ ಸಿರಿಯರಸ
ಚೆನ್ನಿಗನೆ ಉಪ್ಪವಡಿಸೊ ೨

ದೇವದುಂದುಭಿ ಮೊಳಗೆ ದೇವಕನ್ನೆಯರೆಲ್ಲ
ದೇವಾಂಗ ವಸ್ತ್ರವನು ಪಿಡಿದು ನಿಂತಿಹರಯ್ಯ
ದೇವದೇವೇಶ ನಿಮ್ಮೋಲಗದ ಸಂಭ್ರಮಕೆ ದೇವತೆಗಳೆಲ್ಲ ಕರೆದು ॥
ದೇವ ಪ್ರಹ್ಲಾದ ಬಲಿ ಮುಖ್ಯರನು ಕಾಯ್ದವನೆ
ದೇವ ಬ್ರಹ್ಮನ ಪಡೆದ ದೇವಗಂಗೆಯ ಪಿತನೆ
ದೇವ ದೇವೋತ್ತಮನೆ ದೇವಾಧಿದೇವ ಪುರಂದರವಿಠಲ
ಉಪ್ಪವಡಿಸೊ ೩

## ೩೦೧

ಏಕಾರತಿಯನೆತ್ತುವ ಬನ್ನಿ ನಮ್ಮ
ಲೋಕನಾಥನ ಸಿರಿ ಪಾದವ ಬೆಳಗುವ ಪ.

ತುಪ್ಪದೊಳ್ಬೆರೆಸಿದ ಮೂರು ಬತ್ತಿಯನಿಟ್ಟು
ಒಪ್ಪುವ ದೀಪಕ್ಕೆ ದೀಪ ಹಚ್ಚಿ ॥
ತಪ್ಪದೆ ಸಕಲ ಪಾಪಂಗಳ ಹರಿಸುವ
ಅಪ್ಪ ವಿಠಲನ ಪದಾಬ್ಜವ ಬೆಳಗುವ ೧

ಹರುಷದಿ ಏಕಾರತಿ ಬೆಳಗಿದ ಫಲ
ನರಕದಿಂದುದ್ಧಾರ ಮಾಡುವುದು ॥
ಪರಮಭಕುತಿಯಿಂದ ಬೆಳಗುವ ನರರನು
ಹರಿ ತನ್ನ ಹೃದಯದಿ ಧರಿಸುವನಯ್ಯ ೨

ಅನ್ಯ ಚಿಂತೆ ಮಾಡದೆ ಅನ್ಯರ ಭಜಿಸದೆ ಮ
ತ್ತನ್ಯ ದೇವರನು ಸ್ಮರಿಸದೆ ಅ ॥
ನನ್ಯವಾಗಿ ಶ್ರೀ ಪುರಂದರವಿಠಲನ
ಪುಣ್ಯನಾಮಗಳ ಧ್ಯಾನಿಸುತ ೩

## ೩೦೨

ಏಳಯ್ಯ ಬೆಳಗಾಯಿತು ಪ.

ಬೆಳಗಾಯಿತೇಳಯ್ಯ ಬಿಸಿಲು ಮೈದೋರುತಿದೆ
ಸುಳಿದೋರ್ಯೆ ನಿನ್ನ ಹಾರಯ್ಸಿ ನಿಂದಿಹರು
ತಳುವ ಮಾಡದಿರಯ್ಯ ಸ್ವಾಮಿ ತಿರುಮಲೆರಾಯ
ಸೆಳೆಮಂಚದಿಂದಲೇಳು ಅಪ

ವೇದವನು ತರಲೇಳು ಮಂದರವ ಹೊರಲೇಳು
ಭೇದಿಸುತ ಅಸುರರನು ಭೂಮಿಯ ತರಲೇಳು
ಕಾದಿ ಹಿರಣ್ಯನ ಕರುಳ ಕೊರಳೊಳಗೆ ಧರಿಸೇಳು ಕಾದು ಬಲಿ
ಬಾಗಿಲೊಳಗೆ ॥

ಭೇದದಲಿ ಭೂಮಿಯ ತ್ರಿಪಾದದಿಂದಳೆಯೇಳು
ಛೇಧಿಸುತ ಕ್ಷತ್ರಿಯರ ಕೊಡಲಿಯಿಂ ಕಡಿಯೇಳು
ಸಾಧಿಸುತ ಶರಧಿಯಲಿ ಸೇತುವೆಯ ಕಟ್ಟೇಳು
ನಂದಗೋಪನ ಉದರದಿ ೧

ಪುರಮೂರ ಗೆಲಬೇಕು ಅರಿವೆಯನು ಕಳೆದೇಳು
ದುರುಳರನು ಕೊಲಬೇಕು ತುರಗವಾಹನನಾಗು
ಪರಿಪರಿಯ ಕೆಲಸಗಳ ಮಾಡಲುದ್ಯೋಗಿಸದೆ ಮರೆತುನಿದ್ರೆಯಗೈವರೆ॥
ಉರಿಗೈಯನಟ್ಟಿದರೆ ಹರನೋಡಿ ಬಂದಿಹನು
ಗಿರಿಜೆ ವರವನು ಬೇಡಬೇಕೆಂದು ನಿಂದಿಹಳು
ಸುರಪಾರಿಜಾತವನು ಕೊಂಡು ಸುರರಾಜ
ಬಂದಿರುವನೇಳಯ್ಯ ಹರಿಯೆ ೨

ಆಲದೆಲೆಯಿಂದೇಳು ಮಾಲಕುಮಿ ಬಂದಿಹಳು
ಹಾಲುಗಡಲಿಂದೇಳು ಶ್ರೀದೇವಿನಿಂದಿಹಳು
ಕಾಲಹೆಡೆಯಿಂದೇಳು ಭೂದೇವಿ ಬಂದಿಹಳು ಸಾಲಮಂಚಿಗಳಿಂದಲಿ ॥
ಕ್ಷಿತಿನಾಥ ನೀನೇಳು ಸತ್ಯಭಾಮೆ ಬಂದಿಹಳು
ಮತಿವಂತ ನೀನೇಳು ಜಾಂಬವತಿ ಬಂದಿಹಳು
ಗತಿವಂತ ನೀನೇಳು ಶ್ರೀತುಳಸಿ ಬಂದಿಹಳು ಏಕಾಂತ ಸೇವೆಯ
ಮಾಡಲು ೩

ಅಂಬುರುಹದಿಂದ ಜನಿಸಿದ ಬ್ರಹ್ಮ ಬಂದಿಹನು
ಗಂಭೀರ ಗಾಯನದ ನಾರದನು ನಿಂದಿಹನು
ರಂಭೆ ಮೇನಕೆ ಮೊದಲು ನರ್ತನಕೆ
ಐದಿಹರು ಶಂಬರಾರಿಪಿತನೆ ಏಳು॥
ರಾಜಸೂಯವ ಕೊಳಲು ವಾಯುಸುತ ಬಂದಿಹನು
ತೇಜಿಯಾಟಕೆ ಅರ್ಜುನನು ಕರೆದು ಬಂದಿಹನು
ಸಾಜಧರ್ಮಜ ಅಗ್ರಪೂಜೆ ಮಾಡುವೆನೆಂದು ಹೂಜೆಯನು
ಪಿಡಿದುಕೊಂಡು ೪

ದೇವ ನಿನ್ನಂಘ್ರಿಯನು ಪೂಜೆ ಮಾಡುವೆನೆಂದು
ಕಾವೇರಿ ಕೃಷ್ಣೆ ಗೌತಮಿ ಗಂಗೆ ಮಲಾಪಹಾರಿ
ಸಾವಧಾನದಿ ಯಮುನೆ ತುಂಗಾ ಸರಸ್ವತೀ
ಭೀಮರಥಿ ನೇತ್ರಾವತಿ ॥
ದುರಿತ ಬಂಧನವನ್ನು ಪರಿಹರಿಸಿದೆಯೊ ಸ್ವಾಮಿ
ದುರಿತ ದುಷ್ಕರ್ಮವನು ದೇವ ಎಂದರೆ ಸುಡುವೆ
ದುರಿತ ತಾಪಕೆ ಚಂದ್ರ ನೀನೆನಿಸಿಕೊಂಡೆಯೊ
ಶ್ರೀ ಪುರಂದರವಿಠಲನೆ ೫

## ೩೦೩

ಏಳಯ್ಯ ಶ್ರೀಹರಿ ಬೆಳಗಾಯಿತು ಪ.

ಏಳು ದೇವಕಿತನಯ ನಂದನಕಂದ
ಏಳು ಗೋವರ್ಧನ ಗೋವಳರಾಯ ॥
ಏಳು ಮಂದರಧರ ಗೋವಿಂದ ಫಣಿಶಾಯಿ
ಏಳಯ್ಯ ನಲಿದು ಉಪ್ಪವಡಿಸಯ್ಯ ೧

ಕ್ಷಿರಸಾಗರವಾಸ ಬೆಳಗಾಯಿತು ಏಳು
ಮೂರುಲೋಕದರಸು ಒಡೆಯ ಲಕ್ಷ್ಮೀಪತಿ ॥
ವಾರಿಜನಾಭನೆ ದೇವದೇವೇಶನೆ
ಈರೇಳು ಲೋಕಕಾಧಾರ ಶ್ರೀ ಹರಿಯೇ ೨

ಸುರರು ದೇವತೆಗಳು ಅವಧಾನ ಎನುತಿರೆ
ಸುರವನಿತೆಯರೆಲ್ಲ ಆರತಿ ಪಿಡಿದಿರೆ ॥
ನೆರೆದು ಊರ್ವಶಿ ಭರದಿ ನಾಟ್ಯವಾಡಲು
ಕರುಣಿಸೊ ಪುರಂದರವಿಠಲ ನೀನೇಳೋ ೩

## ೩೦೪

ಒಳಿತು ಈ ಶಕುನ ಫಲವಿಂದು ನಮಗೆ
ಜಲಜನಾಭನ ಸಂಗ ದೊರಕುವುದೆ ರಮಣಿ ಪ.

ವಾಮಗೆರುಡನ ನೋಡು ವಾಯಸದ ಬಲವನ್ನು
ಕೋಮಲಾಂಗಿಯರೈದು ಪೂರ್ಣಕುಂಭ ॥
ಸಾಮಾನ್ಯವೇ ಗೌಳಿ ಬಲಕಾಗಿ ನುಡಿಯುತಿದೆ
ಪ್ರೇಮದಲಿ ಮಧುರ ವಚನವ ಕೇಳು ರಮಣಿ ೧

ಮೊಳಗುತಿವೆ ಭೇರಿ ದುಂದುಭಿ ಘಂಟೆ ವಾದ್ಯಗಳು
ಫಲ ಪುಷ್ಪ ದಧಿಗಳಿದಿರಾಗುತಿದೆಕೊ ॥
ಚೆಲುವ ಭಾರದ್ವಾಜಪಕ್ಷಿ ಬಲವಾಗುತಿದೆ
ಬಲು ಹಂಗ ಎಡವಾಗುತಿದೆ ನೋಡು ಕೆಳದಿ ೨

ನೋಡು ದ್ವಯ ಬ್ರಾಹ್ಮಣರು ಇದಿರಾಗಿ ಬರುವುದನು
ಕೂಡಿದುವು ಮನದ ಸಂಕಲ್ಪವೆಲ್ಲ ॥
ಬೇಡಿದ ವರಗಳೀವ ಪುರಂದರವಿಠಲನ
ನೋಡಿ ಸಂತೋಷದಲಿ ನೆನೆವೆನೆಲೆ ರಮಣಿ ೩

## ೩೦೫

ಕೋಳಿ ಕೂಗಿತಲ್ಲಾ – ಲಕ್ಷ್ಮೀ
ಲೋಲನಲ್ಲದೆ ಅನ್ಯರಾರಿಲ್ಲವೆಂದು ಪ.

ಮೊದಲ ಜಾವದಲಿ ಮುಕುಂದನೆಂದು ಕೂಗಿ
ಎರಡರಲಿ ಶ್ರೀ ವೆಂಕಟಾದ್ರಿಯೆಂದು ॥
ಉರಗಗಿರಿಯ ವಾಸ ಯಾದವ ಕುಲ ಗೊಲ್ಲ
ಚದುರ ಚಲ್ಲಪಿಲ್ಲಿರಾಯನಲ್ಲದಿಲ್ಲವೆಂದು ೧

ಮೂರು ಜಾವದಲಿ ಮುರಾರಿಯೆಂದು ಕೂಗಿ
ನಾಕರಲಿ ನಾರಾಯಣಯೆನಲು ॥
ಕ್ಷೀರಾಬ್ಧಿಯವಾಸ ಲಕ್ಷ್ಮೀಪತಿ ಕೋ
ನೇರಿವಾಸ ವೆಂಕಟಕೃಷ್ಣರಾಯನೆಂದು ೨

ಪರಮಪುರುಷ ಮುಖ್ಯ ಆಧಾರಭೂತ
ಕರುಣದ ಪುಂಜನು ಜಗದಾದಿ ತಾ ॥

ಕಮಲಸಂಭವ ಮುಖ್ಯ ಕಾರುಣ್ಯ ಮೂರುತಿ
ವಿಮಲಕಾಪುರ ತಿಮ್ಮರಾಯನಲ್ಲದಿಲ್ಲವೆಂದು ೩

ರೆಕ್ಕೆಯ ಬಿಚ್ಚಿ ಪಸರಿಸಿ ಡಂಗುರ ಹೊಯ್ದು
ಕೊಕ್ಕನು ಮೇಲೆ ನೆಗಹಿಕೊಳುತ ॥
ಚಕ್ಕನೆ ಕೇರಿ ಕೇರಿಯಗುಂಟ ಸಾಗುತ
ಮುಕುಂದನಲ್ಲದೆ ಅನ್ಯರಾರಿಲ್ಲವೆಂದು ೪

ಐದು ಜಾವದಲಿ ಅನಂತನೆಂದು ಕೂಗಿ
ಆರರಲ್ಲಿ ಅಳಗಾದ್ರೀಶಯೆಂದು ॥
ಏಳರಲ್ಲಿ ಕಾಶಿಯ ಬಿಂದುಮಾಧವ
ಎಂಟಕೆ ಪುರಂದರವಿಠಲರಾಯನೆಂದು ೫

## ೩೦೬

ಚಿತ್ತೈಸಿದ ವ್ಯಾಸರಾಯ ।
ಚಿತ್ತಜನಯ್ಯನ ಬಳಿಗೆ ಪ.

ಮುತ್ತಿ ಮುತ್ತೈದೆಯರೆಲ್ಲ
ಎತ್ತೆ ರತುನದಾರತಿಯ ಅ.ಪ

ಹೇಮಪಿಡಿಗಳುಳ್ಳಂತಹ ।
ಚಾಮರಂಗಳನು ಪಿಡಿದು ॥
ಕಾಮಿನಿಮಣಿಯರು ಕೆಲವರು ।
ಸ್ವಾಮಿಯೆಂದು ಬೀಸುತಿರೆ ೧

ಹಾಟಕದ ಬೆತ್ತನೂರು ।
ಸಾಟಿಯಿಲ್ಲದಲೆ ಪಿಡಿದು ॥
ನೀಟಾದ ಓಲಗದವರ ।
ಕೂಟಗಳ ಮಧ್ಯದಲಿ ೨

ಸಾಧುವಿಪ್ರಜನಂಗಳು ।
ವೇದಘೋಷ ಮಾಡುತಿರೆ ॥
ಮೋದದಿಂದ ಗೋವಿಂದನ ।
ಸಾಧನ ಮಾರ್ಗವ ಪಿಡಿದು ೩

ಭೇರಿ ತುತ್ತೂರಿ ಮೃದಂಗ ।
ಮೌರಿ ಚಾರುವಾದ್ಯಂಗಳು ॥
ಬಾರಿಬಾರಿಗೆ ಹೊಡೆಯೆ ।
ನಾರದರು ತಾ ಕೂಡಿಯೆ । ೪

ಅರವಿಂದಾಸನನಯ್ಯ ।
ಪುರಂದರವಿಠಲನು॥
ಸಿರಿಸಹಿತದಿ ಬಂದು ।
ಕರಪಿಡಿದೆತ್ತಿದ್ದು ಕಂಡೆ ೫

## ೩೦೭

ಜಯಮಂಗಳಂ ನಿತ್ಯ ಶುಭಮಂಗಳಂ
ಜಯ ತುಂಗ ಲಕ್ಷ್ಮೀಪತಿ ನರಸಿಂಹಗೆ ಪ.

ಕಂದರ್ಪನಯ್ಯಗೆ ಕೋಟಿಲಾವಣ್ಯಗೆ
ಮಂದರೋದ್ಧಾರ ಮಧುಸೂದನನಿಗೆ ॥
ಕಂದ ಪ್ರಹ್ಲಾದನನು ಕಾಯ್ದ ದೇವನಿಗೆ ಶ್ರೀ –
ಇಂದಿರಾ ರಮಣ ಸರ್ವೋತ್ತಮನಿಗೆ ೧

ಕರಿರಾಜ ವರದನಿಗೆ ಕರುಣಾ ಸಮುದ್ರನಿಗೆ
ಸರಸಿಜೋದ್ಭವ – ಭವವಂದ್ಯ ಹರಿಗೆ ॥
ಗಿರಿಯರಸು ಕಾವೇರಿಪುರದ ರಂಗಯ್ಯಗೆ
ಗಿರಿರಾಜಪತಿವಂದ್ಯ ಸುರರ ನಿಧಿಗೆ ೨

ಅಂಬರೀಷನ ಶಾಪ ಅಪಹರಿಸಿದವನಿಗೆ
ತುಂಬುರ ನಾರದ ಮುನಿವಂದ್ಯಗೆ ॥

ಕಂಬುಕಂಧರ ಪುರಂದರ ವಿಠಲರಾಯಗೆ
ಅಂಬುಜನಾಭಗೆ ಅಜನಪಿತಗೆ ೩

## ೩೦೮

ಜಯಮಂಗಳಂ ನಿತ್ಯ ಶುಭಮಂಗಳಂ ಪ.

ಕುರುರಾಯ ಸಭೆಯೊಳಗೆ ಕುಳಿತು ದ್ರೌಪದಿಯನೆಳ ।
ತರಿಸಿ ಭೀಷ್ಮಾದಿಕರು ನೋಡುತಿರಲು ॥
ಸೆರಗನ್ನು ಹಿಡಿದು ಸೀರೆಯ ಸೆಳೆಯೆ ದ್ರೌಪದಿಯ ।
ಮೊರೆಕೇಳಿ ಕಾಯ್ದ ಶ್ರೀ ಮುರವೈರಿಗೆ ೧

ಪಾಪಿ ದುರ್ಯೋಧನನು ಪಾಂಡುನಂದನರೊಡನೆ ।
ನೀ ಪಾಲುಕೊಡುಯೆಂದು ಕೇಳಲಾಗಿ ।
ಕೋಪದಲಿ ಕೊಡೆನೆನಲು ಇಳೆಯಲೊರಗಿಸಿ ವಿಶ್ವ ।
ರೂಪವನು ತೋರಿಸಿದ ಗೋಪಾಲಗೆ ೨

ವಸುಧೀಶ ಧರ್ಮಜನ ಓಲಗದಿ ತಾನಿರಲು ।
ಶಿಶುಪಾಲ ನಿಂದಿಸಲು ಶೀಘ್ರದಿಂದ ॥
ಅಸಮಾನ ಚಕ್ರದಲಿ ಅವನ ತಲೆ ಖಂಡಿಸಿದ ।
ವಸುದೇವ ದೇವಕೀ ವರಪುತ್ರಗೆ ೩

ಗರುಡವಾಹನವೇರಿ ತೆರಳಿ ಶೋಣಿತಪುರಕೆ ।
ಹರಭಕ್ತ ಬಾಣಾಸುರನ ಕರಗಳ ॥
ತೆರೆದಿಟ್ಟು ಹರುಷದಲಿ ತನ್ನ ಮೊಮ್ಮನ ಕಾಯ್ದ ।
ಉರಗಾತ್ಮ ಭೂ ಸಕಲ ಸುರರೊಡೆಯಗೆ ೪

ಸುರಗಿರಿಯ ಸುತ್ತುವಾ ತರಣಿನಂದನನ ಆ ।
ಉರಗಬಾಣಕೆ ತನ್ನ ಪಾಂಡುನಂದನನು ॥
ಗುರಿಯಾಗದಂತೆ ಸತ್ಕರುಣದಲಿ ರಕ್ಷಿಸಿದ ।
ವರಮೂರ್ತಿ ಶ್ರೀ ಪುರಂದರವಿಠಲಗೆ ೫

## ೩೦೯

ಜಯಮಂಗಳಂ ನಿತ್ಯ ಶುಭಮಂಗಳಂ ಪ.

ದುರುಳತಮ ವೇದವನು ಕದ್ದು ಪಾತಾಳದಲಿ
ಇರಲವನ ಕೊಂದು ವೇದಾವಳಿಗಳ
ಸರಸಿಜೋದ್ಭವಗಿತ್ತು ಸುರಮುನಿಗಳನ್ನೆಲ್ಲ
ಪೊರೆದ ಶ್ರೀ ಮತ್ಸ್ಯಾವತಾರಿ ಹರಿಗೆ ೧

ಸುರರು ದೈತ್ಯರ ಕೂಡಿ ಸಿಂಧುವನು ಮಥಿಸುತಿರೆ
ಗಿರಿಮುಳುಗಿ ಪಾತಾಳಕಿಳಿದು ಪೋಗೆ
ಭರದಿಂದ ತಾ ಬಂದು ಗಿರಿಯ ಬೆನ್ನೊಳಗಾಂತು
ಸುರರ ಸಂರಕ್ಷಿಸಿದ ಶ್ರೀ ಕೂರ್ಮ ಹರಿಗೆ ೨

ಭೂಮಿಯನು ಹಿರಣ್ಯಾಕ್ಷನೆಂಬ ದೈತ್ಯನು ಸುತ್ತಿ
ಭೀಮವಿಕ್ರಮನು ಪಾತಾಳಕೊಯ್ಯೆ
ತಾಮರಸಸಂಭವನು ಬಿನ್ನೈಸಲವನಳಿದು
ಭೂಮಿಯನು ತಂದ ಶ್ರೀ ಭೂ ವರಾಹನಿಗೆ ೩

ಪರಮ ಭಾಗವತ ಪ್ರಹ್ಲಾದನ ಹಿರಣ್ಯಕನು
ಪರಿಪರಿಯ ಭಾದೆಯಿಂದಲಿ ಪೀಡಿಸೆ
ಕರುಣಾಳು ಕೋಪದಲಿ ದೈತ್ಯನುದರವ ಬಗೆದ
ಶರಣ ರಕ್ಷಕನಾದ ಶ್ರೀ ನರಸಿಂಹಗೆ ೪

ಬಲಿಚಕ್ರವರ್ತಿ ಭೂಮಿಯ ಧಾರೆಯೆರೆಯಲು
ಇಳೆಯನಳೆದವನ ಸುತಳಕೆ ಕಳುಹಿಸಿದ
ಸಿಲುಕಿಭಕುತಿಗೆ ಮೆಚ್ಚಿ ಬಾಗಿಲವಕಾಯ್ದ ಶ್ರೀ
ಬಲವಂತ ಹರಿ ವಾಮಾನಾವತಾರನಿಗೆ ೫

ಕಾರ್ತವೀರ್ಯಾರ್ಜುನನ ಸಂಹರಿಸಿ ಮುದದಿಂದ
ಕೀರ್ತಿಯನು ಲೋಕದೊಳು ವಿಸ್ತರಿಸಿದ

ಪಾರ್ಥಿವಾಂತಕ ಬಾಹುಬಲದಿ ಪರಿಪೂರ್ಣಗೆ
ಆರ್ತಬಾಂಧವಗೆ ಭಾರ್ಗವ ರಾಮಗೆ ೬

ದಶರಥನ ಮನೆಯೊಳುದ್ಭವಿಸಿ ಆ ರಾವಣನ
ದಶಶಿರವ ನೀಡಾಡಿ ಅವನನುಜಗೆ
ವಸುಧಾಧಿಪತ್ಯವನು ಲಂಕೆಯೊಳಗವಗಿತ್ತ
ಅಸಮವಿಕ್ರಮ ರಾಮಚಂದ್ರ ಹರಿಗೆ ೭

ಯದುಕುಲದಿ ತಾ ಬಂದು ಕೊಂದು ಕಂಸನನಂದು
ಮುದದಿಂದ ಪಾಂಡವರನುದ್ಧರಿಸಿದ
ಒದಗೆ ಕೌರವ ಬಲವ ಸಂಹರಿಸಿ ಪದವಿತ್ತು
ಮುದದಿ ಮನ್ನಿಸಿದ ಶ್ರೀಕೃಷ್ಣ ಹರಿಗೆ ೮

ತ್ರಿಪುರದ ಮೂರಾರಿಗಳ ಸತಿಯರ ಪತಿವ್ರತವ
ಅಪಹರಿಸಿ ದಿವ್ಯ ಮೋಹಕರೂಪದಿ
ತ್ರಿಪುರಹರಗಿಂಬಾಗಿ ಶಿವಗೆ ಕೀರ್ತಿಯನಿತ್ತ
ಅಪರಿಮಿತ ಬುದ್ಧಾವತಾರ ಹರಿಗೆ ೯

ಕಲಿಯುಗದ ಕಡೆಯಲಿ ಖಳನೃಪರನೆಲ್ಲರನು
ತುಳಿಸಿ ಕುದುರೆಯ ಖುರದ ಪುಟಗಳಿಂದ
ಸುಲಭದಿಂ ನಡೆಸುತೀ ಕೃತಯುಗದ ಧರ್ಮವನು
ಒಲಿದಂಥ ಕಲ್ಕಿಯವತಾರ ಹರಿಗೆ ೧೦

ಮಂಗಳ ಪದಂಗಳನು ಭಕ್ತಿಯಲಿ ಮೋಹನತ
ರಾಂಗನೆಯರೆಲ್ಲ ರಾಗದಿ ಪಾಡುತ
ಮಂಗಳಾತ್ಮಕಗೆ ಸಿರಿ ಪುರಂದರವಿಠಲಗೆ
ಅಂಗನೆಯರೆಲ್ಲ ಆರತಿಯೆತ್ತಿರೆ ೧೧

## ೩೧೦

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ.

ಶ್ರೀವತ್ಸಲಾಂಛನಗೆ ಕ್ಷೀರಾಬ್ಧಿವಾಸಗೆ ।
ಗೋವರ್ಧನೋದ್ಧಾರ ಗೋವಿಂದಗೆ ॥
ಮಾವ ಕಂಸನ ಕೊಂದು ಮಕರಕುಂಡಲ ಧರಿಸಿ ।
ಜೀವಾತ್ಮನಾದ ಚಿನ್ಮಯರೂಪಗೆ ೧

ಅಂಬುಧಿಯ ಶಯನಗೆ ಅಖಿಲ ಭೂತೇಶಗೆ ।
ತುಂಬುರ – ನಾರದ ಮುನಿವಂದ್ಯಗೆ ॥
ಎಂಭತ್ತನಾಲ್ಕು ಲಕ್ಷ ಯೋನಿಗಳ ರಾಶಿಯನು ।
ಗೊಂಬೆಯನು ಮಾಡಿ ಕುಣಿಸುವ ದೇವಗೆ ೨

ಕಂದರ್ಪನಯ್ಯನಿಗೆ ಕೋಟಿಲಾವಣ್ಯನಿಗೆ
ಸುಂದರಮೂರುತಿ ಹರಿ ಸರ್ವೋತ್ತಮನಿಗೆ ॥
ಕಂದ ಪ್ರಹ್ಲಾದನ ಕಾಯ್ದ ದೇವನಿಗೆ ಅರ ।
............................................ ೩

ಪನ್ನಂಗಶಯನಗೆ ಪಾವನ್ನ ಚರಿತಗೆ ।
ಸನ್ನುತರಾದ ಸಜ್ಜನ ಪಾಲಗೆ ॥
ಎನ್ನೊಡೆಯ ಸಿರಿದೇವಿಯರಸು ಮುದ್ದುರಂಗಗೆ ।
ತನ್ನ ನಂಬಿದವರನು ಸಲಹುವವಗೆ ೪

ಕರಿರಾಜವರದಗೆ ಕರುಣಾಸಮುದ್ರಗೆ ।
ಗರುಡಗಮನನಿಗೆ ವೈಭವಹಾರಗೆ ॥
ವರಪುರಂದರವಿಠಲ ಕಂಬುಕಂದರನಿಗೆ ।
ಅರವಿಂದನಾಭನಿಗೆ ಅಜನ ಪಿತಗೆ ೫

## ೩೧೧

ಜಯಮಂಗಳಂ ನಿತ್ಯ ಶುಭಮಂಗಳಂ ಪ

ಮಂಗಳವು ಆನಂದತೀರ್ಥ ಗುರುರಾಯರಿಗೆ
ಮಂಗಳವು ಮಧುರವಾಕ್ಯ ಸುಭಾಷ್ಯಗೆ ಅಪ

ಅಂಜನೆಯ ಗರ್ಭಸಂಜಾತ ವಿಖ್ಯಾತನಿಗೆ
ಸಂಜೀವಿನಿಯ ತಂದ ಹನುಮಂತಗೆ ॥
ಸಂಜೆಯಲಿ ಲಂಕಿಣಿಯನಂಜಿಸಿ ಪೊಕ್ಕ ಪ್ರ
ಭಂಜನನ ಕುವರ ಮಂಜುಳವಾಕ್ಯಗೆ ೧

ದ್ವಾಪರದಿ ಕುಂತಿಯೊಳ್ ಪರ್ವತದಿ ಜನಿಸಿದಗೆ
ಪಾಪಿ ಜರಾಸಂಧನನು ಸೀಳ್ದವಗೆ ॥
ದ್ರೌಪತಿಯ ಸೌಗಂಧಿ ಕುಸುಮವನು ತಂದವಗೆ
ಶ್ರೀಪತಿಯ ದಾಸ ಶ್ರೀ ಭೀಮಸೇನನಿಗೆ ೨

ಕಲಿಯುಗದಿ ಶಂಕರನ ದುರ್ಮತವ ತರಿದವಗೆ
ಖಳ ಬೌದ್ಧ ಚಾರ್ವಾಕ ಮತವ ಗೆಲಿದವಗೆ ॥
ಒಲಿದು ಸಚ್ಛಾಸ್ತ್ರವನು ಸಾಧುಗಳಿಗೊರೆದವಗೆ
ಸುಲಭ ಪುರಂದರವಿಠಲನ ದಾಸಗೆ ೩

## ೩೧೨

ಜಯಮಂಗಳಂ ನಿತ್ಯ ಶುಭಮಂಗಳಂ ಪ.

ಗುರುಭಕ್ತಿಯೆಂತೆಂಬ ಗಮಕದೋಲೆಯನಿಟ್ಟು
ಹರಿಧ್ಯಾನವೆಂಬ ಆಭರಣವಿಟ್ಟು ॥
ಪರತತ್ವವೆಂತೆಂಬ ಪಾರಿಜಾತವ ಮುಡಿದು
ಪರಮಾತ್ಮ ಹರಿಗೆ ಆರತಿಯೆತ್ತಿರೆ ೧

ಆದಿ ಮೂರತಿಯೆಂಬ ಅಚ್ಚ ಅರಿಸಿಣ ಬಳಿದು
ವೇದಮುಖವೆಂಬ ಕುಂಕುಮವನಿಟ್ಟು ॥

ಸಾಧು – ಸಜ್ಜನ ಸೇವೆಯೆಂಬ ಸಂಪಿಗೆ ಮುಡಿದು
ಮೋದದಿಂ ಲಕ್ಷ್ಮಿಗಾರತಿಯೆತ್ತಿರೆ ೨

ತನುವೆಂಬ ತಟ್ಟೆಯಲಿ ಮನದ ಸೊಡರನು ಇಡಿಸಿ
ಘನಶಾಂತಿಯೆಂಬ ಆಜ್ಯವನು ತುಂಬಿ ॥
ಆನಂದವೆಂತೆಂಬ ಜ್ಯೋತಿಯನು ಹಚ್ಚಿ
ಚಿನುಮಯ ಹರಿಗೆ ಆರತಿಯೆತ್ತಿರೆ ೩

ಕಾಮಾಂಧವಳಿದಂತ ಕಮಲದ ತಟ್ಟೆಯಲಿ
ನೇಮವೆಂತೆಂಬ ಹರಿದ್ರವನು ಕದಡಿ ॥
ಆ ಮಹಾಸುಜ್ಞಾನವೆಂಬ ಸುಣ್ಣವ ಬೆರಸಿ
ಸೋಮಧರವರದಗಾರತಿಯೆತ್ತಿರೆ ೪

ನಾರದವಂದ್ಯಗೆ ನವನೀತಚೋರಗೆ
ನಾರಾಯಣಗೆ ಶ್ರೀ ವರಲಕ್ಷ್ಮಿಗೆ ॥
ಸಾರಿದವರನು ಪೊರೆವ ಪುರಂದರವಿಠಲಗೆ
ನೀರಜಮುಖಿಯರಾರತಿಯೆತ್ತಿರೆ ೫

## ೩೧೩

ಜಯಮಂಗಳಂ ನಿತ್ಯ ಶುಭಮಂಗಳಂ ಪ.

ಮಂಗಳ ಮಧು ಕೈಟಭಾಸುರ ಮರ್ದನಗೆ
ಮಂಗಳ ಮದನಕೋಟಿಲಾವಣ್ಯಗೆ ॥
ಮಂಗಳ ಜಗದಂತರಂಗ ಕೃಪಾಂಗಗೆ
ಮಂಗಳ ಯದುಕುಲೋತ್ತಮ ಸಾರ್ವಭೌಮಗೆ ೧

ಶ್ರೀವತ್ಸಲಾಂಛನಗೆ ಸಿರಿದೇವಿಯರಸಗೆ
ಗೋವರ್ಧನೋದ್ಧಾರ ಗೋವಿಂದಗೆ ॥
ಮಾವ ಕಂಸನ ಕೊಂದ ಮಕರಕುಂಡಲಧರ
ಭಾವಜನಯ್ಯ ಚಿನ್ಮಯ ಮೂರ್ತಿಗೆ ೨

ಅಂಬುಜನಾಭಗೆ ಅಖಿಳಲೋಕೇಶಗೆ
ಶಂಭು – ಅಜ – ಸುರ – ಮುನಿವಂದ್ಯ ಹರಿಗೆ ॥
ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳ
ಬೊಂಬೆಯ ಮಾಡಿ ಕುಣಿಸುವ ದೇವಗೆ ೩

ಸಕಲಗುಣಪೂರ್ಣಗೆ ಸರ್ವಸ್ವಾತಂತ್ರ್ಯಗೆ
ಅಕಳಂಕ ಆದಿ ನಿರ್ದೋಷ ಹರಿಗೆ ॥
ಭಕುತವತ್ಸಲನಿಗೆ ಭವರೋಗವೈದ್ಯಗೆ
ನಿಖಿಳ ಜೀವದಯಾಪರಿಪೂರ್ಣಗೆ ೪

ಪನ್ನಗಶಯನಗೆ ಪಾವನಮೂರ್ತಿಗೆ
ಸನ್ನುತಾನಂತ ಸದ್ಗುಣಭರಿತಗೆ ॥
ಎನ್ನೊಡೆಯ ಪುರಂದರವಿಠಲ ರಾಯಗೆ
ತನ್ನ ನಂಬಿದವರ ಸಲಹುವ ಮೂರ್ತಿಗೆ ೫

## ೩೧೪

ಜೋ ಜೋ ಯಶೋದೆಯ ನಂದ ಮುಕುಂದನೆ
ಜೋ ಜೋ ಕಂಸಕುಠಾರಿ ಪ.

ಜೋ ಜೋ ಮುನಿಗಳ ಹೃದಯಾನಂದನೆ
ಜೋ ಜೋ ಲಕುಮಿಯ ರಮಣ ಅಪ

ಹೊಕ್ಕುಳ ಹೂವಿನ ತಾವರೆಗಣ್ಣಿನ
ಇಕ್ಕಿದ ಮಕರಕುಂಡಲದ
ಜಕ್ಕುಳಿಸುವ ಕದಪಿನ ಸುಳಿಗುರುಳಿನ
ಚಿಕ್ಕ ಬಾಯ ಮುದ್ದುಮೊಗದ ॥
ಸೊಕ್ಕಿದ ಮದಕರಿಯಂದದಿ ನೊಸಲೊಳ
ಗಿಕ್ಕಿದ ಕಸ್ತೂರಿ ತಿಲಕ ।
ರಕ್ಕಸರೆದೆದಲ್ಲಣ ಮುರವೈರಿಯೆ
ಮಕ್ಕಳಮಾಣಿಕ್ಯ ಜೋ ಜೋ ೧

ಕಣ್ಣ ಬೆಳಗು ಪಸರಿಸುತಿರೆ ಗೋಪಿ ಅರೆ
ಗಣ್ಣ ಮುಚ್ಚಿ ನೋಡಿ ನಗುತ ।
ಸಣ್ಣ ಬೆರಳುಗಳ ಬಾಯೊಳಗಳವಡಿಸಿ
ಪನ್ನಗಶಯನ ತೊಟ್ಟಿಲಲಿ ॥
ನಿನ್ನ ಮಗನ ಮುದ್ದ ನೋಡು ಎಂದೆನುತಲಿ
ತನ್ನ ಪತಿಗೆ ತೋರಿದಳು ।
ಹೊನ್ನ ಬಣ್ಣದ ಸೊಬಗಿನ ಖಣಿಯೆ ಹೊಸ
ರನ್ನದ ಬೊಂಬೆಯೆ ಜೋ ಜೋ ೨

ನಿಡು ತೋಳ್ಗಳ ಪಸರಿಸುತಿರೆ ಗೋಪಿಯ
ತೊಡೆಯ ಮೇಲ್ಮಲಗಿ ಬಾಯ್ದೆರೆಯೆ ।
ಒಡಲೊಳಗೀರೇಳು ಭುವನವಿರಲು ಕಂಡು
ನಡುಗಿ ಕಂಗಳನು ಮುಚ್ಚಿದಳು ॥
ಸಡಗರಿಸುತ ತಾನರಿಯದಂತೆಯೆ
ಹೊಡೆ ಮರುಳಿ ಮೊಗವ ನೋಡುತಲಿ
ಕಡಲಶಯನ ಮೊಗವ ನೋಡುತಲಿ
ಕಡಲಶಯನ ಶ್ರೀ ಪುರಂದರವಿಠಲನು
ಬಿಡದೆ ನಮ್ಮೆಲ್ಲರ ರಕ್ಷಿಸುವ ೩

## ೩೧೫

ಜೋ ಜೋ ಶ್ರೀ ಕೃಷ್ಣ ಪರಮಾನಂದ
ಜೋ ಜೋ ಗೋಪಿಯ ಕಂದ ಮುಕುಂದ ಪ.

ಪಾಲುಗಡಲೊಳು ಪವಡಿಸಿದವನೆ ಒಂ
ದಾಲದೆಲೆಯ ಮೇಲೆ ಮಲಗಿದ ಶಿಶುವೇ ॥
ಶ್ರೀ ಲತಾಂಗಿಯರ ಚಿತ್ತವಲ್ಲಭನೇ
ಬಾಲ ನಿನ್ನನು ಪಾಡಿ ತೂಗುವೆನಯ್ಯ ಜೋ ಜೋ ೧

ಹೊಳೆಯುವ ರನ್ನದ ತೊಟ್ಟಿಲ ಮೇಲೆ
ಥಳ ಥಳಿಸುವ ಗುಲಗಂಜಿಯ ಮಾಲೆ ॥

ಅಳದೆ ನೀ ಪಿಡಿದಾಡೆನ್ನಯ ಮುದ್ದು ಬಾಲ
ನಳಿನನಾಭನೆ ನಿನ್ನ ಪಾಡಿ ತೂಗುವೆನು ಜೋ ಜೋ ೨

ಆರ ಕಂದ ನೀನಾರ ನಿಧಾನಿ
ಆರ ರತ್ನವೊ ನೀನಾರ ಮಾಣಿಕವೋ ॥
ಸೇರಿತು ಎನಗೊಂದು ಚಿಂತಾಮಣಿಯು – ಎಂದು
ಪೋರ ನಿನ್ನನು ಪಾಡಿ ತೂಗುವೆನಯ್ಯ – ಜೋ ಜೋ ೩

ಗುಣನಿಧಿಯೇ ನಿನ್ನ ಎತ್ತಿಕೊಂಡಿದ್ದರೆ
ಮನೆಯ ಕೆಲಸವಾರು ಮಾಡುವರಯ್ಯ ॥
ಮನಸಿಗೆ ಸುಖನಿದ್ರೆ ತಂದುಕೊ ಬೇಗ
ಫಣಿಶಯನನೆ ನಿನ್ನ ಪಾಡಿ ತೂಗುವೆನು – ಜೋ ಜೋ ೪

ಅಂಡಜವಾಹನ ಅನಂತ ಮಹಿಮ
ಪುಂಡರೀಕಾಕ್ಷ – ಪರಮ ಪಾವನ ॥
ಹಿಂಡು ದೈವದ ಗಂಡ ಉದ್ದಂಡ ದೇವನೆ
ಪಾಂಡುರಂಗ ಶ್ರೀ ಪುರಂದರವಿಠಲ – ಜೋ ಜೋ ೫

## ೩೧೬

ತುರುಕರು ಕರೆದರೆ ಉಣಬಹುದಣ್ಣ ।
ತುರುಕರು ಕರೆದರೆ ಉಣಬಹುದು ಪ.

ಕರ ಕರೆ ಚಂಚಲ ಮಾಡದಿರಣ್ಣ ।
ತುರುಕರು ಕರೆದರೆ ಉಣಬಹುದು ಅ.ಪ

ತುರುಕರುವಿಂದ ಮುಟ್ಟು ಮುಡಚಟ್ಟು ಹೋಹುದು ।
ತುರುಕರುವಿಂದ ಹೋಹದು ಎಂಜಲವು ॥
ತುರುಕರು ಕಂಡರೆ ಸರಕನೆ ಏಳಬೇಕು ।
ತುರುಕರುವಿನ ಮಂತ್ರ ಜಪಿಸಬೇಕಣ್ಣ ೧

ತುರುಕರುವಿಂದ ಸ್ವರ್ಗ ಸ್ವಾಧೀನವಾಹುದು ।
ತುರುಕರುವಿಂದ ನರಕ ದೂರಪ್ಪುದು ॥
ತುರುಕರು ಕೂದಲ ತುರುಬಿಗೆ ಸುತ್ತಿಕೊಂಡು ।
ಗರತಿಯರೆಲ್ಲ ಮುತ್ತೈದೆಯರಣ್ಣ ೨

ತುರುಕರುವಿನ ನೀರೆರಕೊಂಡ ನಮ್ಮ ದೇವ ।
ಉರವಕೊಂಡ ನೀರೆಲ್ಲ ಸನಕಾದಿಗೆ ॥
ಬೆರಕೆಯ ಮಾಡಿದ ಪುರಂದರವಿಠಲ ।
ಅರಿಕೆಯ ಮಾಡಿದ ಹರಿದಾಸರಿಗೆಲ್ಲ ೩

## ೩೧೭

ತೂಗಿರೆ ರಂಗನ್ನ ತೂಗಿರೆ ಕೃಷ್ಣನ
ತೂಗಿರೆ ಅಚ್ಯುತಾನಂತನ ಪ.

ತೂಗಿರೆ ವರಗಿರಿ ಅಪ್ಪ ತಿಮ್ಮಪ್ಪನ
ತೂಗಿರೆ ಕಾವೇರಿ ರಂಗಯ್ಯನ ಅಪ

ಇಂದ್ರಲೋಕದೊಳುಪೇಂದ್ರ ಮಲಗಿಹನೆ
ಬಂದೊಮ್ಮೆ ತೊಟ್ಟಿಲ ತೂಗಿರೆ
ಮಂದಗಮನೆಯರು ಚೆಂದದಿ ಪಾಡುತ
ನಂದನ ಕಂದನ ತೂಗಿರೆ ೧

ನಾಗಲೋಕದಲ್ಲಿ ನಾರಾಯಣ ಮಲಗಿಹನೆ
ಹೋಗಿ ನೀವ್ ತೊಟ್ಟಿಲ ತೂಗಿರೆ
ನಾಗವೇಣಿಯರು ನಾಲ್ಕು ನೇಣನು ಪಿಡಿದು
ಭಾಗ್ಯವಂತನೆಂದು ತೂಗಿರೆ ೨

ಜಲಧಿಯೊಳಾಲದ ಎಲೆಯಲ್ಲಿ ಮಲಗಿದ
ಚೆಲುವನ ತೊಟ್ಟಿಲ ತೂಗಿರೆ
ಸುಲಭ ದೇವರ ದೇವ ಬಲಿಬಂಧಮೋಚಕ
ಎಳೆಯನ ತೊಟ್ಟಿಲ ತೂಗಿರೆ ೩

ಸೂಸುವ ಮಡುವಿನೊಳ್ ಕಾಳಿಯನ ತುಳಿದಿಟ್ಟ
ದೋಷವಿದೂರನ ತೂಗಿರೆ
ಸಾಸಿರ ನಾಮದ ಸರ್ವೋತ್ತಮನೆಂದು
ಲೇಸಾಗಿ ತೊಟ್ಟಿಲ ತೂಗಿರೆ ೪

ಅರಳೆಲೆ ಮಾಗಾಯಿ ಕೊರಳ ಪದಕ ಸರ
ತರಳನ ತೊಟ್ಟಿಲ ತೂಗಿರೆ
ಉರಗಾದ್ರಿವಾಸ ಶ್ರೀ ಪುರಂದರವಿಠಲನ
ಹರುಷದಿ ಪಾಡುತ ತೂಗಿರೆ ೫

## ೩೧೮

ದೇವಕಿಯುದರ ಸಂಜಾತನೆ ಜೋ ಜೋ
ಕಾವನ ಪಿತ ಕಮಲಾಕ್ಷನೆ ಜೋ ಜೋ
ಶ್ರೀ ವೈಭವ ಸಚ್ಚಿದಾನಂದ ಜೋ ಜೋ
ಭಾವಕಿ ಗೋಪಿಯ ಕಂದನೆ ಜೋ ಜೋ ೧

ಮಧುರೆಯೊಳುದಿಸಿದ ಮಹಿಮನೆ ಜೋ ಜೋ
ಯದುಕುಲ ತಿಲಕ ಯಾದವರಾಯ ಜೋ ಜೋ ॥
ಮಧುಕೈಟಭಮುರಮರ್ದನ ಜೋ ಜೋ
ಚದುರನಾಗಿ ತುರುಗಳ ಕಾಯ್ದೆ ಜೋ ಜೋ ೨

ಗೋಕುಲಪಾಲಕ ಗೋವಿಂದ ಜೋ ಜೋ
ಶ್ರೀ ಕುಚಕುಂಕುಮಾಂಕಿತ ಕೃಷ್ಣ ಜೋ ಜೋ ॥
ಪಾಕಶಾಸನ ಮುಖ್ಯ ಸುರವಂದ್ಯ ಜೋ ಜೋ
ಲೋಕವೀರೇಳ ಪೆತ್ತಾತನೆ ಜೋ ಜೋ ೩

ಶ್ರುತಿಚೋರ ಸಂಹಾರಕ ದೇವ ಜೋ ಜೋ
ಜತನದಿ ಸುರರಿಗಮೃತವಿತ್ತೆ ಜೋ ಜೋ ॥
ಕ್ಷಿತಿಯ ಕದ್ದೊಯ್ದನ ಸೀಳ್ದೆ ನೀ ಜೋ ಜೋ
ಮತಿಯುತ ಬಾಲಕನತಿ ರಕ್ಷ ಜೋ ಜೋ ೪

ಕ್ಷಿತಿಯ ಈರಡಿಗೆಯ್ದ ವಾಮನ ತ್ರುವಿ
ಯತಿವಂಶ ಜನನ ಭಾರ್ಗವ ರೂಪ ತ್ರುವಿ ॥
ಕ್ರತುವ ರಕ್ಷಕ ಕಾಕುಸ್ಥನೆ ತ್ರುವಿ
ರತಿಪತಿಪಿತ ಸುರನುತ ಕೃಷ್ಣ ತ್ರುವಿ ೫

ಗೋಪಿಕಾನಂದ ಮುಕುಂದನೆ ಜೋ ಜೋ
ಭೂಪರೊಳ್ಕಾದಿ ಬಳಲಿದನೆ ಜೋ ಜೋ
ಶ್ರೀ ಪುರುಷೋತ್ತಮ ನರಸಿಂಹ ಜೋ ಜೋ
ಅಪಾರ ಮಹಿಮಾರ್ಣವ ದೇವ ಜೋ ಜೋ ೬

ಮಣ್ಣೊಳಗಾಡಿ ನೀ ಬಂದೆಯ ತ್ರುವಿ
ಬೆಣ್ಣೆಯ ಬೇಡೆ ಬಯ್ದೆನೆ ಕಂದ ತ್ರುವಿ
ಕಣ್ಣ ದೃಷ್ಟಿಗೆ ಕರಗದ ಕಂದ ತ್ರುವಿ
ಚೆಣ್ಣ ಸುಮ್ಮನೆ ಇರು ಶ್ರೀಕೃಷ್ಣ ತ್ರುವಿ ತ್ರುವಿ ೭

ತಾರಕ ಸತಿವ್ರತಹಾರಕ ಜೋ ಜೋ
ವಾರಣ ಹಯವೇರಿ ಮೆರೆದನೆ ಜೋ ಜೋ ॥
ಸಾರಿದವರ ಸಂತೈಸುವ ಜೋ ಜೋ
ಶ್ರೀ ರಮಾಕಾಂತ ಶ್ರೀ ಕೃಷ್ಣನೆ ಜೋ ಜೋ ೮

ಶರಣಾಗತ ವಜ್ರಪಂಜರ ತ್ರುವಿ
ಕರುಣಾಕರ ಕಮಲಾಕ್ಷನೆ ತ್ರುವಿ ॥
ಧರಣಿಧರಶಾಯಿ ಶ್ರೀ ವರ ತ್ರುವಿ ॥
ವರದ ಶ್ರೀ ಪುರಂದರವಿಠಲನೆ ತ್ರುವಿ ತ್ರುವಿ ೯

## ೩೧೯

ಧೂಪಾರತಿಯ ನೋಡುವ ಬನ್ನಿ ನಮ್ಮ
ಗೋಪಾಲಕೃಷ್ಣನ ಪೂಜೆಯ ಸಮಯದಿ ಪ.

ಅಗರು ಚಂದನ ಧೂಪ ಗುಗ್ಗುಳ ಸಾಮ್ರಾಣಿ
ಮಘಮಘಿಸುವ ಧೂಪದಾರತಿಯು ॥
ಮಿಗಿಲಾದ ಏಕಾಂತಭಕ್ತಿಯಲಿ ನಮ್ಮ
ಜಗನ್ನಾಥ ಕೃಷ್ಣನ ದೇವರ ಪೂಜೆಯ ೧

ಮದ್ದಳೆ ಜಾಂಗಟೆ ತಾಳ ತಮ್ಮಟೆ ಭೇರಿ
ತದ್ಧಿಮಿ ಧಿಮಿಕೆಂಬ ನಾದಗಳು ॥
ಹೊದ್ದಿದ ಧವಳ ಶಂಖದ ಘೋಷಣಂಗಳ
ಪದ್ಮನಾಭನ ದಿವ್ಯ ದೇವರ ಪೂಜೆಯ ೨

ಢಣ ಢಣ ಢಣರೆಂಬ ತಾಳ ದಂಡಿಗೆ ವೇಣು
ಢಣಕು ಧಿಮಿಕು ಎಂಬ ಮದ್ದಳೆಯು ॥
ಝುಣಿಝುಣಿಸುವ ವೀಣೆ ಕಿನ್ನರಿ ಸ್ವರಗಳ
ಘನರಾಗದಿಂದಲಿ ಹಾಡುತ ಪಾಡುತ ೩

ಮುತ್ತು ಛತ್ರ ಚಾಮರ ಪತಾಕ ಧ್ವಜ
ರತ್ನ ಕೆಚ್ಚಿದ ಪದಕ ಹಾರಗಳು ॥
ಮತ್ತೆ ಕೋಟಿ ಸೂರ್ಯ ಪ್ರಭೆಯ ಧಿಕ್ಕರಿಸುವ
ಸತ್ಯಭಾಮೆ ರುಕ್ಮಿಣಿಯರರಸನ ೪

ಹರ ಬ್ರಹ್ಮ ಸುರಪತಿ ದೇವತೆ ಮೊದಲಾದ
ಪರಮ ಪಾವನ ಮೂರ್ತಿ ಪುರುಷೋತ್ತಮನ ॥
ಪರದೈವತವೆಂದು ಬಿರುದು ಪೊಗಳಿಸಿಕೊಂಬ
ಪುರಂದರವಿಠಲನ ಪೂಜೆಯ ಕಾಲದ ೫

## ೩೨೦

ನೈವೇದ್ಯವ ಕೊಳ್ಳೊ ನಾರಾಯಣಸ್ವಾಮಿ
ದಿವ್ಯ ಷಡುರಸಾನ್ನವನಿಟ್ಟೆನೊ ಪ.

ಘಮಘಮಿಸುವ ಶಾಲ್ಯನ್ನ ಪಂಚಭಕ್ಷ್ಯ
ಅಮೃತ ಕೂಡಿದ ದಿವ್ಯ ಪರಮಾನ್ನವು ॥ ಅ

ರಮಾದೇವಿಯು ಸ್ವಹಸ್ತದಿ ಮಾಡಿದ ಪಾಕ
ಭೂಮಿ ಮೊದಲಾದ ದೇವಿಯರ ಸಹಿತ ತಾನು ೧

ಅರವತ್ತು ಶಾಕ ಲವಣ ಶಾಕ ಮೊದಲಾದ
ಸರಸ ಮೊಸರುಬುತ್ತಿ ಚಿತ್ರಾನ್ನವ
ಪರಮ ಮಂಗಳ ಅಪ್ಪಾಲು ಅತಿರಸಗಳ
ಹರುಷದಿಂದಲಿ ಇಟ್ಟ ಹೊಸ ತುಪ್ಪವ ೨

ವಡೆಯಂಬೋಡಿಯು ದಧಿವಡೆಯ ತಿಂತಿಣಿ
ಒಡೆಯನೆ ಬಡಿಸಿದೆ ಅಧಿಕವಾಗಿ ॥
ದೃಢವಾದ ಪಡಿಪದಾರ್ಥವನೆಲ್ಲ ಇಡಿಸಿದೆ
ಒಡೆಯ ಶ್ರೀ ಪುರಂದರವಿಠಲ ನೀನುಣ್ಣೊ ೩

## ೩೨೧

ಪಂಕಜ ಮುಖಿಯರೆಲ್ಲರು ಬಂದು ಲಕ್ಷ್ಮೀ
ವೆಂಕಟ ರಮಣಗಾರತಿಯೆತ್ತಿರೆ ಪ.

ಮತ್ಸ್ಯಾವತಾರಗೆ ಮಂದರೋದ್ಧಾರಗೆ
ಉತ್ಸಾಹದಿ ಭೂಮಿ ತಂದವಗೆ ॥
ವತ್ಸಗಾಗಿ ಕಂಬದಿಂದಲಿ ಬಂದ
ಉತ್ಸವ ನರಸಿಂಹಗಾರತಿಯೆತ್ತಿರೆ ೧

ವಾಮನರೂಪದಿ ದಾನ ಬೇಡಿದವಗೆ
ನೇಮದಿ ಕೊಡಲಿಯ ಪಿಡಿದವಗೆ ॥
ರಾಮನಾಗಿ ದಶಶಿರನನು ಕೊಂದ
ಸ್ವಾಮಿ ಶ್ರೀ ಕೃಷ್ಣಗಾರತಿಯೆತ್ತಿರೆ ೨

ಬತ್ತಲೆ ನಿಂತಗೆ ಬೌದ್ಧಾವತಾರಗೆ
ಉತ್ತಮ ಅಶ್ವವನೇರಿದಗೆ ॥
ಭಕ್ತರ ಸಲಹುವ ಪುರಂದರವಿಠಲಗೆ
ಮುತ್ತೈದೆಯರಾರತಿಯೆತ್ತಿರೆ ೩

## ೩೨೨

ಫಲಹಾರವನೆ ಮಾಡೊ ಪರಮಪುರುಷನೆ ।
ಲಲನೆ ಲಕ್ಷ್ಮೀಸಹ ಸಕಲ ಸುರರೊಡೆಯ ಪ.

ಕಬ್ಬು ಕದಳಿಫಲ ಕೊಬ್ಬರಿ ಖರ್ಜೂರ ।
ಕೊಬ್ಬಿದ ದ್ರಾಕ್ಷಿ ಹಲಸು ತೆಂಗು ॥
ಶುಭ್ರ ಸಕ್ಕರೆ ಲಿಂಬೆ ಮಾವು ಕಿತ್ತಳೆಗಳು ।
ಇಬ್ಬದಿಯಲಿ ಇಟ್ಟ ಶೇಷ ಫಲಂಗಳ ೧

ನೆನೆಗಡಲಿಬೇಳೆ ಲಡ್ಡಿಗೆ ಮೂಗದಾಳು ।
ಪಾನಕ ಶುಂಠಿಬೆಲ್ಲ ಯಾಲಕ್ಕಿಯು ॥
ಗೊನೆ ಬಾಳೆಹಣ್ಣು ಘೃತವು ನೊರೆಹಾಲು ।
ಕನಕ ಪಾತ್ರೆಯೊಳಿಟ್ಟು ಸಕಲ ಪದಾರ್ಥವ ೨

ಧ್ಯಾನ ಪೂರ್ವಕದಿಂದ ಮಾನಸ ಪೂಜೆಯು ।
ಪನ್ನೀರನೆ ಭಕುತ ವತ್ಸಲಗೆ ॥
ಜಾನಕಿರಮಣಗೆ ಷೋಡಶೋಪಚಾರ ।
ದಾನವಾಂತಕ ಸಿರಿ ಪುರಂದರವಿಠಲ ೩

## ೩೨೩

ಫಲಾಹಾರವನು ಮಾಡೊ ಪರಮಪುರುಷ ಭೂ
ಲಲನೆ ಲಕ್ಷ್ಮೀ ಕಂದರ್ಪರ ಸಹಿತ ಪ.

ಕದಳಿ ಕೆಂಬಾಳೆ ಕಿತ್ತಳೆ ಕಂಚಿ ಫಲಗಳು
ಬದರಿ ಬೆಳುವಲ ಜಂಬೀರ ದ್ರಾಕ್ಷಿಗಳು ॥
ಮಧುರದ ಮಾದಾಳ ಮಾವಿನ ಹಣ್ಗಳು
ತುದಿ ಮೊದಲಿಲ್ಲದ ಪರಿಪರಿ ಫಲಗಳ ೧

ಉತ್ತತ್ತಿ ಜಂಬು ನಾರಂಗ ದಾಳಿಂಬವು
ಮುತ್ತಾದೌದುಂಬರ ಕಾರಿಯು ಕವಳಿ ॥

ಕತ್ತರಿಸಿದ ಕಬ್ಬು ಪಲಸು ತೆಂಗಿನಕಾಯಿ
ಒತ್ತಿದ ಬೇಳೆ ನೆಲಗಡಲೆ ಖರ್ಜೂರ ಹಣ್ಣ ೨

ಹಾಲು ಸಕ್ಕರೆ ಜೇನುತುಪ್ಪ ಸೀಕರಣೆಯು
ಹಾಲು ರಸಾಯನ ಬೆಣ್ಣೆ ಸೀಯಾಳು ॥
ಮೂಲೋಕದೊಡೆಯ ಶ್ರೀ ಪುರಂದರವಿಠಲನೆ
ಪಾಲಿಸೋ ನಿನ್ನಯ ಕರಕಂಜದಿಂದಲಿ ೩

## ೩೨೪

ಮನ್ನಾರು ಕೃಷ್ಣಗೆ ಮಂಗಳ ಜಗವ
ಮನ್ನಿಸಿದೊಡೆಯಗೆ ಮಂಗಳ ಪ.

ಬೊಮ್ಮನ ಪಡೆದಗೆ ಭಕ್ತರುದ್ಧಾರಿಗೆ
ಕಮ್ಮಗೋಲನಯ್ಯಗೆ ಮಂಗಳ ॥
ಧರ್ಮಸಂರಕ್ಷಗೆ ದಾನವ ಶಿಕ್ಷಗೆ
ನಮ್ಮ ರಕ್ಷಕನಿಗೆ ಮಂಗಳ ೧

ತುರುಗಳ ಕಾಯ್ದಗೆ ಕರುಣಾಕರನಿಗೆ
ಗಿರಿಯನೆತ್ತಿದನಿಗೆ ಮಂಗಳ ॥
ಪುರದ ತಿಮ್ಮಪ್ಪಗೆ ವಾರಿಜನಾಭಗೆ
ಹರಿಸರ್ವೋತ್ತಮನಿಗೆ ಮಂಗಳ ೨

ದೇವಕಿ ದೇವಿಯ ತನಯಗೆ ಮಂಗಳ
ದೇವ ತಿಮ್ಮಪ್ಪಗೆ ಮಂಗಳ ॥
ಮಾವನ ಕೊಂದು ಮಲ್ಲರ ಮಡುಹಿದ
ಪುರಂದರವಿಠಲಗೆ ಮಂಗಳ ೩

## ೩೨೫

ಮುದ್ದು ಮಾಡಬಾರದೇನೇ ಮುದ್ದು ಮಾಯಾದೇವಿ ಪ.

ಮುದ್ದು ಬಾಲಕೃಷ್ಣನಲ್ಲಿ ಮನಸು ನಿಲ್ಲುವ ಹಾಗೆ ಅ.ಪ

ಕರಗಳಿಂದ ಹರಿಯ ಮಂದಿರದ ಕಸವ ತೆಗೆಯಲಿಕ್ಕೆ ।
ನಿರುತದಲ್ಲೂ ಬೇಸರಿಯದೆ ಹರುಷವು ಪುಟ್ಟುವ ಹಾಗೆ ೧

ಶ್ರುತಿ – ರಾಮಾಯಣ ಶ್ರೀ ಭಾಗವತ ಪಂಚರಾತ್ರಾಗಮಾದಿ
ಕಥೆಯ ಕೇಳುವುದಕೆ ಬಹಳ ರತಿಯು ಪುಟ್ಟುವ ಹಾಗೆ ೨

ದೇಹವು ಅನಿತ್ಯವೆಂದು ನೇಹದಿಂದ ಪೋಷಿಸದಲೆ ।
ಮಾಹೇಂದ್ರಾವರಜನ ಅಹರಹರವು ಭಜಿಸುವ ಹಾಗೆ ೩

ನರರ ಸ್ತವನ ಹೇಯವೆಂದು ಅರಗಳಿಗೆಯು ಅಗಲದಲೆ ।
ನರಹರಿಯ ಭಕ್ತರಿಗೆ ಶರಣುಹೋಗುವ ಹಾಗೆ ೪

ಮನಸು ವಾಕ್ಕಾಯಗಳಿಂದ ಸದ್ ಗುಣದಿ ಪುರಂದರವಿಠಲನ
ಅನುರಾಗದಿಂ ಬಿಡದೆ ಪಾಡಿ ಕುಣಿದು ಕುಣಿದು ದಣಿವ ಹಾಗೆ ೫

## ३೨೬

ಮದ್ದು ಮಾಡಲರಿಯಾ ಮುದ್ದು ರಮಾದೇವೀ ಪ.

ಮುದ್ದು ಕೃಷ್ಣನಲ್ಲಿ ಮನ ಸಿದ್ಧವಾಗಿ ನಿಲ್ಲುವಂತೆ ಅಪ

ವಚನಗಳೆಲ್ಲ ವಾಸುದೇವನ ಕಥೆಯೆಂದು
ರಚನೆ ಮಾಡುವರಲ್ಲಿ ರಕ್ತಿ ನಿಲ್ಲುವ ಹಾಗೆ ೧

ಸಂತೆ ನೆರಹಿ ಸತಿ ಸುತರು ತನ್ನವರೆಂಬ
ಭ್ರಾಂತಿ ಬಿಟ್ಟು ನಿಶ್ಚಿಂತನಾಗುವ ಹಾಗೆ ೨

ಎನ್ನೊಡೆಯ ಸಿರಿ ಪುರಂದರವಿಠಲನ
ಸನ್ಮತಿಯಿಂದೆ ಹಾಡಿ ಪಾಡುವ ಹಾಗೆ ३

## ೩೨೭

ಮಂಗಳಂ ಜಯ ಮಂಗಳಂ ಪ.

ಅಕ್ರೂರವರದ ತ್ರಿವಿಕ್ರಮಗೆ
ನಕ್ರನ ಗೆಲಿದ ಪರಾಕ್ರಮಿಗೆ ॥
ಶಕ್ರನ ಗರ್ವವ ನಿರಸನ ಮಾಡಿದ
ಶುಕ್ರನ ಶಿಷ್ಯನಿಗೊಲಿದವಗೆ ೧

ಗಂಗೆಯ ಪಡೆದ ಶ್ರೀರಂಗನಿಗೆ
ರಂಗು ಮಾಣಿಕದುಂಗುರದವಗೆ ॥
ಭೃಂಗಕುಂತಳೆಯರ ವ್ರತವನು ಕೆಡಿಸಿದ
ಅಂಗಜನಯ್ಯ ಶುಭಾಂಗನಿಗೆ ೨

ಧರೆಯೊಳಗಧಿಕ ವೆಂಕಟಾಚಲದಿ
ಸ್ಥಿರವಹ ಪುಷ್ಕರಣಿಯ ತಟದಿ ॥
ಪರಮ ಪುರುಷ ಶ್ರೀ ಉರಗ ಗಿರಿಯ ದೊರೆ
ವರದ ಪುರಂದರವಿಠಲಗೆ ೩

## ೩೨೮

ಮಂಗಳಂ ಜಯಮಂಗಳಂ ಪ.

ವಾತಸುತ ಹನುಮನ ಒಡೆಯಗೆ ಮಂಗಳ
ದಾತ ಶ್ರೀ ರಘುಪತಿಗೆ ಮಂಗಳ ॥
ಸೇತುವೆಗಟ್ಟಿದ ರಾಯಗೆ ಮಂಗಳ
ಸೀತಾರಮಣಗೆ ಶುಭ ಮಂಗಳ ೧

ಬಿಲ್ಲ ಹಿಡಿದು ಬಲು ಬಿಂಕದ ದೈತ್ಯರ
ಹಲ್ಲ ಮುರಿದವಗೆ ಮಂಗಳ ।
ಕಲ್ಲಾದಹಲ್ಯೆಯನುದ್ಧಾರ ಮಾಡಿದ
ಬಲ್ಲಿದ ದಾಶರಥಿಗೆ ಮಂಗಳ ೨

ಹರಧನು ಮುರಿದ ವಿನೋದಿಗೆ ಮಂಗಳ
ವರದ ತಿಮ್ಮಪ್ಪಗೆ ಮಂಗಳ ॥
ಪುರಂದರವಿಠಲರಾಯಗೆ ಮಂಗಳ
ಸರುವೋತ್ತಮನಿಗೆ ಶುಭಮಂಗಳ ೩

## ೩೨೯

ಮಂಗಳಂ ಜಯ ಮಂಗಳಂ ಪ.

ಜಯ ಜಯ ಮಂಗಳ ಹರಿಗೆ
ಜಯ ಜಯ ಮಂಗಳ ಸಿರಿಗೆ
ಜಯ ಜಯ ವರದ ಪುರಂದರವಿಠಲಗೆ ೧

ಜಯ ವಾಸುದೇವನ ಸುತಗೆ
ಜಯ ಜಯ ಭೀಷ್ಮಕ ಸುತೆಗೆ
ಜಯ ಜಯ ದಂಪತಿ ವರದ ಪುರಂದರವಿಠಲಗೆ ೨

ಜಯ ಜಯ ದಶರಥ ಸುತಗೆ
ಜಯ ಜಯ ಜನಕನ ಸುತೆಗೆ
ಜಯ ಜಯ ದಂಪತಿ ವರದ ಪುರಂದರವಿಠಲಗೆ ೩

ಪರಮಾನಂದವು ಹರಿಗೆ
ಪರಮಾನಂದವು ಸಿರಿಗೆ
ಪರಮಾನಂದವು ವರದ ಪುರಂದರವಿಠಲಗೆ ೪

ಶುಭವಿದು ಶೋಭನ ಹರಿಗೆ
ಶುಭವಿದು ಶೋಭನ ಸಿರಿಗೆ
ಶುಭವಿದು ಶೋಭನ ವರದ ಪುರಂದರವಿಠಲಗೆ ೫

## ೩೩೦

ಮಂಗಳಂ ಜಯ ಮಂಗಳಂ ಪ.

ನಿಗಮವ ತಂದಾ ಮತ್ಸ್ಯನಿಗೆ
ನಗವ ಬೆನ್ನಲಿ ಪೊತ್ತ ಕೂರ್ಮನಿಗೆ ॥
ಜಗವನುದ್ಧರಿಸಿದ ವರಹಾವತಾರಗೆ
ಮಗುವನು ಕಾಯ್ದ ಮುದ್ದು ನರಸಿಂಹಗೆ ೧

ಭೂಮಿಯ ದಾನವ ಬೇಡಿದಗೆ
ಆ ಮಹಾಕ್ಷತ್ರಿಯರ ಗೆಲಿದವಗೆ ॥
ರಾಮಚಂದ್ರನಾದ ಸ್ವಾಮಿಗೆ ಸತ್ಯ
ಭಾಮೆಯರಸ ಗೋಪಾಲಕೃಷ್ಣಗೆ ೨

ಬತ್ತಲೆ ನಿಂತಿಹ ಬುದ್ಧನಿಗೆ
ಉತ್ತಮ ಹಯವೇರಿದ ಕಲ್ಕಿಗೆ ।
ಹತ್ತವತಾರದಿ ಭಕ್ತರ ಸಲಹುವ
ಸತ್ಯ ಶ್ರೀ ಪುರಂದರವಿಠಲನಿಗೆ ೩

## ೩೩೧

ಮಂಗಳ ಮಾರಮಣಗೆ ಮಂಗಳ ಜಯ
ಮಂಗಳ ಭೂರಮಣಗೆ ಮಂಗಳ ಪ.

ಮುಕುಟಕೆ ಮಂಗಳ ಮತ್ಸ್ಯಾವಾತಾರಗೆ
ಮುಖಕೆ ಮಂಗಳ ಮುದ್ದು ಕೂರ್ಮನಿಗೆ ॥
ಸುಕಂಠಕೆ ಮಂಗಳ ಸೂಕರರೂಪಗೆ
ನಖಕೆ ಮಂಗಳ ಮುದ್ದು ನರಸಿಂಹಗೆ ೧

ವಕ್ಷಕೆ ಮಂಗಳ ವಟವಾಮನನಿಗೆ
ಪಕ್ಷಕೆ ಮಂಗಳ ಭಾರ್ಗವಗೆ ॥
ಕಕ್ಷಕೆ ಮಂಗಳ ಕಾಕುತ್ಸ್ಥರಾಮನಿಗೆ
ಕುಕ್ಷಿಗೆ ಮಂಗಳ ಶ್ರೀಕೃಷ್ಣಗೆ ೨

ಉರುಗಳಿಗೆ ಮಂಗಳ ಉತ್ತಮ ಬುದ್ಧಗೆ
ಚರಣಕ್ಕೆ ಮಂಗಳ ಚೆಲ್ವ ಕಲ್ಕಿಗೆ ॥
ಪರಿಪರಿ ರೂಪಗೆ ಪರಮ ಮಂಗಳ
ಪುರಂದರವಿಠಲಗೆ ಶುಭಮಂಗಳ ३

## ३३೨

ಮಂಗಳಂ ಮಾರಮಣಗೆ ಮಂಗಳಂ ಪ.

ನೀರೊಳು ಮುಳುಗಿ ನಿಗಮ ತಂದವಗೆ
ಘೋರರೂಪದಿ ಕಂಬದೋಳ್ ಬಂದವಗೆ ೧

ಪೊಡವಿಯನೀರಡಿ ಮಾಡಿದ ದೇವಗೆ
ಕೊಡಲಿಯ ಕರನಾಗಿ ಜನಿಸಿದವಗೆ
ಮಡದಿ ಸಹಿತ ವನವಾಸದೊಳಿದ್ದವಗೆ
ಬಿಡದೆ ಪಾಂಡವಭೃತ್ಯನಾದವಗೆ ೨

ಭರದಲಿ ಸತಿಯರ ವ್ರತಗೆಡಿಸಿದವಗೆ
ಧುರದಲಿ ತುರಗವನೇರಿದವಗೆ
ಗಿರಿಜಾಪುರದೊಳು ವಾಸವಿದ್ದವಗೆ
ವರದ ಶ್ರೀ ಪುರಂದರವಿಠಲಗೆ ३

## ३३३

ಮಾರುತನೆ ಏಳೆಂದು ಎಬ್ಬಿಸಿದಳಂಜನೆಯು
ಶ್ರೀರಾಮ ಸೇವೆಗೆ ತಡವಾಯಿತೇಳು ಪ.

ಸೇತುಗಟ್ಟಲು ಬೇಕು ಶರಧಿ ದಾಟಲು ಬೇಕು
ಮಾತೆಗೆ ಉಂಗುರವ ಕೊಡಲು ಬೇಕು ॥
ಪಾತಕಿ ರಾವಣನ ಶಿರವನ್ನರಿಯಲು ಬೇಕು
ಸೀತೆಪತಿ ರಾಮರಿಗೆ ನಮಿಸಬೇಕು ೧

ಇಂತು ಕಳಿಯಲು ಬೇಕು ಅಜ್ಞಾತವಾಸವನು
ಪಂಥದಲಿ ಕೀಚಕರ ಒದೆಯಬೇಕು ॥
ತಂತ್ರದಲಿ ಗೆಲಬೇಕು ಶಕುನಿ ದುರ್ಯೋಧನರ
ಕುಂತಿನಂದನನೆಂದು ಹೆಸರಾಗಬೇಕು ೨

ಮಧ್ವರಾಯರು ಎಂದು ಪ್ರಸಿದ್ಧರಾಗಲು ಬೇಕು
ತಿದ್ದಿ ಹಾಕಲು ಬೇಕು ಸಕಲಗ್ರಂಥಗಳ ॥
ಅದ್ವೈತವಾದಿಗಳ ಗೆದ್ದು ಕೆಡಹಲು ಬೇಕು
ಮುದ್ದು ಪುರಂದರವಿಠಲದಾಸನೆನಿಸಲು ಬೇಕು ೩

## ೩೩೪

ರಂಗನಾಯಕಸ್ವಾಮಿ ರಾಜೀವಲೋಚನ ಬೆಳಗಾಯಿತೇಳೆನ್ನುತ
ಅಂಗನೆ ಲಕುಮಿ ತಾ ಪತಿಯನೆಬ್ಬಿಸಿದಳು
ಶೃಂಗಾರದ ನಿದ್ರೆ ಸಾಕೆನ್ನುತ ಪ.

ಪಕ್ಷಿರಾಜನು ಬಂದು ಬಾಗಿಲೊಳಗೆ ನಿಂದು
ಅಕ್ಷಿ ತೆರೆದು ಬೇಗ ಈಕ್ಷಿಸೆಂಬ ॥
ಪಕ್ಷಿಜಾತಿಗಳೆಲ್ಲ ಚಿಲಿಪಿಲಿಗುಟ್ಟುತ
ಸೂಕ್ಷ್ಮದಲಿ ನಿನ್ನನು ಸ್ಮರಿಸುವುವೊ ಕೃಷ್ಣ ೧

ಸನಕ - ಸನಂದನ - ಸನತ್ಸುಜಾತರು ಬಂದು
ವಿನಯದಿ ಕೈಮುಗಿದು ಓಲೈಪರು ॥
ಘನ ಶುಕ - ಶೌನಕ - ವ್ಯಾಸ ವಾಲ್ಮೀಕರು
ನೆನೆದು ಕೊಂಡಾಡುವರೊ ಹರಿಯೇ ೨

ಸುರರು ಕಿನ್ನರರು ಕಿಂಪುರುಷರು ಉರಗರು
ಪರಿಪರಿಯಲಿ ನಿನ್ನ ಸ್ಮರಿಸುವರು ॥
ಅರುಣನು ಬಂದುದಯಾಚಲದಲ್ಲಿ ನಿಂದ
ಕಿರಣ ತೋರುವ ಭಾಸ್ಕರನು ಶ್ರೀಹರಿಯೇ ೩

ಪದುಮನಾಭನೆ ನಿನ್ನ ನಾಮಾಮೃತವನು
ಪದುಮಾಕ್ಷಿಯರು ತಮ್ಮ ಮನೆಯೊಳಗೆ ॥
ಉದಯದೊಳೆದ್ದು ಸವಿದಾಡುತ ಪಾಡುತ
ದಧಿಯ ಕಡೆವರೇಳು ಮಧುಸೂದನ ಕೃಷ್ಣ ೪

ಮುರಮರ್ದನನೆ ನಿನ್ನ ಚರಣದ ಸೇವೆಯ
ಕರುಣಿಸಬೇಕೆಂದು ತರುಣಿಯರು ॥
ಪರಿಪರಿಯಿಂದಲಿ ಸ್ಮರಿಸಿ ಹಾರೈಪರು
ಪುರಂದರವಿಠಲ ನೀನೇಳೊ ಹರಿಯೇ ೫

### ೩೩೫

ಲಾಲಿ ತ್ರಿಭುವನ ಪಾವನ ಲಾಲಿ ಪ.

ಗೋವಳ ಕುಲದೊಳು ಪುಟ್ಟಿದಗೆ ಲಾಲಿ
ಗೋವರ್ಕಳನು ಸಲಹಿದಗೆ ಲಾಲಿ ॥
ಗೋವುಗಳನೆಲ್ಲ ಕಾಯ್ದವಗೆ ಲಾಲಿ
ಗೋವಿಂದ ಪರಮಾನಂದಗೆ ಲಾಲಿ ೧

ನಖದಲಿ ಗಂಗೆಯ ಪಡೆದಗೆ ಲಾಲಿ
ಶಕಟನ ಮುರಿದು ಒತ್ತಿದವಗೆ ಲಾಲಿ ॥
ಅಖಿಳ ವೇದಂಗಳ ತಂದಗೆ ಲಾಲಿ
ರುಕುಮಿಣಿಯರಸ ವಿಠಲನಿಗೆ ಲಾಲಿ ೨

ಗಗನವ ಮುರಿದು ಒತ್ತಿದಗೆ ಲಾಲಿ
ನಿಗಮಗಳನು ತಂದಿತ್ತಗೆ ಲಾಲಿ ॥
ಹಗೆಗಳನೆಲ್ಲರ ಗೆಲಿದಗೆ ಲಾಲಿ
ಜಗವನು ಉದರದಿ ಧರಿಸಿದಗೆ ಲಾಲಿ ೩

ಬೊಟ್ಟಿಲಿ ಬೆಟ್ಟವನೆತ್ತಿದಗೆ ಲಾಲಿ
ಮೆಟ್ಟಿಲಿ ಭೂಮಿಯನಳೆದಗೆ ಲಾಲಿ ॥

ಜಟ್ಟಿಗರನೆಲ್ಲ ಗೆಲಿದಗೆ ಲಾಲಿ
ಕಟ್ಟುಗ್ರ ಶ್ರೀ ನರಸಿಂಹಗೆ ಲಾಲಿ ೪

ಶರಧಿಗೆ ಸೇತುವೆಗಟ್ಟಿದಗೆ ಲಾಲಿ
ಸುರರ ಸೆರೆಯನು ಬಿಡಿಸಿದಗೆ ಲಾಲಿ ॥
ಕರಿಮೊರೆಯಿಡಲು ಬಂದೊದಗಿದಗೆ ಲಾಲಿ
ವರದ ಪುರಂದರವಿಠಲಗೆ ಲಾಲಿ ೫

## ೩೩೬

ಲಾಲಿ ಲಾಲಿ ನಮ್ಮ ಹರಿಯೆ ಲಾಲಿ ಸುರ
ನರರಿಗೆ ಒಲಿದು ಕರುಣವ ಬೀರುವ ದೊರೆಯೆ ಲಾಲಿ ಪ.

ರಾಮಲಾಲಿ ಮೇಘಶ್ಯಾಮ ಲಾಲಿ
ಮಾಮನೋಹರ ಅಮಿತ ಸದ್ಗುಣಧಾಮ ಲಾಲಿ ೧

ಕೃಷ್ಣ ಲಾಲಿ ಸರ್ವೋತ್ಕೃಷ್ಟ ಲಾಲಿ
ದುಷ್ಟರ ಶಿಕ್ಷಿಸಿ ಶಿಷ್ಟರ ಪೊರೆವ ಸಂತುಷ್ಟ ಲಾಲಿ ೨

ರಂಗ ಲಾಲಿ ಮಂಗಳಾಂಗ ಲಾಲಿ
ಗಂಗೆಯ ಪಡೆದ ತುಂಗ ಮಹಿಮ ನರಸಿಂಗ ಲಾಲಿ ೩

ನಂದ ಲಾಲಿ ಗೋಪಿಕಂದ ಲಾಲಿ
ಮಂದರ ಗಿರಿಧರ ಮಧುಸೂದನ ಮುಕುಂದ ಲಾಲಿ ೪

ಶೂರ ಲಾಲಿ ರಣಧೀರ ಲಾಲಿ
ಮಾರನಯ್ಯ ನಮ್ಮ ಪುರಂದರವಿಠಲ ಲಾಲಿ ೫

## ೩೩೭

ವಾಯುಕುಮಾರಗೆ ಮಂಗಳ – ರಘು – ।
ರಾಯಸೇವಕಗೆ ಮಂಗಳ ಪ.

ಅಂಜನಿಗರ್ಭಸಂಜಾತಗೆ ಮಂಗಳ ।
ರಂಜಿತ ದಿವ್ಯ ಮೂರ್ತಿಗೆ ಮಂಗಳ ॥
ಮಂಜುಳ ಕೀರ್ತಿ ಮಾಹಾತ್ಮ್ಯಗೆ ಮಂಗಳ ।
ಸಂಜೀವರಾಯಗೆ ಮಂಗಳ ೧

ದನುಜನಿಕರ ಸಂಹಾರಗೆ ಮಂಗಳ ।
ಜಾನಕಿ ಶೋಕ ವಿನಾಶಗೆ ಮಂಗಳ ॥
ವನಧಿ ನಿರೋಧಿಗೆ ಮಂಗಳ ಜಯ ।
ಹನುಮವಿಲಾಸಗೆ ಮಂಗಳ ೨

ಸೇತುವೆಗಟ್ಟಿದಾತಗೆ ಮಂಗಳ ।
ಸೀತೆಯ ತಂದ ಬಂಟಗೆ ಮಂಗಳ ॥
ಖ್ಯಾತ ಪುರಂದರವಿಠಲನ ಕರುಣೆಗೆ ।
ಪಾತ್ರನಾದ ಭಕುತಗೆ ಮಂಗಳ ೩

## ೩೩೮

ಶೋಭನ ಶೋಭನವೆ ನಮ್ಮ
ಶ್ರೀಭೂದೇವಿಯರ ಅರಸು ವೆಂಕಟಗೆ ಪ.

ಅಂದು ಕ್ಷೀರಾಂಬುಧಿಯನ್ನು ಮಥಿಸಲಾಗ
ಇಂದಿರೆ ಹರುಷದಿಂದುದಿಸಿ ಬಂದು ॥
ಮಂದಾರ ಮಾಲೆಯ ಹಾಕಿದ ದೇವಗೆ
ಕಂದರ್ಪಕೋಟಿಲಾವಣ್ಯ ಮೂರುತಿಗೆ ೧

ಜನಕನ ಮನೆಯಲ್ಲಿ ರಾಜಾಧಿರಾಜರು
ಎಣಿಕೆಯಿಲ್ಲದೆ ಬಂದಿರಲಾಗಿ ॥
ಸನಕಾದಿವಂದ್ಯನ ಕಂಡು ಸಂತೋಷದಿ
ಜನಕಜೆ ಮಾಲೆಯ ಹಾಕಿದ ರಾಮಗೆ ೨

ರುಕುಮನು ಶಿಶುಪಾಲಗೀವೆನೆಂಬ ಮಾತಿಗೆ
ಸಕಲ ರಾಯರು ಬಂದಿರಲಾಗಿ ॥

ಭಕುತವತ್ಸಲನ ಕಂಡು ಸಂತೋಷದಿ
ರುಕುಮಿಣಿ ಮಾಲೆಯ ಹಾಕಿದ ಕೃಷ್ಣಗೆ ೩

ಸತ್ಯಭಾಮೆ ನೀಳಾ ಭದ್ರಾ ಕಾಳಿಂದಿಯು
ಮಿತ್ರವಿಂದಾ ಲಕ್ಷಣಾ ಜಾಂಬವತಿ ॥
ಮತ್ತೆ ಸೋಳಸಾಸಿರ ಗೋಪಿಕೆಯರ
ಪ್ರತ್ಯಕ್ಷವಾಳಿದ ಕಲ್ಯಾಣಗೆ ೪

ಪದ್ಮದೇಶದಲೊಬ್ಬ ದೇವಾಂಗನೆಯು
ಪದ್ಮಮುಖಿಯು ಶ್ರುತಕೀರ್ತಿಯಾಗಿ ॥
ಪದ್ಮನಾಭ ಶ್ರೀ ಪುರಂದರವಿಠಲಗೆ
ಪದ್ಮಾವತೀಪ್ರಿಯ ಶ್ರೀನಿವಾಸಗೆ ೫

## ३३೯

ಶೋಭನವೆ ಹರಿ ಶೋಭನವೆ ಪ.

ಶೋಭನವೆನ್ನಿರಿ ಶುಭಕರದಿಂದಲಿ
ಶೋಭನ ಶ್ರೀಲೋಲ ಗೋಪಾಲನೆನ್ನಿರಿ ಅ.ಪ

ಪಾಲಗಡಲು ಮನೆಯಾಗಿರಲು
ಆಲದೆಲೆಯ ಮೇಲೆ ಮಲಗುವರೆ ॥
ಮೂಲೋಕವೇ ನಿನ್ನುದರದೊಳಿರಲು
ಬಾಲಕನಾಗಿ ಎತ್ತಿಸಿಕೊಂಬುವರೆ ೧

ಸಿರಿ ನಿನ್ನ ಕೈವಶವಾಗಿರಲು
ತಿರುಮಲ ಮಲೆಯನು ಸೇರುವರೆ ॥
ಸರಸಿಜಭವ – ಭವ ನಿನ್ನ ಪೂಜಿಸಲು
ನರನ ಬಂಡಿಯ ಬೋವನೆನಿಸುವರೆ ೨

ಕಮ್ಮಗೋಲನ ಪಿತನಾಗಿರಲು
ಗಮ್ಮನೆ ಕುಬುಜೆಗೆ ಸೋಲುವರೆ ॥
ಬ್ರಹ್ಮ ಪರಬ್ರಹ್ಮ ಚರಣಕೆ ಶರಣು
ಹಮ್ಮಿನ ದೈವ ಶ್ರೀ ಪುರಂದರವಿಠಲ ೩

## ವಿಶೇಷ

## ೩೪೦

ಆರು ಬಿಟ್ಟರೂ ನಿನ್ನ ಬಿಡದೆ ನಾ ನಂಬಿದೆ
ರಾಮರಾಮ – ಸ್ವಾಮಿ ।
ನೀ ಬಿಟ್ಟರಿನ್ನು ಅದಾರ ಸೇರಲು ಬೇಕೊ –
ರಾಮರಾಮ ಪ.

ತುಂಬಿದ ನದಿಯಲಿ ಹರಿಗೋಲು ಮುಳುಗಿತೊ
ರಾಮ ರಾಮ – ಅಲ್ಲಿ
ಅಂಬಿಗನಾಶೆಯು ಅನುಗಾಲ ತಪ್ಪಿತೊ –
ರಾಮ ರಾಮ ೧

ನಂಬಿ ಹಿಡಿದರೆ ಬಲು ಕೊಂಬೆಯು ಮುರಿಯಿತೊ –
ರಾಮ ರಾಮ – ಅಲ್ಲಿ
ಹಂಬಲಿಸಿದರೆ ಕೈ ಹಿಡಿವರ ನಾ ಕಾಣೆ ರಾಮ ರಾಮ ೨

ಹಿಂದೆ ನೋಡಲು ಹೆಬ್ಬಾವಟ್ಟಿ ಬರುತಿದೆ –
ರಾಮರಾಮ – ಇಲ್ಲಿ
ಮುಂದೆ ನೋಡಲು ಹೆಬ್ಬುಲಿ ಬಾಯ ತೆರೆದಿದೆ –
ರಾಮ ರಾಮ ೩

ಇದಕಂಜಿ ಕಡಲ ಮಡುವ ಪೊಕ್ಕೆನೊ ಸ್ವಾಮಿ –
ರಾಮ ರಾಮ – ಅಲ್ಲಿ
ಅದುಭುತವಾದಂಥ ಆನೆಗಳು ನುಂಗುತಲಿವೆ –
ರಾಮ ರಾಮ ೪

ಶಿಶುವುತನದಲಿ ಪಶುವ ನೀ ಕಾಯ್ದೆಯೊ - ರಾಮ ರಾಮ
ಅಸಮದಾಕಾರ ಶ್ರೀ ಪುರಂದರವಿಠಲ - ರಾಮ ರಾಮ ೫

## ३४१

ಇದೀಗ ಭಕುತಿಯು ಮ -
ತ್ತಿದೀಗ ಮುಕುತಿಯು ಪ.

ಮಧುದ್ವಿಷನ ಪದಕಮಲಕೆ
ಮಧುಪನಂತೆ ಎರಗುತಿಹುದು ಅ.ಪ

ಶ್ರೀಕಾಂತಮೂರುತಿ ಬಾಹ್ಯಾಂತರದಿ
ಏಕಾಂತದಿ ನೆನೆದಾನಂದ ತುಳುಕಾಡಿ ॥
ಮುಖ ವಿಕಾಸದಿ ತನುವ ಮರೆದು
ವಿಕಳ ಭಾವದಿ ಉಬ್ಬುಬ್ಬಿ ಕುಣಿವುದು ೧

ಡಂಭವ ಸಾರುವರತ್ತತ್ತ ಜಡಿದು
ಕುಂಭಕ ರೇಚಕ ಪೂರಕವಿಡಿದು ॥
ಅಂಬುಧಿಶಾಯಿ ಪದಾಂಬುಜ ವೀಕ್ಷಿಸಿ
ಬಿಂಬವ ಕಾಂಬುವ ಹಂಬಲವಿಡಿವುದು ೨

ಕಂಡವರ ಕಾಲಿಗೆ ಕುಮನುಜರಿಗೆ
ಮಂಡೆಯ ಬಾಗದೆ ಪರೇಶ ಕೊಟ್ಟಷ್ಟು ॥
ಉಂಡು ಸಜ್ಜನರ ಕಂಡು ಸುಖಿಸಿ ಪಾ
ಷಂಡ ಸಂಭಾಷಣೆ ಸೋಕದೆ ಬಾಳ್ವುದು ೩

ತಪುತರ - ಕಂಬುಲಾಂಛನ ಪಿಡಿದು
ಗುಪಿತ ಮಂತ್ರಗಳೊರೆವ ಗುರುಗ -
ಳುಪದೇಶ ಕ್ರಮವ ಮೀರದೆ ಇತರ
ಕಪಟ ಬಿಟ್ಟು ನಲಿದು ಸುಖಿಪುದು ೪

ಸದ್ಭಕ್ತಿ ಸದ್ಧರ್ಮ ಮಾಡುತ ನೋಡುತ
ಸದ್ವಿಷ್ಣು ಸಚ್ಛಾಸ್ತ್ರ ಹೇಳುತ ಕೇಳುತ ॥
ದುಗ್ಧ ಸಮುದ್ರೇಶ ಪುರಂದರವಿಠಲಗೆ
ಇದ್ದ ಸಂಪದವ ತಪ್ಪದೆ ಒಪ್ಪಿಸುವುದು ೫

## ೩೪೨

ಇದು ಏನಂಗ ಮೋಹನಾಂಗ ।
ಮದನಜನಕ ತೋರವೆಯ ನರಸಿಂಗ ಪ.

ಸುರರು ತುತಿಸಿ ಕರೆಯೆ ತುಟಿಯ ಮಿಸುಕದವ
ತೆರೆದೆ ಏತಕೆ ಬಾಯ ತೆರನ ಪೇಳೊಮ್ಮೆ ೧

ವರನೀಲರತುನಮಾಣಿಕದ ಹಾರಗಳಿರೆ ।
ಕೊರಳೊಳು ಕರುಳಮಾಲೆಯನಿಟ್ಟು ಮೆರೆವುದು ೨

ಸಿರಿಮುದ್ದು ನರಸಿಂಹ ಪುರಂದರವಿಠಲ ।
ಸಿರಿಯಿಪ್ಪ ತೊಡೆಯಲಿ ಅರಿಯ ತಂದಿಡುವುದು ೩

## ೩೪೩

ಜಯಜಯ ಶ್ರೀರಾಮ ನಮೋ ।
ಜಯ ಜಯ ಶ್ರೀಕೃಷ್ಣ ನಮೋ ಪ.

ಸಿರಿಯರಸನು ಶೃಂಗಾರವ ಮಾಡಿ ।
ಸಿರಿಗಂಧವನೆ ಹಣೆಗಿಟ್ಟು ॥
ತರುಣ ತುಳಸಿ ವನಮಾಲೆಯ ಧರಿಸಿ ।
ಹರಿ ತುರುಕಾಯಲು ಹೊರಗೆ ಹೊರಟನು ೧

ಹೊತ್ತು ಹೋಯಿತು ತುರು ಬಿಡಿಯೆನ್ನುತ ।
ಸಾತ್ತ್ವತ ನುಡಿದನು ಗೋಪಿಯೊಡನೆ ॥
ತುತ್ತುರು ತುತ್ತುರು ತುರುತುರುಯೆನ್ನುತ ।
ಒತ್ತಿ ಸ್ವರಗಳನು ಪೊಂಗೊಳಲೂದುತ ೨

ವನಿತೆ ಸಟ್ಟುಗದೊಳು ಅಕ್ಕಿಯ ತೊಳಸಿ ।
ಒನಕೆಯಿಂದ ಓಗರ ಹದನೋಡಿ ॥
ಮಿನುಗುವ ಸೀರೆಯ ತಲೆಗೆ ಸುತ್ತಿಕೊಂಡು ।
ವನಕೆ ಹೋಗಲೆಂದು ಹೊರಗೆ ಹೊರಟಳು ೩

ಹರಿಸ್ವರವೆನ್ನುತ ಒಬ್ಬಳು ಕೇಳಿ
ನೆರೆಮನೆಗೆ ಹೋಗಿ ಕಡ ಕೇಳಿದಳು ॥
ಒರಳು ಕೊಡುವಿರಾ ಅರಸಿನ ಅರೆದು ।
ಮರಳಿ ಬೇಗ ತಂದೀವೆನೆನುತಲಿ ೪

ಹಸುವಿಗೆ ಇಟ್ಟಳು ಹಾಲು ಓಗರ ।
ಬಿಸಿಮಡ್ಡಿಯ ಗಂಡಗೆ ಚಾಚಿ ॥
ಸೊಸೆಯನು ಅಟ್ಟಿಸಿ ತೊತ್ತನು ಪಾಲಿಸಿ
ಮೊಸರ ಕಾಸಿ ಹೆಪ್ಪ ಹಾಕಿದೊಳೊಬ್ಬಳು ೫

ಗಿಳಿಗೆ ಹಾಸಿದಳು ಹಾಸು ಮಂಚವನು ।
ಅಳಿಯನ ಪಂಜರದೊಳಗಿರಿಸಿ ॥
ತಳಿಗೆಯಲ್ಲಿ ತಮ್ಮನ ಮಲಗಿಸಿ ತೊಟ್ಟಿ – ।
ಲೊಳಗೆ ಎಡೆಯನು ಮಾಡಿದಳೊಬ್ಬಳು ೬

ಅಟ್ಟವೆಂದು ಹತ್ತಿ ಅಗಳಿಯ ಮೇಲೇ
ಇಟ್ಟಳು ಸಾದೆಂದು ಸಗಣಿಯನು ॥
ಕಟ್ಟಬಾಯಿಗೆ ಕಾಡಿಗೆ ಹಚ್ಚಿ ।
ಕೃಷ್ಣನ ಸ್ಮರಿಸುತ ಹೊರಗೆ ಹೊರಟಳು ೭

ಅಂಗನೆ ಚೌರಿಯು ಕಾಲಿಗೆ ತಗುಲಿಸಿ ।
ಮುಂಗೈಯಲಿ ತಾಳಿಯ ಬಿಗಿದು ॥
ಸಿಂಗರ ಸರವನು ನಡುವಿಗೆ ಕಟ್ಟಿ ।
ರಂಗನ ಸ್ಮರಿಸುತ ಹೊರಟಳೊಬ್ಬಳು ೮

ಕಟ್ಟಿ ಮುತ್ತಿನೋಲೆ ಮೊಣಕಾಲ್ಗಳಿಗೆ ।
ಗಟ್ಟಿ ಕಂಕಣವ ಕಿವಿಗಿಟ್ಟು ॥

ತೊಟ್ಟಿಲೊಳಗೆ ಶಿಶು ಅಳುವುದ ಕಂಡು ।
ಕಟ್ಟಿದ ನೆಲುವನು ತೂಗಿದಳೊಬ್ಬಳು ೯

ತರುಣಿಯೊಬ್ಬ ಸಂನ್ಯಾಸಿಯ ಕಂಡು ।
ನೆರೆಮನೆ ಕೂಸೆಂದೆತ್ತ ಬರಲು ॥
ಅರಿದಾವ ಗಾಳಿ ಸೋಕಿತೆನುತಲಿ ।
ಪುರಂದರವಿಠಲನು ನಗುತಿದ್ದನು ಸಖಿ ೧೦

## ೩೪೪

ಜಲದನೀಲಗಾತ್ರ ಏತರ ಚೆಲುವ ರುಕ್ಮಿಣಿ ।
ಬಿಳಿಯ ಜಡೆಯ ಮೈಯ ಜೋಗಿಗೊಲಿದ ಪಾರ್ವತಿ ಪ.

ಉದಕದೊಳಗೆ ವಾಸವೇಕೆ ಸದನವಿಲ್ಲವೆ ।
ಸುದತಿ ಸುಡುವ ಕಾಡಿಗಿಂತ ಲೇಸು ಅಲ್ಲವೆ ೧

ಶೃಂಗಿಯ ಬೆನ್ನಿಲೆತ್ತಿದವನ ಸೊಗಸು ನೋಡಿದೆ ।
ಗಂಗೆಯ ಶಿರದಿ ಪೊತ್ತವನ ಗರುವ ಕೇಳಿದೆ ೨

ವಸುಧೆ ನೆಗಹಿ ಬೇರ ಮೆಲುವ ಅಶನವಿಲ್ಲವೆ ।
ಹಸಿದು ವಿಷವ ಕುಡಿದ ಎಂತು ಸ್ವಾದವಲ್ಲವೆ ೩

ಕರುಳ ಕೊರಳ ಸರವು ಏಕೆ ಸರವು ದೊರಕದೆ ।
ಕೊರಳ ರುಂಡಮಾಲೆ ಏಕೆ ಕಾಂಚನವಿಲ್ಲದೆ ೪

ಧರಣಿ ಮೂರಡಿ ಬೇಡಲಿಕ್ಕೆ ದೊರೆಯು ಅಲ್ಲವೆ
ನರಕಪಾಲ ಪಿಡಿವ ಜಗದ ಕರ್ತೃವಲ್ಲವೆ ೫

ಮಾತೆಶಿರವ ಅಳಿದವನ ಮಾತ ಕೇಳಿದೆಯಾ !
ತಾತನಾಚಿ ಸುತನ ಕೊಂದು ನೀತಿ ನೋಡಿದೆಯಾ ೬

ಕೋತಿಗಳನು ಕೂಡಲಿಕ್ಕೆ ಜಾತಿ ತನ್ನದೆ ।
ಭೂತಗಣಗಳಾಳುವುದಕೆ ಭೀತಿ ಇಲ್ಲವೆ ೭

ಹತ್ತಿರಿದ್ದ ವಾಜಿಬಿಟ್ಟು ಹದ್ದನೇರ್ವರೆ ।
ಎತ್ತಿನ ಬೆನ್ನನೇರಿದವರು ಉತ್ತಮರಾಹರೆ ೮

ಸುತ್ತಲಿದ್ದಬಾಲೆಯರೊಳು ಬತ್ತಲಿರುವರೆ ।
............... ಶಾಪ ಹತ್ತಲಿಲ್ಲವೆ ೯

ಹರಿಹರರೊಳು ಭೇದವೇನು ಹೇಳೆ ರುಕ್ಮಿಣಿ
ಪುರಂದರವಿಠಲ ತಾನೆ ಬಲ್ಲ ಕೇಳೆ ಪಾರ್ವತಿ ೧೦

## ३४೫

ದಾನವನ ಕೊಂದದ್ದಲ್ಲ ಕಾಣಿರೊ ।
ನಾನಾ ವಿನೋದಿ ನಮ್ಮ ತೊರವೆಯ ನರಸಿಂಹ ಪ.

ಅಚ್ಚ ಪ್ರಹ್ಲಾದನೆಂಬ ರತ್ನವಿದ್ದ ಒಡಲೊಳು ।
ಬಿಚ್ಚಿ ಬಗಿದು ನೋಡಿದನಿನ್ನೆಷ್ಟು ಇದ್ದಾವೆಂದು ೧

ನಂಟುತನ ಬೆಳೆಯಬೇಕೆಂದು ಕರುಳ ಕೊರಳೊಳು ।
ಗಂಟುಹಾಕಿಕೊಂಡನೆಷ್ಟು ಸ್ನೇಹಸಂಬಂಧದಿಂದ ೨

ಸಿರಿಮುದ್ದು ನರಸಿಂಹ ಪ್ರಹ್ಲಾದಪಾಲಕ ।
ಉರಿಮೋರೆ ದೈವ ನಮ್ಮ ಪುರಂದರ ವಿಠಲ ೩

## ३४೬

ಧ್ವಜದ ತಿಮ್ಮಪ್ಪ ಪಲ್ಲಕಿಯೇರಿ ತನ್ನಯ ।
ನಿಜಗಿರಿಯಾತ್ರೆಗೈದಿದ ಹರುಷವ ಕೇಳಿ ಪ.

ಬಲದಲಬುಜಭವ ಭವಾದಿಗಳೆಡದಲಿ ।
ಉಲಿವ ವೇದ – ಉಪನಿಷದುಗಳು ॥
ಸಲುಗೆಯಲಿ ಸನಕಾದಿಗಳು ಸೇವಿಸೆ ಮುನ್ನ ।
ಹಲವು ಋಷಿ – ಮುನಿನಿಕರ ಹಿಂದೆ ಬರುತಿರಲು ೧

ಛತ್ರವ ಶಚಿ ಚಾಮರವ ಢಾಳಿಸೆ ಇಂದ್ರ ।
ಚಿತ್ತಜಾತನು ವ್ಯಜನವ ಬೀಸಲು ॥
ಹೊತ್ತು ಮಾರುತಿ ಹಡಪ ಹೊಳೆವೆಲೆಗಳ ಕೊಡಲು ।
ಹಸ್ತದ ಕಾಳಂಜಿ ಹರಿಣಾಂಕನು ಬರೆ ೨

ವರುಣನು ಸ್ವಾದುಜಲವ ಪಿಡಿದು ಬರೆ ।
ತರಣಿ ತನಗೆ ಆಧಾರದಂತಿರಲು ॥
ಸುರರು ಸುಮನಗಳಿಂದ ಸರ್ವರು ತಮತಮ್ಮ ।
ಪರಿಪರಿ ಆಯುಧಗೊಂಡು ಬಳಸಿಬರೆ ೩

ಮಂದರ ಮಧ್ಯಮ ತಾರಕ ಮೋಹನ ।
ದಿಂದ ಗಂಧರ್ವರು ಗಾನಮಾಡೆ ॥
ತೋಂಧಿಮಿಧಿಮಿಕೆಂದು ತಾಳಮೇಳದಿ ನಾ – ।
ರಂದ ಪಾಡಲು ಆಡುತಾಡುತ ಬರುತಿರೆ ೪

ಲೋಕನಾಯಕ ಲೋಕೈಕ ರಕ್ಷಾಮಣಿ ।
ಸಾಕಾರರೂಪ ಸದ್ಗುಣಭರಿತ ॥
ವೆಂಕಟೇಶ ವ್ಯಾಸಮುನಿವರದನಾದ ಕರು – ।
ಣಾಕರ ಪುರಂದರವಿಠಲನು ಗರುಡ ೫

## ೩೪೭

ಮರವನು ನುಂಗುವ ಪಕ್ಷಿ ಮನೆಯೊಳಗೆ ಬಂದಿದೆ ಪ.

ಒಂಟಿ ಕೊಂಬಿನ ಪಕ್ಷಿ ಒಳಗೆ ಕರುಳಿಲ್ಲ
ಗಂಟಲು ಮೂರುಂಟು ಮೂಗು ಇಲ್ಲ
ಕುಂಟು ಮನುಜನಂತೆ ಕುಳಿತಿಹುದು ಮನೆಯೊಳಗೆ
ಎಂಟು ಹತ್ತರ ಭಕ್ಷ ಭಕ್ಷಿಸುವುದು ೧

ನಡುವೆ ತಲೆಯೆಂಬುವದು ನಡು ನೆತ್ತಿಯಲಿ ಬಾಯಿ
ಕಡು ಸ್ವರಗಳಿಂದ ಗಾನ ಮಾಡ್ವದು

ಅಡವಿಯಲಿ ಹುಟ್ಟುವುದು ಅಂಗವೆರಡಾಗುವುದು
ಬಡತನ ಬಂದರೆ ಬಹಳ ರಕ್ಷಿಪುದು ೨

ಕಂಜವದನೆಯರ ಕರದಲ್ಲಿ ನಲಿದಾಡುವುದು
ಎಂಜಲನುಣಿಸುವುದು ಮೂರ್ಜಗಕೆ
ರಂಜಿಪ ಶಿಖಾಮಣಿ ಸಿಂಹಾಸನದ ಮೇಲಿಪ್ಪ
ಸಂಜೀವ ಪಿತ ಪುರಂದರವಿಠಲನೇ ಬಲ್ಲ * ೩

## ೩೪೮

ಮಹಾದಾದಿದೇವ ನಮೋ ಮಹಾಮಹಿಮನೆ ನಮೋ
ಪ್ರಹಲ್ಲಾದವರದ ಅಹೋಬಲ ನರಸಿಂಹ ಪ.

ತರಣಿಗುಬ್ಬಸವಾಗೆ ತಾರಾಪತಿಯು ನಡುಗೆ
ಸುರರು ಕಂಗೆಟ್ಟೋಡೆ ನಭವ ಬಿಟ್ಟು ॥
ತರುಗಿರಿಗಳಲ್ಲಾಡೆ ಶರಧಿಗಳು ಕುದಿದುಕ್ಕೆ
ಉರಿಯನುಗುಳುತ ಉದ್ಭವಿಸಿದೆಯೊ ನರಸಿಂಹ ೧

ಸಿಡಿಲಂತೆ ಗರ್ಜಿಸುತೆ ಕುಡಿಯ ನಾಲಗೆ ಚಾಚಿ
ಅಡಿಗಡಿಗೆ ಹುಂಕರಿಸಿ ಕಡುಕೋಪದಿಂದ ॥
ಮುಡಿವಿಡಿದು ರಕ್ಕಸನ ಕೆಡವಿ ನಖದಿಂದೊತ್ತಿ
ಬಿಡದೊಡಲ ಬಗೆದ ಕಡುಗಲಿ ನಾರಸಿಂಹ ೨

ಸರಸಿಜೋದ್ಭವ ಹರ ಪುರಂದರಾದಿ ಸಮಸ್ತ
ಸುರರು ಅಂಬರದಿ ಪೂಮಳೆಗರೆಯಲು
ಸಿರಿಸಹಿತ ಗರುಡಾದ್ರಿಯಲಿ ನಿಂತು ಭಕುತರನು
ಕರುಣಿಸುವ ಪುರಂದರವಿಠಲ ನಾರಸಿಂಹ ೩

---

* ಈ ಕೀರ್ತನೆಯು ಕನಕದಾಸರ ಅಂಕಿತದಲ್ಲಿಯೂ ದೊರೆಯುತ್ತದೆ.

## ೩೪೯

ಯಮ ತನ್ನ ಪುರದಿ ಸಾರಿದನು ನಮ್ಮ
ಕಮಲನಾಭನ ದಾಸರ ಮುಟ್ಟದಿರಿ ಎಂದು ಪ.

ಭುಜದಲೊಪ್ಪುವ ಶಂಖ ಚಕ್ರ ಮುದ್ರಾಂಕಿತ
ನಿಜ ದ್ವಾದಶನಾಮ ಧರಿಸಿಪ್ಪರ ॥
ತ್ರಿಜಗವಂದಿತಳಾದ ತುಳಸೀ ಮಾಲಿಕೆಯುಳ್ಳ
ಸುಜನರ ಕೆಣಕದೆ ಸುಮ್ಮನೆ ಬನ್ನಿರೊ ಎಂದು ೧

ತಾಳದಂಡಿಗೆ ಗೀತವಾದ್ಯ ಸಮ್ಮೇಳದಿ
ಊಳಿಗವನು ಮಾಳ್ಪ ಹರಿದಾಸರ ॥
ಕೇಳಿದೊಡನೆ ಕರವೆತ್ತಿ ಮುಗಿದು ಯಮ
ನಾಳುಗಳೆಂದು ಹೇಳದೆ ಬನ್ನಿರೊ ಎಂದು ೨

ಹೆಮ್ಮೆಯ ಸಿಡಿಯೇರಿ ಬೇವಿನುಡುಗೆಯುಟ್ಟು
ಚಿಮ್ಮುತ ಚೀರುತ ಬೊಬ್ಬೆಯಿಟ್ಟು
ಕರ್ಮಕೆ ಗುರಿಯಾಗಿ ಪ್ರಾಣಹಿಂಸೆಯ ಮಾಳ್ಪ
ಬ್ರಹ್ಮೇತಿಕಾರನೆಳತನ್ನಿರೋ ಎಂದು ೩

ಮಾತಾಪಿತರ ದುರ್ಮತಿಯಿಂದ ಬೈವರ
ಪಾತಕಿಗಳ ಪರದ್ರೋಹಿಗಳ
ನೀತಿಯಿಲ್ಲದೆ ವಿಮೋಹಿಸಿದವರ ಬಾಯೊಳು
ಒತ್ತಿ ಸೀಸವ ಕಾಸಿ ಹೊಯ್ದು ಕೊಲ್ಲಿರಿ ಎಂದು ೪

ನರರ ಹಾಡಿ ಪಾಡಿ ನರರ ಕೊಂಡಾಡುವ
ನರಕಿಗಳ ಕೀಳುನಾಯ್ಗಳ ಮನ್ನಿಸುವ
ದುರುಳ ಜ್ಞಾನಿಜನರನೆಳೆತಂದು ಬಾಯೊಳು
ಅರಗನೆ ಕಾಯಿಸಿ ಹೊಯ್ದು ಕೊಲ್ಲಿರಿ ಎಂದು ೫

ಕೇಶವ ಹರಿ ಎಂಬ ದಾಸರ ಹೃದಯದಿ
ವಾಸವಾಗಿಹ ಸಿರಿ ತಿರುಮಲೇಶ

ದಾಸರ ದಾಸರ ದಾಸನೆನಿಪ ಹರಿ
ದಾಸರನ್ನು ಕೆಣಕದೆ ಬನ್ನಿರೋ ಎಂದು ೬

ಅನ್ಯಮಂತ್ರವ ಬಿಟ್ಟು ದೈವಮಂತ್ರವ ಭಜಿಸಿ
ಪನ್ನಗಶಯನನೆ ಗತಿಯೆನ್ನುತ
ತನ್ನ ಭಕ್ತರ ಕಾಯ್ವ ಪುರಂದರವಿಠಲನ
ಉನ್ನತದಲಿ ನಮಸ್ಕರಿಸಿ ಬನ್ನಿರೊ ಎಂದು ೭

## ೩೫೦

ಲಟಪಟ ನಾ ಸಟೆಯಾಡುವನಲ್ಲ ।
ವಿಠಲನ ನಾಮ ಮರೆತುಪೋದೆನಲ್ಲ ಪ.

ಶೇಷಗಿರಿಯ ಮೇಲೆ ಸವುತೆಯ ಬಿತ್ತಿ ।
ದೇವಗಿರಿಯ ಮೇಲೆ ಅವತಾರವಿಕ್ಕಿ ॥
ಹಾಳೂರಿಗೊಬ್ಬ ಕುಂಬಾರ ಸತ್ತ ।
ಗೋಕರ್ಣದೊಳಗೊಬ್ಬ ಪರದೇಶಿ ಅತ್ತ ೧

ನಾ ಸಮಯದಿ ಮೂರು ರಾಯರ ಕಂಡೆ
ಕುಪ್ಪುಸ ತೊಟ್ಟ ಕೋಳಿಯ ಕಂಡೆ ॥
ಬೆಳ್ಳಕ್ಕಿ ಬೆರಣಿಯ ಮಾಳ್ಪುದ ಕಂಡೆ ।
ನರಸೂಳೆಗೆಯ್ವುದ ಕಣ್ಣಾರೆ ಕಂಡೆ ೨

ನುಸಿಯೊಂದು ರೊಟ್ಟಿಯ ಸುಡುವುದ ಕಂಡೆ
ಆಡೊಂದು ಮದ್ದಳೆ ಬಡಿವುದ ಕಂಡೆ ॥
ಕಪ್ಪೆ ತತ್ಥೈಯೆಂದು ಕುಣಿವುದ ಕಂಡೆ ।
ಪುರಂದರವಿಠಲನ ಕಣ್ಣಾರೆ ಕಂಡೆ* ೩

## ೩೫೧

ಶರಣು ಶರಣು ಶರಣ್ಯವಂದಿತ ಶಂಖಚಕ್ರಗದಾಧರ ।
ಶರಣು ಸರ್ವೇಶ್ವರ ಅಹೋಬಲ ಶರಣು ಸಲಹೋ ನರಹರಿ ಪ.

* ಈ ಕೀರ್ತನೆ ಕನಕದಾಸರ ಅಂಕಿತದಲ್ಲೂ ದೊರೆಯುತ್ತದೆ.

ಶೀಲದಲಿ ಶಿಶು ನಿನ್ನ ನೆನೆಯಲು
ಕಾಲಲೊತ್ತುತ ಖಳರನು ।
ಲೀಲೆಯಿಂದಲಿ ಚಿಟಿಲು ಭುಗಿಭುಗಿ –
ಲೆನುತ ಉಕ್ಕಿನ ಕಂಬದಿ ॥
ಖೂಳದೈತ್ಯನ ತೋಳಿನಿಂದಲಿ ಸೀಳಿ
ಹೊಟ್ಟೆಯ ಕರುಳನು ॥
ಮಾಲೆಯನು ಕೊರಳೊಳಗೆ ಧರಿಸಿದ
ಜ್ವಾಲನರಸಿಂಹಮೂರ್ತಿಗೆ ೧

ಖಳಖಳಾ ಖಳನೆಂದು ಕೂಗಲು ಕೋಟಿ ಸಿಡಿಲಿನ ರಭಸದಿ ॥
ಜಲಧಿ ಗುಳಗುಳನೆದ್ದು ಉಕ್ಕಲು ಜ್ವಲಿತ ಕುಲಗಿರಿ ಉರುಳಲು ॥
ನೆಲನು ಬಳಬಳನೆಂದು ಬಿರಿಯಲು ಕೆಳಗೆ ದಿಗ್ಗಜ ನಡುಗಲು ॥
ಥಳ ಥಳಾ ಥಳ ಹೊಳೆವ ಮಿಂಚಿನೊಲ್
ಹೊಳೆವ ನರಸಿಂಹ ಮೂರ್ತಿಗೆ ೨

ಕೋರೆ ಕೆಂಜೆಡೆ ಕಣ್ಣು ಕಿವಿ ತೆರೆ –ಬಾಯಿ ಮೂಗಿನ ಶ್ವಾಸದಿ॥
ಮೇರುಗಿರಿ ಮಿಗಿಮಿಗಿಲು ಮಿಕ್ಕುವ ತೋರ ಕಿಡಿಗಳ ಸೂಸುತ ॥
ಸಾರಿಸಾರಿಗೆ ಹೃದಯರಕುತವ ಸೂರೆ ಸುರಿಸುರಿದೆರಗುತ
ಘೋರ ರೂಪಗಳಿಂದ ಮೆರೆಯುವ ಧೀರ ನರಹರಿಮೂರ್ತಿಗೆ ೩

ಹರನು ವಾರಿಜಭವನು ಕರಗಳ ಮುಗಿದು ಜಯಜಯವೆನುತಿರೆ ॥
ತರಳ ಪ್ರಹ್ಲಾದನಿಗೆ ತಮ್ಮಯ ಶರೀರಬಾಧೆಯ ಪೇಳಲು ॥
ಕರುಣಿ ಎನ್ನನು ಕರುಣಿಸೆನ್ನಲು ತ್ವರದಲಭಯವನೀಡುತ ॥
ಸಿರಿ ಬರಲು ತೊಡೆಯಲ್ಲಿ ಧರಿಸಿದ ಶಾಂತ ನರಹರಿಮೂರ್ತಿಗೆ ೪

ವರವ ಬೇಡಿ ದನಿರುವ ತಂದೆಯ ಪರಿಯನೆಲ್ಲವ ಬಣ್ಣಿಸಿ ॥
ನಿರುತದಲಿ ನಿನ್ನೆರಡು ತೊಡೆಯಲಿ ಶರೀರವಿರಲೆಂದೆನುತಲಿ ॥
ಸುರರು ಪುಷ್ಪದ ವೃಷ್ಟಿಗರೆಯಲು ಸರಸಿಜಾಕ್ಷನು ಶಾಂತದಿ ॥
ಸಿರಿಯ ಸುಖವನು ಮರೆದಹೋಬಲ
ವರದ ಪುರಂದರವಿಠಲಗೆ ೫

## ೩೫೨

ಹರಿದಿನದಲಿ ಉಂಡ ನರರಿಗೆ – ಘೋರ ।
ನರಕ ತಪ್ಪದು ಎಂದು ಶ್ರುತಿ ಸಾರುತಲಿದೆ ಪ.

ಗೋವ ಕೊಂದ ಪಾಪ, ಸಾವಿರ ವಿಪ್ರರ ।
ಜೀವಹತ್ಯವ ಮಾಡಿದ ಪಾಪವು ॥
ಭಾವಜನಯ್ಯನ ದಿನದಲುಂಡವರಿಗೆ ।
ಕೀವಿನೊಳಗೆ ಹಾಕಿ ಕುದಿಸುವ ಯಮನು ೧

ಒಂದೊಂದು ಅಗುಳಿಗೆ ಕೋಟಿ ಕೋಟಿ ಕ್ರಿಮಿಗಳು ।
ಅಂದಿನ ಅನ್ನವು ನಾಯಮಾಂಸ ॥
ಮಂದರಧರನ ದಿನದಲುಂಡವರನು ।
ಹಂದಿಯ ಸುಡುವಂತೆ ಸುಡುವನು ಯಮನು ೨

ಅನ್ನ – ಉದಕ ತಾಂಬೂಲ – ದರ್ಪಣಗಳು ।
ಚೆನ್ನವಸ್ತ್ರಗಳೆಲ್ಲ ವರ್ಜಿತವು ॥
ತನ್ನ ಸತಿಯ ಸಂಗ ಮಾಡುವ ಮನುಜನ ।
ಬೆನ್ನಲಿ ಕರುಳ ಉಚ್ಚಿಸುವನು ಯಮನು ೩

ಜಾವದ ಜಾಗರ ಕ್ರತು ನಾಲ್ಕು ಸಾವಿರ ।
ಜಾವ ನಾಲ್ಕರ ಫಲಕೆ ಮಿತಿಯಿಲ್ಲವು ॥
ದೇವದೇವನ ದಿನದಿ ನಿದ್ರೆಗೈದರೆ ಹುರಿ – ।
ಗಾವಲಿಯೊಳು ಹಾಕಿ ಹುರಿಯುವ ಯಮನು ೪

ಇಂತು ಏಕಾದಶಿ ಉಪವಾಸ ಜಾಗರ ।
ಸಂತತ ಕ್ಷೀರಾಬ್ಧಿಶಯನನ ಪೂಜೆ ॥
ಸಂತೋಷದಿಂದಲಿ ಮಾಡಿದ ಜನರಿಗ – ।
ನಂತ ಫಲವನೀವ ಪುರಂದರವಿಠಲ ೫

ಅರಸಂಚೆ – ರಾಜಹಂಸ

ಅರಿ – ಚಕ್ರ ಅಥವಾ ಹಿರಣ್ಯಕಶ್ಯಪ

ಅರಿಕೆ – ಅಜ್ಞಾನ

ಅರಿತು ಅರಿಯರು – ನಿಜವಾದ ಜ್ಞಾನವಾಗಿಲ್ಲ

ಅಲ್ಲಿ – ಖಾರಾ ಗೆಣಸು

ಅವಗಡಿಸು – ಕಾದು, ಅಪಮಾನಿಸು

ಅವನಿಪಿತ – ಹಿರಣ್ಯಕಶ್ಯಪ

ಅವಹಿತ – ಯುದ್ಧ ಭೂಮಿ

ಅವಜ್ಞೆ – ಅವಮಾನ

ಅವಧೂತ – ಎಲ್ಲವನ್ನು ತೂರು

ಅಶನಪ್ರಭೇದ – ಪಂಕ್ತಿಯಲ್ಲಿ ಪರಭೇದ

ಅಹಿ – ಶೇಷ

ಅಳವು – ಸಾಮರ್ಥ್ಯ, ಶಕ್ತಿ

ಅಳಿಗಂಧ – ಹೂವಿನಮುಡಿ

ಅಳೆವುದು – ಪ್ರಮಾಳ

ಅಕ್ಷೋಹಿಣಿ – ಸೈನ್ಯ ಸಮೂಹ

ಅಂಕುರಿಸು – ಮೊಳಕೆಯೊಡೆ

ಅಂಗ – ರೀತಿ

ಅಂಗಜಪಿತ – ಕಾಮನ ತಂದೆ

ಅಂಗದ – ತೋಳಬಾಪುರಿ

ಅಂಗವೆಲ್ಲಕಂಗಳುಳ್ಳ – ಇಂದ್ರ ಅಂಗೈಯಲ್ಲಿ ಧ್ವಜಪದ್ಮ ಇವು ಮಹಾಪುರುಷರ ಸಾಮುದ್ರಿಕ ಲಕ್ಷಣಗಳು

ಅಂತರ್ಗತ – ಒಳಗೊಂಡ

ಅಂತರ – ಗುಟ್ಟು

ಅಂತರಂಗದಾಸೆ – ಉತ್ಕಟಪ್ರೇಮ

ಅಂತ್ಯಜಳು – ಚಂಡಾಲ ಸ್ತ್ರೀ

ಅಂಬರಕೇಳಿ – ಮಾಯಾಜಾಲ ಕ್ಷಣಿಕಸುಖ

ಅಂಬು – ಗಂಗಾನದಿ

## ಆ

ಆಕರಿಸು – ಸಂಗ್ರಹಿಸು

ಆಗದ – ಅಪಥ್ಯಕರವಾದ

ಆಗಮ – ರಹಸ್ಯ

ಆಜ್ಞಾ – ಉಸಿರುಜೀವ

ಆಣಿ ಮುತ್ತು – ಜೀವ

ಆತ್ಮ – ಉಸಿರು, ಜೀವ

ಆರ್ತಿ – ಕಷ್ಟ

ಆಧಾರ – ಒತ್ತು

ಆಪ್ರತಿ – ಸರಿಗಟ್ಟದ

ಆಯತದಿ – ಸಹಜವಾಗಿ, ಸುಲಭವಾಗಿ

ಆಕರಮಾರ್ಗ – ಷಡ್ವೈರಿಗಳ ದಾರಿ

ಆರಡಿ – ತುಂಬಿ

ಆರು ಮಂದಿ ಕಳ್ಳರು – ಕ್ಷಿತ್ರಿಪುಗಳು

ಆರು ಮೂರು – ಒಂಬತ್ತು ದಾರಿಗಳು

ಆರುಶಾಸ್ತ್ರ – ನ್ಯಾಯ, ಮೀಮಾಂಸಾ ವೈಶೇಷಿಕ ವೇದಾಂತ ಸಾಂಖ್ಯ, ಯೋಗ

ಆರುತೆರೆ – ಷಡ್ರಿಪುಗಳು, ಕಾಮ, ಕ್ರೋಧ, ಮದ, ಲೋಭ, ಮತ್ಸರ, ಮೋಹ

ಆರೋಗಸಿಸು – ಸೇವಿಸು
ಆಲ್ಪರಿ – ದೈನ್ಯದಿಂದ ಬೇಡಿಕೊಳ್ಳು
ಆಶಾತ – ಶುಚಿಯಿಲ್ಲದ್ದು, ಹೊಲಸು
ಆಳ್ – ಮುಳುಗು
ಆಜ್ಞೆ – ಕಟ್ಟಳೆ
ಆಂತರ – ನೀರಿನ ಶುದ್ಧಾಶುದ್ಧತೆ

## ಇ

ಇನಿತರೊಳೇನಹುದು –ಮೇಲೆ ಹೇಳಿದುದು
ಇಳೆಯ ಕದ್ದ ಸಾಳಿ –ವರಾಹವತಾರ
ಇಂದ್ರಿಯ ಪ್ರತಿಮೆ –ಬೇರೆ ದೇಹ

## ಈ

ಈರಡಿ – ಎರಡು ಹೆಜ್ಜೆ
ಈರಾರು – ಹನ್ನೆರಡು
ಈಶನ ಭಜಕರು – ಹರಭಕ್ತರು
ಈಷಣ – ಉತ್ಕಟ ಅಪೇಕ್ಷೆ

## ಉ

ಉಗ್ರರೂಪ – ನರಸಿಂಹಾವತಾರ
ಉಗ್ರ – ಶಿವನರೂಪ
ಉಡಿಗೆಜ್ಜೆ – ಗೆಜ್ಜೆಯ ಉಡದಾರ
ಉತ್ಕಟದಿ – ನಿರ್ಧಾರದಿಂದ
ಉದ್ದು – ತಿಕ್ಕು
ಉನ್ನಂತ – ಉನ್ನತ
ಉನ್ನತಕರದಾತೆ – ಕೈ ಎತ್ತಿ ಕೊಡುವವರು
ಉಪಕಾರ – ಪ್ರತಿಬಿಂಬಿಸುವಿಕೆ
ಉಭಯರಾಯರು –ಕೌರವ ಪಾಂಡವರು
ಉಮ್ಮಯ – ಉತ್ಸಾಹ
ಉಯ್ಯಾಲೆ – ಜೋಕಾಲಿ
ಉರಗಾದ್ರಿ – ತಿರುಪತಿ
ಉರಗಬಾಣ – ಸರ್ಪಾಸ್ತ್ರ
ಉರುವ – ಶ್ರೇಷ್ಠ
ಉಳ್ಳವ – ಶ್ರೀಮಂತ ಬಲ್ಲಿದ

## ಊ

ಊಡು – ಉಣ್ಣಿಸು

## ಋ

ಋಣ – ಸಾಲ
ಋಚಿಪುತ್ರ – ಅಜಾಮಿಳ

## ಎ

ಎಚ್ಚು – ಬಾಣಬಿಟ್ಟು
ಎತು – ಒತ್ತಿಹೇಳು
ಎಂತೂ ಅಹುದೊ – ಹೇಗೆ ಉಂಟಾಗುವುದೊ
ಎಣ್ಣಿಮಣಿ – ಮುಂಗೈಗಳಿಗೆ ಕಟ್ಟಿದ ಮಣಿ
ಎಣಿಸು – ಭಾವಿಸು
ಎರಡೀರೈದು – ಇಪ್ಪತ್ತು
ಎರಡೇಳು – ಹದಿನಾಲ್ಕು
ಎರೆದ – ಎರಕ ಹೊಯ್ದ
ಎಲವ – ಬೂರುಮರ
ಎಲ್ಲಮ್ಮ – ಸವದತ್ತಿ ಮುಂತಾದ ಕಡೆಗಳಲ್ಲಿರುವ ಪ್ರಸಿದ್ಧ ದೇವತೆ

ಎಸೆ – ಒಗೆ
ಎಂತಾನೆ – ಅಷ್ಟಮದಗಳು

ಐ

ಐದುನಾಲ್ಕು – ನವದ್ವಾರ
ಐದೆ – ಹೆಚ್ಚಾಗಿ
ಐದೊಕ್ಕಲು – ಪಂಚಜ್ಞಾನೇಂದ್ರಿಯ
ಐಯ್ವರು – ಪಂಚೇಂದ್ರಿಯಗಳು
ಐದು ಮಂದಿ ಬೇರೆ– ಪಂಚಕರ್ಮೇಂದ್ರಿಯ

ಒ

ಒಕ್ಕಡಿಕೆ – ಒಮ್ಮನಸು
ಒಗದಿಸು – ಧಿಕ್ಕರಿಸು, ಹೇದು
ಒಡಲು ಹಂಗಿಸು– ಊತವೆನ್ನಿಣಿಸು
ಒಡ್ಡು – ವ್ಯಾಪಿಸು
ಒಡೆಯುವ – ಸೂರ್ಯ
ಒಬ್ಬ ಭಾವಣೆ
ಒಂಡಿ ಮೋವನಾದ– ಅರ್ಜುನನ ಸಾರಥಿಯಾದ
ಒಮ್ಮನ – ಒಂದೇ ಮನಸ್ಸು, ಒಂದು ಅಳತೆ
ಒಬ್ಬ ಮಾವನ – ಕಂಸನನ್ನು
ಒಬ್ಬವೆಂಬ – ಅದ್ವೈತ ಮತವಾದಿ
ಒಬ್ಬವೆಂದ – ನಾಸ್ತಿಕ ಮತಸ್ಥಾಪಕರು
ಒರಲು – ಕೂಗು, ಒದರು
ಒರಿದು – ಪರೀಕ್ಷಿಸೆ
ಒಲುಮೆ – ಪ್ರೀತಿ ಪ್ರಸಾದ
ಒಸಗೆ – ಮದುವೆ
ಒಳ್ಳೇನೀನೆ – ಕಲ್ಕ್ಯವತಾರ
ಒಂದು ರೂಪ ಪ್ರತಿಕರಿಸು – ಆಚರಿಸು
ಒಂಭತ್ತು ಬಾಗಿಲು–ದೇಹ

ಓ

ಓಗರ – ಅನ್ನ
ಓಡು – ತಲೆಬುರುಡೆ
ಓದನ – ಅನ್ನ
ಓಪ – ಸಂರಕ್ಷಿಸುವವ, ಪ್ರಿಯ
ಓಲಗ – ಅಗ್ರಪೂಜೆಗಾಗಿ ಕೂಡಿದ
ಓಲಾಟ – ಹಾರಟ
ಓಲಾಡು – ಈ ಸಾಡು
ಓಂಕಾರ – ಎಲ್ಲಾ ಮಂತ್ರಗಳಿಗೂ ಮೂಲ ಮಂತ್ರ

ಕ

ಕರ್ಕಶ – ಕಕ್ಕಸ
ಕಪ್ಪರ – ಕಮಂಡಲ
ಕಚ್ಚಪ – ಆವೆ
ಕಟ್ಟಿ – ಕಟ್ಟಿಸಿದ ಕೆರೆಯನ್ನು
ಕಟಕ – ಸೇವೆ
ಕಟ್ಬಾಣಿ – ಬಂಗಾರದ ಗಟ್ಟಿ ಗುಂಡುಗಳ ಸರ
ಕಟ್ಟಿಕೊಳ್ಳುವ – ಒಂದುಗೂಡು
ಕಟ್ಬಾಣಿ – ಅತಿ ಚೆಲುವೆ
ಕಟ್ಟುಗ್ರ – ಮೊಂಡುತನ
ಕಟ್ಟಕದನತನ – ಕಟ್ಟುತನ ಕದನತನ
ಕಡಲಿ – ಕಡಲು
ಕಡೆಗಣ್ಣಿನಿಂದ ನೋಡು – ತಿರಸ್ಕರಿಸು
ಕಣ್ಣುಳ್ಳುವ – ಶ್ರೇಷ್ಠ
ಕ್ಷಣಿಕ – ಕಣ ಕಣ ಸಪ್ಪಳ ಮಾಡು

| | | | |
|---|---|---|---|
| ಕಡಲಿ | – ಸಾಲದ ಪತ್ರ | ಕಲಿಮಲ | – ಕಲಿಕಾಲದ ದುಷ್ಟವಾಸನೆಗಳು |
| ಕತ್ತಲಕ್ಕೆ | – ಕತ್ತಲಿಬರು | ಕವ್ಯ | – ಪಿತೃಗಳಿಗೆ ಅರ್ಪಿಸು |
| ಕತ | – ಸೋದರರಾದ | ಕದ್ಯವಿ | – ಮುತ್ತಿಗೆ ಹಾಕು |
| ಕೃತು | – ಯಜ್ಞ | ಕಳಕಳಿಸು | – ನಗು |
| ಕರ್ತೃತ್ವ | – ಅಹಂಕಾರ | ಕಳವೆ | – ಅಂಜಿ ಹೇಳುವ ಮಾತು |
| ಕೃತಿರಮಣ | – ಪ್ರಾದಿಮ್ನಕೃತ ಬೃಂದಾಕಾರನತಿಯ ತಲೆ | ಕಳರತ್ರ | – ಹೆಂಡತಿ |
| ಕನಕಾಂಬಾರ | – ಪೀತಾಂಬರ | ಕಳವಳ | – ಚಿಂತೆ, ಚಡಪಡಿಕೆ |
| ಕವಳ | – ತಾಂಬೂಲ | ಕವಾಲಿ | – ಬಾಗಿಲು |
| ಕನ್ಯೆ | – ದ್ರಪತಿ | ಕಳವೆ | – ಭತ್ತ |
| ಕಬ್ಬಲಿಗ | – ಕರ್ನಾಟಕದಲ್ಲಿ ಒಂದು ಜಾತಿ | ಕಳತ | – ಪೂರ್ಣ ಹಣ್ಣಾದ |
| ಕಮ್ಮಾಗೋಲು | – ಪುಷ್ಪ ಬಾಣವುಳ್ಳವ | ಕಳ್ಳ ಕಪಟ | – ಒಳಸಂಚು |
| ಕರ್ಮಮ್ಮಾತನ | – ಮಾಡಬೇಕಾದ ಆಚರಣೆಗಳನ್ನು ಬಿಡುವುದು | ಕಷ್ಟಸೆರೆ | – ದುಃಖ ಮತ್ತು ಬಂಧನ |
| ಕರುಬಾ | – ಹೊಟ್ಟೆಕಿಚ್ಚಿನವಾ | ಕಾಕು | – ಕೀಳುಮಾತು, ನಿಂದೆ |
| ಕರಸಂಪುಟ | – ಬೇಗನೆ | ಕಾಕು ದೇವತೆ | – ಕ್ಷುದ್ರ ದೇವತೆ |
| ಕರವಾಳಿ | – ಕೈಗೆತ್ತಿ | ಕಾತರಿ | – ಕಾತರಕಾಯಿಯ ಹೆಸರು |
| ಕರಿಯ ಸಂಘ | – ಆನೆಗಳ ಗುಂಪು | | |
| ಕರಿಪುರ | – ಹಸ್ತಿನಾವತಿ | ಕಾರ್ತಸ್ವರ | – ಬಂಗಾರ |
| ಕರಿರೂಪ | – ಅಶುಭಾ ಸ್ವರೂಪದವಳು | ಕಾರ್ಪಣ್ಯ | – ಕ್ಷುದ್ರಮನಸ್ಸು |
| | | ಕಾಮಿತಾರ್ಥ | – ಮೋಕ್ಷ |
| ಕರೆಹ | – ಹಿಂಡುವಿಕೆ | ಕಾಲಕಾಲ | – ಜನ್ಮಜನ್ಮಾಂತರ |
| ಕರೆ | – ಹಿಂಡು | ಕಾವಡಿ | – ಕಂಬಿ, ಅಡ್ಡಿ |
| ಕಲಮದಾಗಿ | – ತಿಕ್ಕಾಣಿಗಳ ಕಟ್ಟಿಗೆಯ ಡಬ್ಬಿ | ಕಾವಲು | – ಸೆರೆಮನೆ |
| | | ಕಾವಲಿ | – ಹಂಚು |
| ಕಲ್ಮಶ | – ಕೇಳೆ | ಕಾವರದಾಳಿ | – ತಾತ್ವಾಭಿಮಾನಿ ದೇವತೆಗಳ ದಾಳಿ |
| ಕಲಿಕಿತನದಲು | – ಕೇಲುವುದೇಕೋ ಕಲ್ಕಿಅವತಾರ | ಕಾಳ ಬೆಳದಿಂಗಳು | – ಕೃಷ್ಣಪಕ್ಷ ಬೆಳದಿಂಗಳು |
| ಕಲ್ಯಾಣ | – ಮಂಗಳ | | |
| ಕಲುಷ | – ಪಾಪ, ದೋಷ | ಕಾಳಿಂದಿ | – ಯಮುನೆ |

ಕಾಮಿತ – ಬಯಸಿದ
ಕಸಾರ – ಸರೋವರ
ಕಾಸು – ನಾಣ್ಯ
ಕಾಸೆ – ಕೆಮ್ಮ
ಕಿರ – ಹಂದಿ
ಕಿರೀಟ – ಅರ್ಜುನ
ಕೀತ – ಪಕ್ವವಾದ
ಕುಕ್ಕುಟ – ಕೋಳಿ
ಕುಡಿತ – ಸೆರೆ
ಕುಟೀರ – ಗುಡಿಸಲು
ಕುಪಿತ – ಸಿಟ್ಟು
ಕ್ಲುಪ್ತ – ಕ್ರಮ
ಕುಮಂತ್ರ – ದುರಾಲೋಚನೆ
ಕುರುಣಯ – ದುರ್ಯೋಧನ
ಕುರುಳ ಕೂದಲು – ಉಂಗುರ ಕೂದಲು
ಕುರು ಪಿತಾಮಹ – ಭೀಷ್ಮ
ಕುರುಹ – ವಿಷ್ಣುಭಕ್ತರ ಚಿಹ್ನೆ
ಕುಲಶರಿ – ಮಂದರಾದ್ರಿ
ಕುಲನಾಶ – ಪರಶು ರಾಮಾವತಾರ
ಕುಲಶ – ವಜ್ರಾಯುಧ
ಕುವಲಯ – ಭೂಮಂಡಲ
ಕುಳಿ – ತಗ್ಗು, ಕುಸಿ
ಕುಕ್ಷಿಮಹ – ದೊಡ್ಡ ಹೊಟ್ಟೆ
ಕೇದಾರ – ರಾಮೇಶ್ವರ
ಕೇಮ – ಕಾವೆ
ಕೇಯೂರ – ಭುಜಕೀರ್ತಿ
ಕೈಗೂಡು – ನೆರವೇರು
ಕೈಪ – ಲಂಗೋಟಿ
ಕೈಬರು – ಸಿದ್ಧರಾಗು
ಕಾವ್ಯಪುರ – ಉಡುಪ
ಕೈಚ್ಚ – ದೇಹದಂಡನೆಯ ವ್ರತ
ಕೊ – ತೆಗೆದುಕೋ
ಕೊಗುವ ಕುಂಡಲಲ್ಲಿ – ನರಸಿಂಹಾವತಾರಿ
ಕೊಡವ – ಕೂಡ
ಕೊಡಲಿಯ ನೀನೆ – ಪರಶು ರಾಮನವತಾರ
ಕೊಡುವಧರ್ಮ – ದಾನಗುಣ
ಕೋಗಿಲೆ – ಕಷ್ಟ
ಕೊನಬಂಗಾರ – ಹೆಸರಾಂತ ವೀರ
ಕೊರೆಯ – ಕೊರೆಯಿತು
ಕೊಲಲು – ಅತಿಯಾಗಿ ಪೀಡಿಸಲು
ಕೋಲು – ಫಣಿ
ಕೋವಿದ – ಚತುರ
ಕಂಗೆಡಿಸು – ಗಾಬರಿಪಡಿಸು
ಕಂಚು – ಕನ್ನಡಿ
ಕಂಬದೊಳುದ್ಭಸಿದ ನೀನೆ – ನರಸಿಂಹಾವತಾರ
ಕುಂಚ – ಕಟ್ಟಿಗೆಯ ತುಂಡು
ಕೂಬೆ – ಗೋಡೆ
ಕೆಂಡರೊಟ್ಟಿ – ಕೆಂಡದಮೇಲೆ ಬೇಯಿಸುವ ರೊಟ್ಟಿ
ಕೊಂಡಾಡಿ – ಬಳಸಿ
ಕೊಂಡೆಯ – ಚಾಡಿ ದೂರು

## ಖ

ಖಂಡಬೇಡಿ – ವಾಮನವತಾರ
ಖಂಡಸಕ್ಕರೆ – ಕಲ್ಲುಸಕ್ಕರೆ
ಖಂಡುಗ – ಒಂದು ಅಳತೆ
ಖಗಪತಿ – ಗರುಡ

## ಗ

ಗಜಪತಿ - ಕಳಿಂಗ ದೇಶದ ಅರಸು
ಗಜೇಂದ್ರ - ಕರಿರಾಜ
ಗತಿ - ತಾಲಗೇರಿ, ಲಯ
ಗತಿತಪ್ಪು - ಮರಣವೊದಗು
ಗತಿಯ ತಪ್ಪು - ಸಾಮಬರು
ಗರಳವರ ಸಿವಿರತ್ನ - ವಿಷನಾಶಕ ರತ್ನ
ಗರಿಮೆ - ಗೌರವ ಘನತೆ
ಗರುಡಕೇತನ - ಗರುಡ ಧ್ವಜ
ಗರುಡ ಪಕ್ಷಿ - ವಿಷ್ಣುವಿನ ವಾಹನ
ಗರುಡಧ್ವಜ - ಗರುಡಲಾಂಛನದ ಧ್ವಜ
ಅಣ್ಣನ ಮಕ್ಕಳು - ಹರಿಕಥಾಮೃತಸಾರ (ವಿಷ್ಣುರಹಸ್ಯ)
ಗಳಶ್ರು - ಶುದ್ಧವಾದ ಧ್ವನಿ
ಗಾಡಿಕಾರ - ಬೆಡಗಿನವ
ಗಾಢ - ದೃಢವಾದ
ಗ್ರಾಸ - ತುತ್ತು
ಗಿಡವೆಲ್ಲ ನಂಟರು - ಎಲ್ಲರೂ ನೆಂಟರು
ಗಿರಿರಾಜ - ಹಿಮವಂತರಾಜ
ಗೀತ ಪ್ರಸಂಗ - ಗಾಯನ ಗೋಷ್ಠಿ
ಗುಮ್ಮ - ಭಾವಾ
ಗುರುಳೆ - ಗುಳ್ಳೆ
ಗುರು - ದ್ರೋಣಚಾರ್ಯರು
ಗುರುವ - ಅಹಂಕಾರ
ಗುಲ್ಮರೋಗ - ಪಿತ್ತಾಶಯ ಮೇಲೆ
ಗುಷ್ಟ - ಕೆಟ್ಟ
ಗೊಂಡು - ಮುದ್ದೆಯಾಗು
ಗೊರಲಿ - ಗೆದ್ದಲಿ
ಗೊಲ್ಲವ ನೀನೆ - ಕೃಷ್ಣಾವತಾರ
ಗೋಕುಲಾಂದನ - ಕೃಷ್ಣನ
ಗೋಣಿ - ಚೀಲ
ಗೋಪ - ಮೀನ
ಗೋಪಿ - ದೇವಕಿ
ಗೈಯ್ಯಾಳಿ - ತೊತ್ತರಾಜಧೂಳಿ
ಗೌಳಿ - ಹಲ್ಲಿ
ಗಂಟು - ಹಣ
ಗಂಡ - ಮಿಕ್ಕಿದವ
ಗಂಜರು - ರೊಚ್ಚು

## ಘ

ಘ್ರಾಣಸಲಿ - ವಾಸನೆನೋಡು

## ಚ

ಚರ್ಯ - ಚರಿತ್ರೆ
ಚದುರ - ಬುದ್ಧಿವಂತ
ಚರಣ - ಚರಣ ಸ್ಮರಣೆ
ಚರಿಯೆ - ಇರುವಿಕೆ ಸ್ಥಿತಿ
ಚಲ್ಲೆಗಂಗಳ - ಬೊಗಸೆ ಗಣ್ಣಿನವಳಾದ
ಚಾಚಿ - ಹಾಲು
ಚಾನು - ಮೇಣಕಾಯಿ
ಚಿತ್ತೈಸು - ಹೋಗು
ಚಿನ್ನ - ಯುಡಿ
ಚೀದಿಕೋಲು - ಕಬ್ಬಿನ ಗಳ
ಚಿಪ್ಪು - ಕೋಲು
ಚಿಮ್ಮಟಿಗೆ - ಬಾರುಗೋಲು
ಚಿಲ್ಲಿಕಾಯಿ - ನೀರನ್ನು ತಿಳಿಮಾಡಲು ಬಳಸುವ ಬೀಜ
ಚಿಲುಮೆ - ಒರತೆ
ಚಿಲ್ಲು - ಕದರಿನ ಚರ್ಮದ ಕಿವಿ

ಚಿಂತಾಯುತ – ಚಿಂತಿಸಿದಷ್ಟು ವ್ಯಾಪಕವಾಗಿ ತೋರುವವ
ಚೂಡಾಮಣಿ – ಶ್ರೇಷ್ಠ
ಚೊಕ್ಕತನವು – ಪಾವಿತ್ರ್ಯ
ಚೆನ್ನಾರ – ಅತಿಸುಂದರಿ
ಚೆನ್ನಿಗ – ಚೆಲುವ
ಚೈತನ್ಯ ಮರೆತು – ಸಂಪೂರ್ಣವಾಗಿ ಮರೆತು
ಚೋದ್ಯ – ಆಶ್ಚರ್ಯ, ಸೋಜಿಗದ ವಿಷಯ

## ಜ

ಜಗದುದರ – ಜಗತ್ತೆಲ್ಲವನ್ನು ಉದರದಲ್ಲಿ ಇರಿಸಿ ಕೊಂಡವ
ಜಟ್ಟಿಯ – ಗ್ರಾಮ ದೇವತೆ
ಜಠರದಿ ಹಿರಿಯ – ಲೋಕಗಳನ್ನು ತಿಳಿದವ
ಜರ್ಜರಿತನಾಗು – ಹಣ್ಣಾಗು
ಜನ ಕಂಟಕ – ಸಮಾಜ ಘಾತುಕ
ಜಲದೋಳ್ ನೀನೆ– ಮತ್ಸ್ಯಾವತಾರ
ಜಲವಾಸ – ಕೂರ್ಮಾವತಾರ
ಜವನ ಭೂಮಿ – ಯಮನ ಲೋಕ
ಜಂಗುಳಿ – ದನದ ಹಿಂಡು
ಜಂಘೆ – ಕಣಕಾಲು
ಜಂಬೀರ – ನಿಂಬೆ
ನೆಗಳು – ಮೊಸಳೆ
ಜಾತಿಕರ್ಮ – ಜಾತಿಕಾರತಿ, ಬಹುರೂಪಿಣಿ
ಜಾಯ – ಹೆಂಡತಿ
ಜಲಧಿಯ ನೀನೆ – ರಾಮಾವತಾರ
ಜಾವಳಿ – ಕ್ರೂರವಾದ ನಾಯಿಗಳು
ಜಾಳಿಗೆ – ಜಾಲಂದರ ಕಿಡಕಿ
ಜಾಳಂದ್ರ – ಜಾಳಿಗೆಯನ್ನು ಹಚ್ಚಿದ ಕಿಡಕಿ
ಜಾಂಬುನದ – ಬಂಗಾರ
ಜಿತಮನ – ಮನಸ್ಸನ್ನು ಗೆದ್ದವ
ಜೀವಾತ್ಮನಾದ – ಜೀವಿಗಳಲೆಲ್ಲ ಆತ್ಮನಾಗಿರುವ
ಜೀವ – ಜೀವಭೇದ
ಜೀವ – ಜಡಭೇದ
ಜೋಕೆ – ಸಂರಕ್ಷಣೆ

## ಟ

ಟವಳಿ – ಮೋಸ
ಟೌಳಿ – ಮೋಸ

## ಠ

ಠಾಣ – ದೀವಿಗೆ (ಸ್ಥಾನ, ದೀಪಿಕಾ)

## ಡ

ಡಿಂಬ – ದೇಹ
ಡೊಂಕು – ತಪ್ಪು
ಡೊಂಬೆ – ನಟನೆ

## ತ

ತಕ್ರ – ಮಜ್ಜಿಗೆ
ತಕ್ಕೈಸು – ಆಲಂಗಿಸು
ತರ್ಕಿಸು – ವಾದಿಸು
ತಗರು – ತಡೆ
ತಗ್ಗಿಸು – ತಲೆ ವಿನೂತನಾಗಿ

ತಡೆ - ವಂದೆ
ತನ್ನಭವನ - ಸಸ್ಯಲೋಕ
ತಪ್ಪು - ಸುಳ್ಳಾಗು
ತಮ - ಬೀರಕದ್ದ
ಶಂಖಾಸುರ
ತರುಣಿ - ಸೂರ್ಯ
ತರಣಿ - ದಾಟಿಸುವುದ -
ನಾವೆ
ತರುಕರುವಿನ ಮಂತ್ರ- ಗೋಮಾತೆಯ
ಸ್ತೋತ್ರ
ತರುಣಿ - ಲಕ್ಷ್ಮೀ
ತರಣಿ ನಂದನ - ಕರ್ಣ
ತಲ್ಲಣ - ಪೀಡಕ
ತಲೆಹತ್ತು - ರಾವಣ
ತಲೆಗಾಯು - ಸಂರಕ್ಷಿಸು
ತವಕ - ಶೀಘ್ರವಾಗಿ
ತಸ್ಕರ - ಕಳ್ಳ
ತಳ್ಳಿತಾರ - ತುಂಟ
ತರಳ - ಒಣಗಿದ ಹಣ್ಣು
ತಂಗಿ - ವಸತಿಮಾಡಿ
ತಂಗು - ತಡೆ
ತಂತು - ಅಲ್ಪಸ್ವಲ್ಪ
ತಂಡ - ಅಸಂಖ್ಯಾ
ತಾ - ಬೇಟೆಗಾರ
ತಾಮರಸ - ಕಮಲ
ತಾಮಸ - ದುರ್ಗುಣ
ತಾರಕ - ಸಂಗೀತದಲ್ಲಿಯ
ಮೂರು ಸ್ವರ
ತಾರಕ
ಬ್ರಹ್ಮಾದ್ವಿರೂಪ - ತಾರಕನಾಥ
ಬ್ರಹ್ಮಣ ಪ್ರತಿರೂಪ
ತಾಸು ಬಾರಿಸು - ವೇಳೆ ತಿಳಿಸು
ತಾಳಿ - ಹೆಣ್ಣು ದೇವತೆ
ಹೆಸರಿನಲ್ಲಿಯ ಹರಕೆ

ತಿರುಗು - ಜನ್ಮ, ಮರಣ
ಚಕ್ರದಲ್ಲಿ ಹಾಯು
ತಿಳಿ - ಎಚ್ಚರಾಗು
ತ್ರಿತಿಯ - ಕಲಿ
ತ್ರಿಪುರಾರಿ - ಶಿವ
ತಿಂಗಳು - ಚಂದ್ರ
ತೀದು - ಬೀಸು
ತೀರ್ಥರಾಜ - ಪ್ರಯೋಗದ
ಇನ್ನೊಂದು
ಹೆಸರು
ತಿಂತಿಣಿ - ಸಮೂಹ
ತಿಂಥಿಣಿ - ರಾಶಿ ಗುಂಪು
ತಿಂಡಿವಾಳ - ತಿನಿಸು ಬಕ್ಕ
ತಿಮ್ಮಪ್ಪ - ವೆಂಕಟೇಶ
ತಿರುನಾಮ - ಶ್ರೀನಾಮ
ತಿಳಿಯಲು - ಸಾಧ್ಯವಾದವನು
ತೀರ್ಥ - ಪುಣ್ಯಜಲಸ್ಥಾನ
ತ್ರಿರೇಖೆ - ಕೊರಳ ಮೇಲಿನ
ಮೂರು ಗೆರೆಗಳು
ತ್ರಿಸ್ಥಾನ - ಸ್ವಾತದ್ವೀಪ,
ಅನಂತಾಸನ,
ವೈಕುಂಠ
ತುಡು - ಧರಿಸು
ತೂಗಿ - ಮುಚ್ಚಲೊಲ್ಲನು -
ಮತ್ಸ್ಯಾವತಾರ
ತುಂಬಿ - ಜೇನುಹುಳು
ತುರೀಐ - ನಾಲ್ಕನೇಯ ಶ್ರೇಷ್ಠ
ಜಾಗೃತ ಸ್ವಪ್ನ
ಸುಕ್ಷಿಪ್ತಿ
ತುರುಕರಕೂದಲ - ಗಂಗಾವನ
ತುರುಬಿ - ಶ್ರೇಷ್ಠ
ತೃಟಿ - ಲವ. ಲವ, ಕ್ಷಣ
ತೃಟಿ - ಕ್ಷಣ, ½ ಭಾಗ

ತೆತ್ತಿಗ – ಭಾಂಧವ
ತೆತ್ತಿಗ – ಆಪ್ತ
ತೆರ – ಪದ್ಧತಿ
ತೆರಪು – ಅವಕಾಶ, ಬಿಡುವು
ತೊಟ್ಟು – ತುಂಬ
ತೊಡರು – ಆಭರಣ
ತೊಡಿ – ಜಗಳ
ತೊಂಡರು – ಹರಿಭಕ್ತರು
ತೊಡೆ – ಧರಿಸಲು
ತೋಕರು – ಮಕ್ಕಳು
ತೋರ – ಶಿಶುವಿನ ಅಳತೆಯಷ್ಟು
ತೇರುಂಡರು – ವಿಚಾರಗೇಡಿ, ಹುಂಬ
ತೊಂಡ – ಸೇವಕ
ತೋಡು – ಹಂಚಿಕೆ
ತೊಂಡ – ಭಕ್ತ, ಸೇವಕ
ತೊಣ್ಣೆ – ಹೊಡೆ
ತೊರೆ – ನದಿ
ತೊಳಸು – ಒಲೆಯ ಮೇಲಿಟ್ಟು ಕೈಯ್ಯಾಡಿಸು
ತೋರಿದಸಾರದಿ – ವೇದದಲ್ಲಿ

## ದ

ದಗದಗಿಸು – ಸಂತಾಪವಾಗು
ದಧ್ಯನ್ನದ ಮುದ್ದೆ – ಬುತ್ತಿ
ದಧಿ – ಮೊಸರು
ದಧಿ ಶೋಧಿಸಿ – ಮೊಸರ ಕೆನೆ ತೆಗೆದು
ದಧ್ಥಿ – ಮೊಸರು
ದನುಜ – ರಾಕ್ಷಸರ ಒಂದು ಜಾತಿ
ದಯವಾಗು – ದಯಾಮಯನಾಗು
ದಲ – ತುಳಸಿಯ ದಳ
ದವಸ – ಧಾನ್ಯ
ದಶ ದಿಕ್ಕಿನ – ಉದಯದ ರಾಯರು
ದರ್ಶನ – ತತ್ವಜ್ಞಾನ
ದಳ – ಸೈನ್ಯ
ದಳ್ಳುರಿ – ಬೇಗೆ
ದಂಡಿಗೆ – ತಂಬೂರಿ
ದಾಪುಗಾಲಿಡು – ಹೆಜ್ಜೆ ಹಾಕು
ದಾತ – ಕೊಡುವವ
ದಾಮ – ನಡುಪಟ್ಟಿ
ದಾಮೋದರ – ಕೃಷ್ಣ
ದಾಯ – ರೀತಿ
ದಾರಕ – ಮಗ
ದಾರಿ – ಉಪಾಯ, ಕಷ್ಟಕರ್ಮ
ದಾರಿ – ಜೀವನ ಪಥ
ದಾವಣಿ – ದನಕಟ್ಟುವ ಕಣ್ಣಿ
ದಾಸೋಹ – ಶ್ರೀಹರಿಯ ದಾನ
ದಾಹ – ನೀರಡಿಕೆ
ದಿಗ್ಗಜ – ಎಂಟು ದಿಗ್ಗಜಗಳು
ದಿವಾಕಸರು – ದೇವತೆಗಳು ಕೈಕೆ ಮುನಿದರೆ
ದ್ವಿತೀಯ – ದ್ವಂದ್ವ, ಜೋಡಿ
ದ್ವಿತಿಯ – ದ್ವಾಪರ
ದಿನೇಶ – ಸೂರ್ಯ
ದ್ವಿಪದಿ – ಇಂದ್ರ, ಕಾಮ
ದಿವಸಾಂಧ ಪಕ್ಷಿ – ಗೂಗೆ
ದಿವಕರ – ಸೂರ್ಯ
ದಿವ್ಯ – ಪರೀಕ್ಷೆ
ದ್ವಿಪಾಸಿರಾಂಬಿಕ – ಎರಡು ಸಾವಿರ
ದುರ್ಜನ – ಪಾಪದಿಂದ ಹುಟ್ಟುವ

ದುಡುಕು - ಸಾಹಸ
ದುರ್ದಾನ - ತುಚ್ಛರ ಕೈಯಿಂದ ತೆಗೆದುಕೊಂಡ ದಾನ
ದ್ರುಪದನ ಸುತೆ - ದ್ರೌಪದಿ
ದುರದಿ - ಧೈರ್ಯದಿಂದ
ದುರ್ಲ್ಲೇಖ - ಕೆಟ್ಟಹಣೆಬರಹ
ದುಗ್ಗಾಣಿ - ಎರಡು ಕಾಣಿ
ದೇವಹೊಲೆ - ಕಪಿಲದೇವನ ತಾಯಿ
ದೇವರ್ನೀಶಾವಿ - ಕಾಯಿಯ ಹೆಸರು
ದೊಡ್ಡಿ - ತುರುಮಂಡಿ
ದೂರು - ನಿಂದೆ
ದೊರೆ ತಿಂತ್ರಿಣಿ - ಹುಣಸೆಯ ದೊರೆಗಾಯಿ
ದೃಷ್ಟಾಂತ - ಸ್ವಾನುಭವ
ದ್ರುಹಣ - ಬ್ರಹ್ಮ

ಧ

ಧಟ್ಟುಗೇರಿ - ಗಾಬರಿಯಿಂದ ಎದೆ ಡವಡವ ಎನ್ನುವದು
ಧರ್ಮವೇದ್ಯ - ಧರ್ಮನಿಷ್ಠ
ಧರಣೀಧರ - ವರಹಾವತಾರ
ಧಂಧನೆ - ಗಡಿಬಿಡಿ
ಧ್ಯಾನಕಾನನ - ಸಂತತವಾದ ಚಿಂತನೆ
ಧಾಡಿ - ಸರಿಸಮ
ಧಾತ್ರಿ - ಭೂಮಿ
ಧಾಟಿ - ಸರಿಸಮಾನ
ಧಾರ್ಯವಾದ - ಅಡಕವಾದ
ಧಾರಿಣಿ - ಉಪವಾಸ
ಧಾರಣಿ - ಉಪವಾಸದ ವ್ರತ
ಧಾರಿಣಿ - ಭೂಮಿ
ಧಾರಿಣಿ ಸುರರು - ಬ್ರಾಹ್ಮಣರು

ನ

ನಗೆಹೆಣ್ಣು - ಅಹಂಕಾರ
ನಟನೆ - ಸೋಗು, ವೇಷ
ನಡೆವಳಿ - ಆಚಾರ
ನವವಿದ - ನವವಿಧ ಭಕ್ತಿ
ನಳಿನ ಸಂಭವ - ಬ್ರಹ್ಮ
ನಳಿನಾಕ್ಷ ಮಣಿ - ಕಮಲಾಕ್ಷಮಣಿ
ನಷ್ಟ - ಹಾನಿ
ನಾಕರಿಸು - ನಾಶಪಡಿಸು
ನಾಕೇಂದ್ರ - ದೇವೇಂದ್ರ
ನಾಗಶಯನ - ಶೇಷಶಯನ
ನಾಗೇಂದ್ರ - ಶೇಷ
ನಾಡ - ಸಾಮಾನ್ಯ
ನಾಲೆಮಾಡು - ಹೋಲಿಸು
ನಾಮಧಾರಿ - ಹರಿದಾಸ ದೀಕ್ಷೆ ಹೊಂದಿದವ
ನಾರಂದ - ನಾರದ
ನಾರಂಗ ಧಾಮ - ಶಾರ್ಙ್ಗಭೂಷಿತ
ನಾಲ್ಕು ಕುದುರೆ - ಚತುರ್ವಿಧ ಪುರುಷಾರ್ಥ
ನಾಳ - ದೇಟು
ನಿಗಳ - ಬೇಡಿ
ನಿರ್ಗುಣ - ಗುಣಾತೀತ
ನಿಜ - ಸತ್ಯ
ನಿಜ - ನಿಜಜ್ಞಾನ
ನಿಜದಿ - ನಿಜವಾಗಿ
ನಿಜಣಿಪತಿ - ದೇವತೆಗಳ ಒಡೆಯ
ನಿಜವರ್ಯರು - ತನಗಿಂತಲೂ ಶ್ರೇಷ್ಠರು

ನಿಟಿಲನೇತ್ರ – ಹಣೆಗಣ್ಣುಳ್ಳವ
ನಿಧಾನಿಸಿ – ಪರೀಕ್ಷಿಸಿ
ನಿಧಾನಿ – ಸಂಪತ್ತುಳ್ಳವ
ನಿನ್ನಯತ್ನವು – ಸಹಾಯವು
ನಿರಯ – ನರಕ
ನಿರವಧಿಕ – ಕಲಾತೀತ
ನಿರಿ – ನಿರಿಗೆ
ನಿರಿ – ನೀರಿಗೆ
ನಿರ್ಲಯ – ನಾಶರಹಿತ
ನಿಕ್ಷೇಪ – ಹುಗಿದಿಟ್ಟ
ನೀಟಾದವರು – ಸಿರಿವಂತರು
ನೀಡು – ಚಾಚು
ನೀತೆ – ಪರಿಶುದ್ಧಳು
ನೀರಜ – ಪರಿಶುದ್ಧ, ಪಾಪರಹಿತ
ನೀರದ – ಮೋಡ
ನೀರಾಜನ – ಪೂಜೆಗಾಗಿ ಸಿದ್ಧಗೊಳಿಸಿದ ದೀಪ
ನೀರು – ಜಲ
ನೀಲಮುತ್ತು – ನೀಲಿಯ ಮುತ್ತು
ನೀಲಾಭ – ನೀಲಛಾಯೆಯುಳ್ಳವನು
ನುತ – ಸ್ತುತಿಸಿಕೊಳ್ಳುವ
ನುಲಿ – ಹಂಬಿಗೆ
ನ್ಯೂನ – ಕೊರತೆ
ನೆಗಹು – ನಿಲ್ಲುವಿಕೆ
ನೆರೆ – ಕಠಿಣವಾದ, ಹೆಚ್ಚಾದ
ನೆಲೆನಳಿದು ಎಂದ – ವಾಮನಾವತಾರ
ನೆಲೆ – ರಹಸ್ಯ
ನೆಲೆತಪ್ಪು – ಸ್ಥಿತಿಗೆಡು, ದೆಶೆಗೆಡು

## ಪ

ಪಟ್ಟು ಪಟ್ಟಿಗೆ – ಬಾರಿಬಾರಿಗೆ
ಪಟ್ಟೆ – ರೇಷ್ಮೆಸೀರೆ
ಪಡಿವಾಟ – ಕಷ್ಟ, ದುರ್ದುಸೆ
ಪಡೆಕೊಳ್ಳೊಣ – ಪಡೆದುಕೊಳ್ಳೋಣ
ಪತಂಗ – ದೀಪದ ಹುಳು
ಪತಿತ – ಭ್ರಷ್ಟ
ಪದವಿ – ಅಧಿಕಾರಸ್ಥಾನ
ಪದ್ಮಿನಿ – ಒಳ್ಳೇ ಸುಂದರಿಯರಲ್ಲಿ ಶ್ರೇಷ್ಠವರ್ಗದವರು
ಪದುಮ ಜಾಂಢ – ಬ್ರಹ್ಮಾಂಡ
ಪದ್ಮನಾಭನ ದಿನ – ಹರಿದಿನ, ಏಕದಶಿ
ಪಯ – ಹಾಲು
ಪಯಣಕ – ಮಂಚ
ಪರವಸ್ತು – ಪರಬ್ರಹ್ಮ
ಪರದ – ಮುಕ್ತಾಯ
ಪರದ ಪದವಿ – ಮುಕ್ತಿ
ಪರದೇಶಿ – ದಿಕ್ಕಿಲ್ಲದವ
ಪರಬ್ರಹ್ಮರೂಪ – ಶ್ರೀಹರಿ
ಪರದೈವತ್ – ಸರ್ವೋತ್ತಮ
ಪರ್ಯಂಕ – ಹಾಸಿಗೆ
ಪರ್ಯಂತ – ಅವರೋಹಣ ತಾರತಮ್ಯದ ರೀತಿ(ಯಲ್ಲಿ)
ಪರಾತ್ಪರ – ಶ್ರೇಷ್ಠ
ಪರಾಧೀನ – ಪರಮಾತ್ಮನ ಅಧೀನ
ಪರಿಪಂಥಿ – ವಿರೋಧಿಗಳು
ಪರಿತೋಷ – ಸಂತೋಷ
ಪರಿಯಂಕ – ಮಂಚ
ಪರೆ – ಚಂದ್ರ
ಪರೇಶ – ಪರಮಾತ್ಮ

ಪಲ್ಲೆಯುವ ಬೀರಿ –ಪಲ್ಲೆಯದ ಹಬ್ಬ ಮಾಡಿ
ಪವನಸುತ – ಹನುಮಂತ
ಪವನ ನಂದನ – ಹನುಮಂತ
ಪಕ್ಷಪಾತ – ಭೇದ
ಪಾಕಶಾಸನ – ಇಂದ್ರ
ಪಾಗ – ಹಾಗ, ಒಂದು ನಾಣ್ಯ
ಪಾಚಿಕೊಳ್ಳು – ಮಲಗಿಕೊಳ್ಳು
ಪಾಟೆಲ – ಪಾದರಿ
ಪಾರುಪಂಥ – ಈರ್ಷೆಯ ಮಾತು
ಪಾತಿಬದ್ಧ – ನಿಶ್ಚಿತ ರೀತಿಯ ಜೀವನವಲ್ಲದ
ಪಾವನನವ – ಪಾವನನು ಅವ
ಪಾಸು – ಲೆತ್ತದಾಳ
ಪಾಪಿ – ದುಷ್ಟ, ಹೇತುವುಳ್ಳವರು
ಪಾರಾಯಣ – ವೈಕುಂಠದಲ್ಲಿ
ಪಾಷಂಡಮತ – ನಾಸ್ತಿಕಮತ
ಪಿಡಿ – ಹಿಡಿಕೆ
ಪೃಥ್ವಿ – ಭೂಮಿ
ಪುರುಷ – ಗಂಡ, ವಿವೇಕ
ಪುರಂದರ – ಇಂದ್ರ
ಪುರುವನುರುಪಿ ಬಂದ – ತ್ರಿಪುರನಾಶಮಾಡಿ ಬಂದ
ಪುರರಿಪು – ಶಿವ
ಪುರುಹೊತ – ಇಂದ್ರ
ಪುಷ್ಪುರ – ತ್ರಿಪುರ
ಪುಲ್ಲು – ಹುಲ್ಲು
ಪುಸರಳು – ರಾಮನ ಹೂಬಾಣ
ಪೂಗ – ಅಡಿಕೆಮರ
ಪೊಗರ್ – ಕಾಂತಿ

ಪೊಡವಿ ಪಾಲಕ – ಶ್ರೀ ಹರಿ
ಪೊಮ್ಮರಿಮೃಗ – ಚಮರಿಮೃಗ
ಪೊಳ್ವೆಕಾಯ – ಮೀನ
ಪೋತತನ – ಹುಡುಗಾಟ
ಪೋಪೆನೆ – ಹೋಗುತ್ತೇನೆ
ಪೋಪ – ಪೋಷಕ
ಪ್ರಸಂಗ – ಮಾತುಕತೆ
ಪ್ರಜ್ಞಾ – ಜ್ಞಾನ
ಪ್ರಥಮಯುಗ – ತ್ರೇತಾಯುಗ
ಪ್ರಭಂಜನ – ವಾಯು
ಪ್ರೇರಕರು – ಮದಸ್ಸು, ಅಹಂಕಾರ ಬುದ್ಧಿ
ಪ್ರಶಸ್ತಿ – ತೃಪ್ತಿಕರ
ಪಂಚರುವವರು – ಪಂಚೇಂದ್ರಿಯಗಳು
ಪಂಜು – ದೇವರಿಗೆ
ಪಂಟಿಸುತ್ತ – ಕೆಲಸಯಿಲ್ಲದೆ ಹರಟೆ ಹೊಡೆಯುತ್ತ
ಪಂತಿದೇರ – ದಶರಥ
ಪಂಥಗಾರಿಕೆ – ಪಣತೊಡುವುದು
ಪಂಟಿಸು – ಸುತ್ತುವರೆದು
ಪಾಂಡನಂದನ – ಧರ್ಮರಾಜ
ಪಾಲಿಸು – ಧೂಳಿ
ಪುಂಜ – ಸಮೂಹ
ಪುಂಡರೀಕ – ಕಮಲ

## ಬ

ಬರೆಹ – ಹಣೆಬರಹ
ಬಲಿಯ ನೀನು – ವಾಮನ ಅವತಾರ
ಬಲಿ ಇಡು – ಬಲಿಕೊಡು
ಬಲ್ಲಿದ ನಿಂತ – ಬೌದ್ಧಾವತಾರ
ಬಲ್ಲಿದ – ಬಲವಂತ, ಶ್ರೇಷ್ಠ
ಬಲ್ಲಿದತನ – ಗಟ್ಟಿತನ

| | |
|---|---|
| ಬವಣೆ | – ಕಷ್ಟ |
| ಬಳಲಿದ | – ಬಾಡಿದ |
| ಬಹಿರಾವಣ | – ಬ್ರಹ್ಮಾಂಡದ |
| ಬಾತೆ | – ಬಾಳ್ವೆ |
| ಬಾಲಬ್ರಾಹ್ಮಣ | – ವಾಮನ |
| ಬಾಲುವರಿ | – ಹಂಬಲಿಸಿ ಬೇಡಿಕೊ |
| ಬಾಳೆ | – ಬಾಳ್ವೆ |
| ಬಿಕನಾಸಿ | – ತಿರಿದು ಕೂಳು ತಿನ್ನುವವ |
| ಬಿಕ್ಕುದಿ | – ಕಿರುಕುಳ ದೇವತೆಗಳು |
| ಬಿತ್ತು | – ಬೀಜ |
| ಬಿನ್ನಣ | – ಜಾಣತನ |
| ಬಿರಿದು ಬಿಂದು | – ಉಬ್ಬಿ ಉಬ್ಬಿ |
| ಬಿರಿಬಿರಿದು ಬಿಚ್ಚುವ | – ಹಿಗ್ಗಿ ಹಿಗ್ಗಿ ಹಿರೇಕಾಯಿ |
| ಬಿಸಿಲ ಹಣ್ಣು | – ಬಿಸಿಲಿನ ತಾಪ |
| ಬಿಂಬ | – ಮೂರ್ತಿ |
| ಬಿಂಬೆ | – ಚಲುವೆ |
| ಬೀರ | – ಕುರುಬರ ದೇವತೆ |
| ಬೇಸೂರಿಗೆ | – ಒಂದು ಜಾತಿಯ ಹೋಳಿಗೆ |
| ಬೀಳುಗೊಡು | – ಕಾಲಕಳೆ |
| ಬಕ್ಕಿಟ್ಟುರಾಡಿ | – ಮುಸಲ್ಮಾನರ ಪರಂಪರೆಗೆ ಸೇರಿದ ಹಬ್ಬ |
| ಬಗ್ಗೆಯ ಹೊಯ್ಯು | – ಮಣ್ಣನ್ನು ಹೊಯ್ಯು |
| ಬೆಟ್ಟವೆತ್ತಿದ ಕೈಗೆ | – ಗೋವರ್ಧನೋದ್ಧಾರ |
| ಬೆಟ್ಟದೊಡೆಯ | – ವೆಂಕಟೇಶ ಶ್ರೀ ಹರಿ |
| ಬೇಟೆ | – ವಿರಹ |
| ಬೇತಾಳ | – ಪಿಶಾಚಿ |
| ಬೆತ್ತಹಿಡಿ | – ದಾಸದೀಕ್ಷೆವಹಿಸು |
| ಬೆನ್ನಕಲ್ಲಾಗಿದೆ | – ಕೂರ್ಮವತಾರ |
| ಬೆನ್ನತು | – ಆಶ್ರಯ ಕೊಟ್ಟು |
| ಬೆರೆವವರಾಗಿ | – ಮೈಗೂಡಿಸಿಕೊಂಡು |
| ಬೆಂಬಿಡದೆ | – ಬೆನ್ನು ಹತ್ತಿ |
| ಬೇಹಾರ | – ವ್ಯವಹಾರ |
| ಬೊಬ್ಬುಳಿ | – ಗುಳ್ಳೆ |

## ಭ

| | |
|---|---|
| ಭದ್ದ | – ಮಿತವಾದ |
| ಬದ್ದವಶ | – ಕಟ್ಟುನಿಟ್ಟಿಗೆ ಬಳಗಾದ |
| ಭಾರ್ಗವ | – ಪರಶುರಾಮ |
| ಭವಭಂಜನ | – ಸಂಸಾರವನ್ನು ನಾಶಮಾಡುವವ |
| ಭವಭಂಜನ | – ಜನ್ಮಗಳನ್ನು ಕಳೆಯುವವ |
| ಭಲ್ಲೂಕ | – ಕರಡಿ |
| ಭಾಸುರಾಂಗ | – ಪ್ರಕಾಶಮಾನವಾದ ದೇಹ ಉಳ್ಳವನು |
| ಭಾವ | – ಭಕ್ತಿಯ ರಹಸ್ಯ |
| ಭೀಷ್ಮಪಂಚಕ | – ಕಾರ್ತಿಕ ಶುದ್ಧ ಏಕಾದಶಿಯಿಂದ ಪೌರ್ಣಿಮೆಯವರೆಗೆ ಉಪವಾಸವಿದ್ದು ಮಾಡುವ ವ್ರತ |
| ಭುಜಗೇಂದ್ರ | – ಶ್ರೇಷ್ಠ |
| ಭೂಪಾರ | – ಭೂಮಂಡಲ |
| ಭೂಮಿಜಾ | – ಸೀತಾದೇವಿ |
| ಭೂಸುರ | – ಬ್ರಹ್ಮಣ |
| ಭೂ | – ಹುಬ್ಬು |

ಭೇದಿಸಿದವನ ನಾಸಿಕ– ವರಹದೇವನ ಮೂಗು
ಭೋಗ್ಯರು – ಸುಖಿಗಳು
ಭೈರವ – ಶಿವನು
ಭಂಗೆ – ಅಪಮಾನ
ಭಂಡು – ಚೇಷ್ಟೆಯಿಂದ ಸಾಕು ಸಾಕೆನಿಸುವುದು
ಭಂಡುದಾವತಿ – ಅವಿವೇಕದ ಕ್ರಮ

## ಮ

ಮತ್ಸ್ಯ – ಮೀನು
ಮತಿಬೇಡಿದ – ಸೃಷ್ಟಿಯ ಪೂರ್ವದಲ್ಲಿ
ಮದಕರಿ – ಗಜೇಂದ್ರ
ಮದಗಜನೆ – ಹೆಂಡತಿ
ಮದ್ದು – ವಿಷ
ಮದ್ದುಮಾಡು – ಮರುಳುಮಾಡು
ಮದ್ದು – ಔಷಧಿ, ಉಪಾಯ
ಮದುಕರ – ಗುಂಗೀಹುಳ, ಭೃಂಗ
ಮನವೆರಸಿ – ಪರಚಿತ್ತದಿಂದ
ಮನೆ – ಸಮುದ್ರ
ಮಮ್ಮು – ಅನ್ನ
ಮಾಯೆ – ಅಜ್ಞಾನ
ಮಯೂರ – ನವಿಲು
ಮರಳ್ – ಪಿಶಾಚಿ, ಭೂತ
ಮರುತಾಶ್ರಯ – ಶ್ರೀಹರಿ
ಮರುಟನಂತರ್ಗತ – ವಾಯುದೇವರಲ್ಲಿ
ಮರೆಯ – ಗೊತ್ತಿಲ್ಲದ
ಮಲಭಾಂಡಿ – ಆಸೆ
ಮಲಭಾಂಡಿ – ಹೊಲಸಿನ ಕ್ರಿಯೆ
ಮಲಕಿನ ತಳುಕು – ವಗ್ಗದ ತೊಡರು
ಮಲೆ – ಗುಡ್ಡ
ಮಲೆವರ – ಎದುರಿಸುವವರ
ಮಲೆಮರೆ – ಬುದ್ಧಿಗೆಡು
ಮಸ್ಕೈರಿ – ಸಂನ್ಯಾಸಿ
ಮಸಕೆರೆ – ಪಿಶಾಚ
ಮಹಾಸತಿ – ಭೂದೇವಿ
ಮಡಕೆದರಿಕೊಂಡು– ರಕ್ಕಸತನದಿಂದ
ಮಟ್ಟೆ – ಮೆಟ್ಟಿಲು
ಮಣಿಯ – ಸರ
ಮಂದರ – ಒಂದು ಪರ್ವತದ ಹೆಸರು
ಮಸ್ತಕ
ಮಹಿಷಾಸುರ – ತಲೆ,
ಮರ್ದಿನಿ – ದುರ್ಗಾ ದೇವತೆ
ಮಾ – ಲಕ್ಷ್ಮೀ
ಮಾರ್ದುಲೆ – ವಿರೋಧಿಸು
ಮಾನ – ಆದರ
ಮಾನ್ಯ – ಮನ್ನೆಯರು
ಮಾಯಾವತಿ – ಹರಿದ್ವಾರ ಅಥವ ಗಂಗಾಧರ
ಮಾರರ ಮಾರ್ಗ – ತ್ರಿಗುಣಗಳ ದಾರಿ
ಮಾರಿ – ಮೃತ್ಯುದೇವತೆ
ಮಾರಿ – ಮೃತ್ಯು
ಮಾರುಮಲಕು – ಹೆಚ್ಚು ಕಡಿಮೆ ಮಾಡು
ಮಾವನು – ವಿಚಾರ
ಮಿನುಗು – ಜಾಗೃತವಾಗಿರು
ಮೀಸಲಳಿಯದ
ಪದವಿ – ಮುಕ್ತಿ
ಮುಕ್ಕಮಾರಿ – ಒಂದು ಜಾತಿಯ ದೆವ್ವ
ಮುಕ್ತ – ಮತ್ತು
ಮುಕ್ತು – ಬಿಡುಗಡೆ

## ರ

| | |
|---|---|
| ರಚ್ಚೆ | – ಗಲಾಟೆಯ, ಹಟಮಾರಿಯ |
| ರಚ್ಚೆ | – ಜಗಳಾಟ, ರಂಬಾಟ |
| ರಜನಿ | – ರಾತ್ರಿ |
| ರಜತ | – ಬೆಳ್ಳಿ |
| ರಂಜಿತ | – ಮೋಹಕ |
| ರತಿಪತಿ | – ಕಾಮ |
| ರಥಂಗಪಾಣಿ | – ಚಕ್ರಪಾಣಿ |
| ರಪವಿಸ್ತಾರದ | – ಸುಖಾನುಭವದ ಬಗೆಯನ್ನು ಬಲ್ಲವ |
| ರವ | – ದನಿ |
| ರವಿಜ | – ಕರ್ಣ |
| ರಸವಸ್ತು | – ಎಣ್ಣೆ |
| ರಸಾತಳ | – ಅಂಧೋಲೋಕಗಳಲ್ಲಿ ಒಂದು |
| ರಕ್ಷೆ | – ಅಂಗಾರ |
| ರಾಗಮಾಡು | – ಬೊಗಳು |
| ರಾತಿಯವರ್ಣನೆ ಮಣೆ | – ರಾತಿಯ ಮಣೆ |
| ರಾಮಂಕೆ | – ನಾಣ್ಯದ ಹೆಸರು |
| ರಾರಾಶಿದೈವ | – ದೇವರು |
| ರೀತಿ | – ಮಾನ ಮರ್ಯಾದೆ |
| ರುಕ್ಮಿಣಿ ದೇವಿ | – ಭೀಷ್ಮಕರಾಜನ ಮಗಳು |
| ರುಚಿ | – ಬೆಳಕು |
| ರುವಿ | – ಕಾಸು |
| ರುಳಿ | – ಸರಪಣಿ |
| ರೊಕ್ಕ | – ಹಣ (ಕ್ರಯ) |
| ರೋಹಾರ | – ಶಿಲ್ಪದ ಆಕೃತಿ |

## ಲ

| | |
|---|---|
| ಲಲಿತ | – ಸುಂದರವಾದ |
| ಲಂಕೆ | – ಸಿಂಹಳದ್ವೀಪ |
| ಲಂಗೋಲೆ | – ಪತ್ರಿಕಾ |
| ಲಯ | – ಸಾವು |
| ಲಕ್ಷ್ಮೀಪತಿ | – ವಿಷ್ಣು |
| ಲೀಲೆ | – ಆನಂದ |
| ಲೆಂಕ | – ಸೇವಕ |
| ಲೋಳಲೊಟ್ಟೆ | – ನಿಃಸಾರ |
| ಲೋಕವ ತಾಳ್ದವ | – ಆದಿಕೂರ್ಮನ |
| ಲೋಲ | – ಚಂಚಲ |

## ವ

| | |
|---|---|
| ವ್ಯಂಜನ | – ಬೀಸಣಿಕೆ |
| ವಜ್ರಾಂಕಿತ | – ಅಚಲ, ದೃಢ |
| ವರ್ತಿಸು | – ಅನುಸರಿಸು |
| ವತ್ತ | – ಕರು |
| ವತ್ಸ | – ಕರು, ಮಗು, ಚಿಹ್ನೆ |
| ವಟವಟ ಮಾತು | – ವ್ಯರ್ಥ ಮಾತು |
| ವಣಾಂಕ | – ಚಂದ್ರ |
| ವನವಾಸಿ | – ವನದಲ್ಲಿರುವ ತಪಸ್ವಿ |
| ವನವಾಸ | – ರಾಮಾವತಾರ |
| ವನಧಿ ನಿರೋಧಿ | – ಸಮುದ್ರವನ್ನು ಸೇತುವಿನಿಂದ ಬಂಧಿಸಿದವ |
| ವರ್ಮ | – ಗುಟ್ಟು, ಕರ್ಮ, ಕಾರ್ಯ |
| ವೃತಗೆಟ್ಟು | – ಬತಿಗೆಟ್ಟು |
| ವರಕರ | – ಶ್ರೇಷ್ಠವಾದ ಖಡ್ಗ |
| ವರುಷ | – ವಯಸ್ಸು |

ವಸುಮತಿ – ಭೂಮಿ
ವಾತಭಕ್ಷಕರು – ಹಾವುಗಳು
ವಾರ್ಧ – ಮುಪ್ಪು
ವಾರ್ಧಕ್ಯ ಮದ – ಮುದಿಹುಚ್ಚು
ವಂದ್ಯ ಸ್ತುತ್ರಾಮ – ಇಂದ್ರನಿಂದ ನಮಸ್ಕರಿಸಿಕೊಳ್ಳುವವ
ವಾಣೀಪತಿ – ಬ್ರಹ್ಮ
ವಾಯ್ದುಟ್ಟ – ಕಾಲಿನ ಆಭರಣ
ವಾಯುಸುತ – ಭೀಮಸೇನ
ವಾರಿಧಾರೆ – ಕಣ್ಣೀರು
ವಾರಾಸಿ – ಸಮುದ್ರ
ವಾಸ – ಬಟ್ಟೆ
ವಾಹನ ತುರಂಗ – ಕಲ್ಕ್ಯವತಾರ
ವಿಕಳ – ಚಿಂತೆ
ವಿಗಡೆ – ದುಃಖಾರ್ತೆ
ವಿಜಯ ಸತಿ – ದ್ರೌಪದಿ
ವಿತತ – ಎಲ್ಲೆಲ್ಲಿಯೂ ವ್ಯಾಪಿಸಿದ
ವಿತ್ತ – ದ್ರವ
ವಿಧಾತ – ಬ್ರಹ್ಮ
ವಿಧಾತೃ – ಬ್ರಹ್ಮಂ ಮುಂ
ವಿಧಿಜನಕ – ಬ್ರಹ್ಮನ ತಂದೆ
ವಿನಿಯೋಗ – ಊಳಿಗದವರು
ವಿನುತ – ಸ್ತುತಿಸಲ್ಪಟ್ಟ
ವಿನೋದಿ – ಆಟಗಾರ, ಲೀಲಾಪುರುಷ
ವಿಪರೀತ – ವಿರುದ್ಧ, ವೈಚಿತ್ರ
ವಿಪ್ರವರ – ಅಜಾಮಿಳ
ವಿಷ್ಣುಪಾದ – ಪಿತೃಗಳಿಗಾಗಿ ಪಿಂಡ
ವಿಹಿತ – ವಿಚಿತವಾದ
ವಿಷವರು – ದುರ್ಜನರು
ವಿಷಧಿ – ಜಲಧಿ
ವಿಷ್ಣ –ವ್ಯಾಪಕ
ವಿಜಯ – ಅರ್ಜುನ
ವೀಸ – ಚಿಕ್ಕನಾಣ್ಯ
ವೇದಗರ್ಭ – ಬ್ರಹ್ಮ
ವೇದವೇದ್ಯ – ವೇದಗಳಿಂದ ಪೂಜಿತ
ವೇದಾಂತ – ಉಪನಿಷತ್ತುಗಳು
ವೇಲಾಪುರ – ಬೇಲೂರು
ವೈಷ್ಣವ – ವಿಷ್ಣು
ವೈಷ್ಣವ ಕೆಲವರು – ಶುದ್ಧ ಭಾಗವತರು
ವೈಹಾಳಿ – ಕುದುರೆಯ ಏರಾಟ, ಕುದುರೆಯ ಪಂದ್ಯ

## ಶ

ಶಕ್ರ – ಇಂದ್ರ
ಶಕುತಪರ – ಸಮರ್ಥವಾದ ಪರಲೋಕ
ಶಚಿ – ಇಂದ್ರನ ಹೆಂಡತಿ
ಶತಸಹಸ್ರ – ಲಕ್ಷ
ಶಮಿಮಿತ್ರ – ಬನ್ನಿಯ ಎಲೆ
ಶರಧಿಯೆ ಒಬ್ಬ – ಅಂಗದ
ಶರಣ್ಯ – ಆಶ್ರಯ ಕೊಡುವವ
ಶಶಿ – ವಿಹುದು
ಶೃಂಗ – ಕೋಡು ಶಿಖರ
ಶಾಕ – ಪಲ್ಲೆ
ಶಾಲ್ಯನ್ನ – ಸಣ್ಣಕ್ಕಿಯ ಅನ್ನ
ಶಾಸ್ತ್ರ – ಪಟಶಾಸ್ತ್ರಗಳು
ಶ್ಯಾಲ ಕೈವರಿ – ರುಕ್ಮಿಯ ವೈರಿ
ಶಿಲೆಶಾಪವಡೆದಿರಲು– ಗೌತಮನ ಶಾಪದಿಂದ ಅಹಲ್ಯ

ಶಿಂಧುಶಯನ – ಕ್ಷೀರಸಾಗರದ ಶಾಯಿ
ಶೀಲ – ಸಾಮರ್ಥ್ಯ
ಶೀಲದ ಕೆಲಸ – ಶುಚಿಯಾದ ಕಾರ್ಯ
ಶ್ರೀಕಾರದ ಕರ್ಣಗಳು – ಶ್ರೀ ಅಕ್ಷರದಂತೆ ಇರುವ ಕಿವಿಗಳು
ಶ್ರುತಿಹೀನ – ಕಿವಿಯಿಲ್ಲದ
ಶೀತಕರ – ಚಂದ್ರ, ಶೈತ್ಯಕಾರಕ
ಶೇಷಗಿರಿ – ತಿರುಪತಿ

## ಸ

ಸಟೆ – ಸುಳ್ಳು
ಸಟ್ಟುಗ – ಹುಟ್ಟು
ಸಂಚಿತ – ಕೂಡಿಟ್ಟ
ಸತುವ – ಸತ್ವ
ಸತುಶಾಸ್ತ್ರ – ದ್ವೈತಶಾಸ್ತ್ರ
ಸಮಿಧೆ – ಯಜ್ಞಕ್ಕಾಗಿ ಉರುವಲು
ಸರಿಹೊತ್ತು – ಸರಿರಾತ್ರಿ
ಸರ್ವತ್ರ – ಸಂಸಾರದಲ್ಲಿಯೂ, ಮುಕ್ತಿಯಲ್ಲಿಯೂ
ಸರ್ವಾನುಗ – ಎಲ್ಲರಿಗೂ ಬೆಂಬಲವಾಗಿರುವವ
ಸುಕಾರ – ಪ್ರತ್ಯಕ್ಷ ಮೂರ್ತಿಗಳು
ಸಾಗರದ ಮಗಳು – ರಮಾದೇವಿ
ಸಾತ್ವದ – ಕೃಷ್ಣ
ಸಾಮಜ ಪೋಷಕ – ಗಜೇಂದ್ರನಿಗೆ ಸಹಾಯ ಮಾಡಿದ ಹರಿ
ಸಾಮಜ – ಆನೆ
ಸಾಯುಜ್ಯ – ಪರಮಾತ್ಮನಲ್ಲಿ ಐಕ್ಯವನ್ನು ಹೊಂದುವುದು
ಸಾರ – ತಿರುಳು
ಸಾರೂಪ್ಯ – ತನ್ನಂತೆಯೇ ಸ್ವರೂಪವಿರುವ ಮುಕ್ತಿ
ಸಾಲುಮರ – ನೆರಳಿಗಾಗಿ ಮರ ನೆಡುವುದು
ಸಾಕ್ಷೀಭೂತ – ಅನುಭವದಿಂದ ಕಂಡುಕೊಂಡ
ಸಿಕ್ಕ – ತೊಡಕು
ಸಿಲುಕು – ತೊಡಕು
ಸಿರಿರಂಗರ ಸಿರಿಮುಡಿಯರ ವಿಷ್ಣು – ಲಕ್ಷ್ಮೀನಾರಾಯಣರನ್ನು – ರಾಮ
ಸೀರಿಯ ಕಳೆದಿಟ್ಟು – ಹುಟ್ಟುಡುಗೆ ಯುಟ್ಟುಕೊಂಡು
ಸೀಳು – ನೂಲನ್ನು ಹಾಸು ಹೊಯ್ದು ಮಾಡಿದ ಎಳೆಗಳ ಸಮೂಹ
ಸುಕೃತ್ಯ – ಪುಣ್ಯ
ಸುಪ್ಪತ್ತಿಗೆ – ಮೆತ್ತನೆಯ ಹಾಸಿಗೆ
ಸುಮನ – ಹೂ
ಸುಮನಸಾಂದ್ರ ತನೂಭವ – ಇಂದ್ರನ ಮಗ
ಸುಮ್ಮಾನ – ಸಂತೋಷ
ಸುಮ್ಮಾನೆ – ಒಳ್ಳೇ ಮನಸ್ಸು, ತೃಪ್ತಿ
ಸುರಗಿರಿ – ಮೇರು
ಸುಕ್ಷಿತಿ – ಉಸಿರಿನಿಂದ ಸ್ವರ ಹೊರಡುವ ವಾದ್ಯ

ಸೂಪ – ತೊವ್ವೆ
ಸೊಗ – ಸುಖ
ಸೊಡರು – ದೀಪ
ಸೊಲುಗೆ – ಚೆಲುವೆ
ಸೋಹರಿ – ಅಹಂಬ್ರಹ್ಮ
ಸೈಲಿ – ಒಂದು ಕ್ಷುದ್ರ ದೇವತೆ
ಸ್ವರ್ಣಸ್ತೇಯ – ಬಂಗಾರಗಳು
ಸ್ವರ್ನದಿ – ಗಂಗಾನದಿ
ಸ್ವಪನ – ಸ್ವಪ್ನ
ಸ್ವರ ಸಪ್ತಕಗಳು – ಸಪ್ತಸ್ವರಗಳು
ಸ್ವಾದುಜಲ – ಸಿಹಿನೀರು
ಸ್ವಾಮ್ಯ – ಅಧಿಕಾರ
ಸ್ಥುರಿತ – ಒಪ್ಪುವ
ಸ್ತನಪಾನ – ಮೊಲೆಯುಣ್ಣಿಸುವುದು
ಸ್ಥಲದ – ತುಳಸಿ ಇರುವ ಸ್ಥಳ, ವೃಂದಾವನ
ಸ್ಥಿರ ಯೋಗಾಸನ– ಸಿದ್ಧಾಸನ

## ಹ

ಹಗರಣ – ನಾನಾ ಬಗೆಯ ಹುಡುಗಾಟ
ಹೃತ – ಕೊಂದವ
ಹತ್ತನೂರು ನಾಮ– ಸಹಸ್ರನಾಮ
ಹತ್ತುಮಂದಿ – ದಶೇಂದ್ರಿಯಗಳು
ಹದನು – ರುಚಿ
ಹದುಳಹೋಗಿ – ಶಕ್ತಿಗುಂದಿ
ಹಮ್ಮು – ಅಹಂಕಾರದ ಮಾತು
ಹಯ್ಯಾಸ – ಹಯಗ್ರೀವ
ಹರಿ – ಸಿಂಹ
ಹರಿಯದ – ಅಕ್ಷಯವಾದ
ಹರಿಂಕಯ – ಇಂದ್ರ
ಹರಿಯಮರಿ – ಸಿಂಹದ ಮರಿ
ಹರಿವಾಸರ – ಏಕಾದಶಿ
ಹರಿಣಾಂಕ – ಚಂದ್ರ
ಹರಿಸರ್ವಾಂಗೆ – ತನ್ನ ಸರ್ವಾಂಗದಲ್ಲಿಯೂ ಹರಿಮಯಳಾದವಳು
ಹಲಕಾಲ – ಜನ್ಮಜನ್ಮಾಂತರ
ಹವಣ – ಅಳತೆ, ಶಕ್ತಿ
ಹಸ್ತಕೆ ಒಳಗಾಗು – ವಶವಾಗು
ಹಾಲಿಕ – ಬಂಗಾರ
ಹಾವನ – ಹವನ
ಹಿಡಿತಿಂಬನ – ಗರುಡನ
ಹಿಡಿಬಿಟ್ಟಿ ಮಾಡಿ – ದುರ್ಲಕ್ಷಿಸಿ
ಹೆಡ್ಡೆ – ರಸವಿಲ್ಲದಂತಹ ಜೇನುಹುಟ್ಟು
ಹೆಟ್ಟು – ಒಣಪ್ರತಿಷ್ಠೆ
ಹೇಯ – ಅಸಭ್ಯ
ಹೆಸರು – ಮೊಲತುಳು
ಹೊಕ್ಕು ಒಳಗೆ – ವಿಶೇಷ ಗುರುತು
ಹೋಗೆ – ಹೋಗನು, ಭಾರತೀಪತಿ, ವಾಯುದೇವರು
ಹೊತ್ತಿಟ್ಟು – ಹೊತ್ತಿಸಿದ
ಹೊದ್ದಿರುವ – ಮುಸುಕಿದ
ಹೊಡೆ ಮಗಚು – ಹೊರಳಿಬೀಳು
ಹೊರಾಂಗಣ – ಆವರಣ
ಹಂಗು – ಋಣ
ಹಂಬು – ಬಳ್ಳಿ
ಹಂಸ – ಜೀವಾತ್ಮ
ಹಂಸವಾಹನ – ಬ್ರಹ್ಮ
ಹೆಂದೆ – ಕಡಿಮೆ ಕರಗಲಿ
ಹುಂಜ – ಉಳಿಗಳ ಸಮೂಹ

ಹೆಂಟೆ – ಕೆಲಸಕ್ಕೆ ಬಾರದ ವಸ್ತು

ಹೊಂತಕಾರಿ – ಹಂತ ತಿಳಿಯಗೊಡದವ, ಪಾಢಗಾರ

ಹೊಂಚಕಾರಿ – ಧೂರ್ತ

ಹೊಂಬಟ್ಟೆವನು – ಕಮು

## ಕ್ಷ

ಕ್ಷಣಚಿತ್ತ – ಒಂದು ವರ್ಷವಾದರೂ ಧೃಢ ಮನಸ್ಸಿಲ್ಲದ

ಕ್ಷರ – ನಾಶಹೊಂದತಕ್ಕ

ಕ್ಷೀರಸಾಗರ – ಸಪ್ತಸಮುದ್ರಗಳಲ್ಲಿ ಒಂದು

# ಅನುಬಂಧ–೨

## ಪಾರಿಭಾಷಿಕ ಪದಗಳ ಅರ್ಥ

**ಅವಿದ್ಯೆಯ ಸಪ್ತ ಚರಣಗಳು :** ೧. ರಜಸ್ಸು ೨. ಅಸ್ಮಿತಾ ೩. ತಮಸ್ಸು ೪. ಮೋಹ ೫. ಮಹಾದೇವಿ ೬. ತಾಮಿಸ್ರ ೭. ಅಂಧತಾಮಿಸ್ರ

**ಅಷ್ಟಭೋಗಗಳು :** ೧. ಗೃಹ ೨. ಶಯ್ಯ ೩. ವಸ್ತು ೪. ಆಭರಣ ೫. ಸ್ತ್ರೀ ೬. ಪುಷ್ಪ ೭. ಗಂಧ ೮. ತಾಂಬೂಲ

**ಅಷ್ಟ ಮದಗಳು :** ೧. ಕುಲಮದ ೨.ಧನಮದ ೩. ವಿದ್ಯಾಮದ ೪. ರೂಪಮದ ೫. ಅರ್ಥಮದ ೬. ಯೌವನ ಮದ ೭. ಅನ್ನದ ಮದ ೮. ಬಲದ ಮದ

**ಅಷ್ಟ ಮಹಾಮಂತ್ರಗಳು :** ೧. ಪ್ರಣವ ೨. ಮಾತೃಕ ೩. ಅಷ್ಟಾಕ್ಷರ ೪. ವ್ಯಾಹೃತಿ ೫. ದ್ವಾದಶಾಕ್ಷರ ೬. ಗಾಯತ್ರಿ ೭. ಪುರುಷ ಸೂಕ್ತ ೮. ವಿಷ್ಣುಮಂತ್ರ.

**ಅಷ್ಟ ಮಹಿಷಿಯರು :** ೧. ಧನ ೨. ಧಾನ್ಯ ೩. ವಾಹನ ೪. ವಾಸ್ತು ೫. ಪುತ್ರ ೬. ಮಿತ್ರ ೭. ಕಳತ್ರ ೮. ಭೃತ್ಯ.

**ಆತ್ಮನ ಎಂಟು ಗುಣಗಳು :** ೧.ಅಪಹತ ಪಾಪ್ಮಾ ೨. ವಿರಜ ೩. ವಿಮೃತ್ಯು ೪. ವಿಶೋಕ ೫. ವಿಜಘತ್ಸ ೬. ಅಪಿಪಾಸ ೭. ಸತ್ಯಕಾವ ೮. ಸತ್ಯ ಸಂಕಲ್ಪ.

**ಆರು ತೆರೆ :** ಷಡ್ರಿಪುಗಳು – ಕಾಮ, ಕ್ರೋಧ, ಲೋಭ, ಮದ, ಮತ್ಸರ, ಮೋಹ.

**ಆರು ಮಂದಿ ಕಳ್ಳರು :** (ಅರಿಷಡ್ವರ್ಗಗಳು) ೧. ಕಾಮ ೨. ಕ್ರೋಧ ೩. ಲೋಭ ೪. ಮೋಹ ೫.ಮದ ೬. ಮತ್ಸರ

**ಇಪ್ಪತ್ತೊಂದು ಕೋಟಿ ನಾಯಕ ನರಕ :** ತಾಮಿಶ್ರ, ಅಂಧ ತಾಮಿಶ್ರ, ರೌರವ, ಮಹಾರೌರವ, ಕುಂಭೀಪಾಕ, ಕಾಲಸೂತ್ರ, ಅಸಿಪತ್ರ ವನ, ಸೂಕರ ಮುಖ, ಅಂಧ ಕೂಪ, ಕ್ರಿಮಿಭೋಜನ, ಸಂದಂಶ, ತಪ್ತಸೂರ್ಯ, ವಜ್ರಕಂಟಕ, ಶಾಲ್ಮಲೀ, ಪುಂರೋಧ, ಪ್ರಾಣರೋಧ, ವಿಶಸನ, ಲಾಲಾಭಕ್ಷ, ಸಾತಮೇಯದ, ಆವೀಚೀ, ಆಯಃ ಪಾನಂ.

**ಎಂಬತ್ತು ನಾಲ್ಕು ಲಕ್ಷ ಯೋನಿಗಳು :** ೧. ವೃಕ್ಷಾದಿಯೋನಿ ಇಪ್ಪತ್ತು ಲಕ್ಷ, ೨. ಅಂಡಜ–ಸ್ವೇದಜ ಯೋನಿ ಹತ್ತು ಲಕ್ಷ, ೩. ಕ್ರಿಮಿಯೋನಿ ಹನ್ನೊಂದು ಲಕ್ಷ, ೪. ಜಲಜಯೋನಿ ಒಂಭತ್ತು ಲಕ್ಷ, ೫. ಪಶ್ವಾದಿ ಯೋನಿ ಮೂವತ್ತು ಲಕ್ಷ, ೬. ಮನುಷ್ಯಯೋನಿ ನಾಲ್ಕು ಲಕ್ಷ.

**ಏಕೋತ್ತರ ಪಂಚಾಶತ್ ವರ್ಣ :** 'ಅ' ಕಾರದಿಂದ 'ಜ್ಞ' ಕಾರದ ವರೆಗಿನ ಅಕ್ಷರಗಳು, ಹದಿನೈದು ಸ್ವರಗಳು, ಇಪ್ಪತ್ತೈದು ವರ್ಗೀಯ ವ್ಯಂಜನಗಳು, ಹನ್ನೊಂದು ಅವರ್ಗೀಯ ವ್ಯಂಜನಗಳು, ಒಟ್ಟು ಐವತ್ತೊಂದು ವರ್ಣಗಳು.

**ಕಕ್ಷಗಳು :** ಶ್ರೀ ಮಧ್ವಾಚಾರ್ಯರು, ಪರಮಾತ್ಮನಿಂದ ಮೊದಲು ಮಾಡಿ ಮನುಷ್ಯರವರೆಗೆ ಅವರವರ ಗುಣಗಳಿಗನುಸಾರವಾಗಿ ಸ್ಥಾನ ಭೇದ ಗಳಿರುವುದನ್ನು ಪ್ರಾಚೀನ ಪ್ರಮಾಣಗಳಿಂದ ವಿವರಿಸಿದ್ದಾರೆ. ಇವುಗಳಿಗೆ ' ಕಕ್ಷಗಳು' ಎಂಬ ಪರಿಭಾಷೆಯಿದೆ. ಒಟ್ಟು ಮೂವತ್ತೆರಡು ಕಕ್ಷಗಳಿವೆ.

**ಕೃಷ್ಣನ ಅಷ್ಟಮಹಿಷಿಯರು :** ೧. ಸತ್ಯಭಾಮೆ ೨. ನೀಶಾ ೩. ಭದ್ರಾ ೪. ಕಾಳಿಂದಿ ೫. ಮಿತ್ರವಿಂದಾ ೬. ಲಕ್ಷಣ ೭. ಜಾಂಬವತಿ ೮. ರುಕ್ಮಿಣಿ. ಚತುರ್ ಯುಗಗಳು ೧. ಕೃತಯುಗ ೨. ತ್ರೇತಾಯುಗ ೩. ದ್ವಾಪರಯುಗ ೪. ಕಲಿಯುಗ

**ಚತುರ್ವಿಧ ಭಕ್ತಿ :** ೧. ಸಾಲೋಕ್ಯ ಭಕ್ತಿ ೨. ಸಾಮೀಪ್ಯ ಭಕ್ತಿ ೩. ಸಾರೂಪ್ಯ ಭಕ್ತಿ ೪. ಸಾಯುಜ್ಯ ಭಕ್ತಿ.

**ಚಾಂದ್ರಾಯಣ :** ಚಾತುರ್ಮಾಸ್ಯದ ಒಂದು ತಿಂಗಳಲ್ಲಿ ಪ್ರತಿಪದೆಯಿಂದ ಪೌರ್ಣಿಮೆಯವರೆಗೆ ದಿನಾಲು ಒಂದೊಂದು ತುತ್ತಿನಂತೆ ಏರಿಸುತ್ತ ವದ್ಯ ಪ್ರತಿಪದೆಯಿಂದ ಅಮವಾಸ್ಯೆಯವರೆಗೆ ದಿನಾಲು ಒಂದೊಂದು ತುತ್ತಿನಂತೆ ಇಳಿಸುತ್ತ ಬರುವ ಒಂದು ವ್ರತ. ಇದು ಚಂದ್ರನ ಕಲೆಗಳನ್ನು ಅವಲಂಬಿಸಿದ ವ್ರತವಾದುದರಿಂದ ಇದಕ್ಕೆ ಚಂದ್ರಾಯಣ ವ್ರತವೆಂಬ ಹೆಸರು.

**ಜಲ ದೇವರು :** ಹೆಣ್ಣುಮಕ್ಕಳು ಬಸಿರಿದ್ದಾಗ ಅಥವಾ ಹಡೆದ ಮೇಲೆ ಈ ಜಲದೇವರ ಪೂಜೆ ನಡೆಯುತ್ತದೆ.

**ತೀರ್ಥ ಕ್ಷೇತ್ರಗಳು :** ೧. ತಿರುಪತಿ ೨. ಕಂಚಿ ೩. ಶ್ರೀರಂಗ ೪. ಮನ್ನಾರು ಗುಡಿ ೫. ಅನಂತಶಯನ ೬. ಸೇತು ೭. ಶ್ರೀಮುಷ ೮. ಭದ್ರಾಚಲ ೯. ಕುಂಭಕೋಣ ೧೦. ಘಟಿಕಾಚ ೧೧. ಹಂಪಿ ೧೨. ಶ್ರೀರಂಗಪಟ್ಟಣ ೧೩. ಉಡುಪಿ ೧೪. ಮೇಲುಕೋಟೆ ೦೫. ಬೇಲೂರು ೧೬. ಮುಳೂರು ೧೭. ತೊರವೆ ೧೮. ನಾಗಮಂಗಲ ೧೯. ಗದಗ ೨೦. ಕೂಡಲಿ ಪುರ ೨೧. ಹೊಳೆಹೊನ್ನೂರು.

**ದಶಾವತಾರಗಳು :** ೧. ಮತ್ಸ್ಯಾವತಾರ ೨. ಕೂರ್ಮಾವತಾರ ೩. ವರಾಹಾವತಾರ ೪. ನರಸಿಂಹ ಅವತಾರ ೫. ವಾಮನ ಅವತಾರ ೬. ಜಮದಗ್ನಿ ಅವತಾರ

೭. ರಾಮಾವತಾರ ೮. ಕೃಷ್ಣಾವತಾರ ೯. ಬುದ್ಧ ಅವತಾರ ೧೦. ಕಲ್ಕಿ ಅವತಾರ

**ದಶೇಂದ್ರಿಯಗಳು :** ಪಂಚ ಕರ್ಮೇಂದ್ರಿಯಗಳು (ಕೈ, ಕಾಲು ಗುದ, ಉಪಸ್ಥ, ಬಾಯಿ) ಮತ್ತು ಪಂಚ ಜ್ಞಾನೇಂದ್ರಿಯಗಳು (ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ).

**ದ್ವಾದಶನಾಮ :** ಹೊಟ್ಟೆಯ ಮೇಲೆ ಮೂರು, ಎದೆಯ ಮೇಲೆ ಒಂದು, ಬಲಮೊಲೆಯ ಮೇಲೆ ಒಂದು, ರಟ್ಟೆಯ ಮೇಲೆ ಎರಡು, ಬೆನ್ನುಹುರಿಯ ಮೇಲೆ ಒಂದು, ಕೊರಳೊಳಗೆ ಮೂರು, ಹಣೆಯ ಮೇಲೆ ಒಂದು – ಹೀಗೆ ಹನ್ನೆರಡು ನಾಮಗಳು.

**ದೇವತಾ ತಾರತಮ್ಯ (ಅವರೋಹಣಕ್ರಮ) :** ೧. ಪರಮಾತ್ಮ ೨. ರಮಾದೇವಿ ೩. ಬ್ರಹ್ಮ – ವಾಯು ೪. ಸರಸ್ವತಿ – ಭಾರತಿ ೫. ಗರುಡ – ಅನಂತಶೇಷ – ರುದ್ರ ೬. ಆರು ದೇವಿಗಳು (ಜಾಂಬವತಿ, ಭದ್ರಾ, ನೀಲಾ, ಕಾಳಿಂದಿ, ಮಿತ್ರವಿಂದಾ, ಲಕ್ಷಣಾ) ೭. ಸೌಪರ್ಣಿ, ವಾರುಣಿ – ಅಪರ್ಣಾ ೮. ಇಂದ್ರ – ಕಾಮ ೯. ಪ್ರಾಣದೇವರು ೧೦. ಮನ್ವಾದಿಗಳು.

## ದೇವತೆಗಳ ಹೆಸರುಗಳು

(ತಾರತಮ್ಯ ಅವರೋಹಣ ಕ್ರಮವನ್ನನುಸರಿಸಿ)

೧. ಪರಮಾತ್ಮ, ಹರಿ, ವಿಷ್ಣು (ಸರ್ವೋತ್ತಮ, ಪುರುಷ

೨. ರಮಾದೇವಿ , ಮಹಾಲಕ್ಷ್ಮಿ (ಅವ್ಯಕ್ತತ್ವ, ಮೂಲ ಪ್ರಕೃತಿ)

೩. ಬ್ರಹ್ಮ ಮತ್ತು ವಾಯು (ಮಹತ್ತತ್ವ)

೪. ಸರಸ್ವತಿ ಅಥವಾ ಬ್ರಹ್ಮ ಪತ್ನಿ ಮತ್ತು ಭಾರತಿ ಅಥವಾ ವಾಯು ಪತ್ನಿ

೫. ಗರುಡ, ಶೇಷ ಮತ್ತು ರುದ್ರ (ಅಹಂಕಾರ ತತ್ವ) (ಮಹವವ್ಯಕ್ತ)

೬. ಕೃಷ್ಣನ ಷಣ್ಮಹಿಷಿಯರು :– ನೀಲಾ, ಭದ್ರಾ, ಮಿತ್ರವಿಂದಾ, ಕಾಳಿಂದೀ, ಲಕ್ಷಣಾ, ಜಾಂಬವತಿ

೭. ಸೌಪರ್ಣಿ ಅಥವಾ ಗರುಡ ಪತ್ನಿ, ವಾರುಣೀ ಅಥವಾ ಶೇಷ ಪತ್ನಿ ಮತ್ತು ಪಾರ್ವತಿ ಅಥವಾ ರುದ್ರ ಪತ್ನಿ

೮. ಇಂದ್ರ ಮತ್ತು ಕಾಮ (ಮನಸ್ತತ್ವ)

೯. ಅಹಂಕಾರಿಕ – ಪ್ರಾಣ (ತೈಜ ಸಾಹಂಕಾರ, ತ್ವಗಿಂದ್ರಿಯ)

೧೦. ದಕ್ಷ (ಘ್ರಾಣೇಂದ್ರಿಯ) ಅನಿರುದ್ಧ ಅಥವಾ ಕಾಮಸೂತ್ರ ರತ್ನ ಅಥವಾ ಕಾಮಸೂತ್ರ, ರತಿ ಅಥವಾ ಕಾಮ ಪತ್ನಿ, ಸ್ವಾಯಂಭುವಮನು (ಉಪಸ್ಥೇದ್ರಿಯ).

೧೧. ಪ್ರವಹ ವಾಯು (ವಾಯುತತ್ವ, ಭೂತವಾಯು)

೧೨. ಸೂರ್ಯ (ಚಕ್ಷುರಿಂದ್ರಿಯ), ಶತರೂಪ ಅಥವಾ ಸ್ವಾಯಂಭುವ, ಮನುಪತ್ನಿ, ಚಂದ್ರ (ಶ್ರೋತ್ರೇಂದ್ರಿಯ) ಮತ್ತು ಯಮ.

೧೩. ವರುಣ (ಅಪತತ್ತ್ವ), ರಸನೇಂದ್ರಿಯ

೧೪. ನಾರದ

೧೫. ಪ್ರಸೂತಿದೇವಿ, ಭೃಗು ಮತ್ತು ಪ್ರಧಾನಾಗ್ನಿ (ವಾಗಿಂದ್ರಿಯ, ತೇಜೋತತ್ತ್ವ)

೧೬. ಸಪ್ತರ್ಷಿಗಳು, ಪ್ರಹ್ಲಾದ ಮತ್ತು ವೈವಸ್ವತಮನು

೧೭. ಮಿತ್ರ, ಪ್ರವಹಿದೇವಿ ಮತ್ತು ತಾರಾ ಎಂಬಿಬ್ಬರು ಬೃಹಸ್ಪತಿ ಪತ್ನಿಯರು ಮತ್ತು ರಕ್ಷೋಧಿನಾಥನಾದ ನಿರ್ಋತಿ (ಪಾಯ ಇಂದ್ರಿಯ)

೧೮. ವಿಷ್ವಕ್ಸೇನ, ಅಶ್ವಿನಿ ದೇವತೆಗಳು (ಘಾಣೇಂದ್ರಿಯ) ಗಣಪತಿ (ಆಕಾಶತತ್ವ) ಕುಬೇರ ಮತ್ತು ಶತದೇವತೆಗಳು.

**ನದಿಗಳ ಹೆಸರುಗಳು :** ೧. ಕಾಳಿಂದಿ ೨. ಕೃಷ್ಣವೇಣಿ ೩. ತ್ರಿವೇಣಿ ೪. ಪಂಚಗಂಗೆ ೫. ಭಾಗೀರಥಿ ೬. ಗಂಗೆ ೭. ಯಮುನೆ

**ನವವಿಧ ಭಕ್ತಿ :** ೧. ಆರ್ತ ವೈರಾಗ್ಯ ೨. ಮುಮುಕ್ಷ ೩. ವ್ಯಾಕುಲ ೪. ಶಾಂತ ೫. ದಾಸ್ಯ ೬. ಸಖ್ಯ ೭. ವಾತ್ಸಲ್ಯ ೮. ಮಧುರ ೯. ಸಮರ್ಪಣ.

**ನವರಂಧ್ರಗಳು :** ಎರಡು ಕಣ್ಣು + ಎರಡು ಕಿವಿ + ಎರಡು ಮೂಗಿನ ಹೊರಳೆಗಳು + ಒಂದು ಬಾಯಿ + ಒಂದು ಗುದ + ಒಂದು ಉಪಸ್ಥ = ಒಂಬತ್ತು.

---

* ಕಂಸದಲ್ಲಿ ಅವರು ಪ್ರತಿನಿಧಿಸುವ ತತ್ವಗಳನ್ನು ಸೂಚಿಸಿದೆ.

**ನಾಲ್ಕು ಭ್ರಮೆಗಳು :** ೧. ಸ್ವಾತಂತ್ರ್ಯ ಭ್ರಮೆ ೨. ಐಕ್ಯ ಭ್ರಮೆ ೩. ಕರ್ತೃತ್ವ ಭ್ರಮೆ ೪.ಭೋಕ್ತೃತ್ವ ಭ್ರಮೆ.

**ನಾಲ್ಕು ಸಾಧನೆಗಳು :** ೧. ಹರಿಕಥಾ ಶ್ರವಣ ೨. ಮನನ ೩. ಧ್ಯಾನ ೪. ಭಕ್ತಿ

**ನುಡಿ ಎರಡಾಗು :** ಕೊಟ್ಟ ಮಾತಿಗೆ ತಪ್ಪು, ಸುಳ್ಳಾಡು.

**ನೂತನ ವೇಕಿನ್ನೂ :** ನೀನು ಇದನ್ನು ಅರಿಯದವನೇ ?

**ಪಂಚಕರಣಾರ್ಥಗಳು :** ೧. ರೂಪ ೨. ಶಬ್ದ ೩. ರಸ ೪. ಗಂಧ ೫. ಸ್ಪರ್ಶ.

**ಪಂಚಭೂತಗಳು :** ೧. ನೆಲ ೨. ನೀರು ೩. ಬೆಂಕಿ ೪. ಗಾಳಿ ೫. ಆಕಾಶ.

**ಪಂಚಭೇದಗಳು :** ೧. ಜೀವ – ಜೀವಕ್ಕೆ ಭೇದ ೨. ಜೀವ ಜಡಕ್ಕೆ ಭೇದ. ೩. ಜಡ – ಜಡಕ್ಕೆ ಭೇಧ ೪. ಜೀವ ಈಶರಿಗೆ ಭೇದ ೫. ಜಡ– ಈಶರಿಗೆ ಭೇದ.

**ಪಂಚಶಾಸ್ತ್ರಗಳು :** ೧. ಸಾಂಖ್ಯಶಾಸ್ತ್ರ ೨. ಯೋಗ ಶಾಸ್ತ್ರ ೩. ತರ್ಕ ಶಾಸ್ತ್ರ ೪. ವೈಶೇಷಿಕ ಶಾಸ್ತ್ರ ೫. ಪೂರ್ವ ಮೀಮಾಂಸಾ ಶಾಸ್ತ್ರ.

**ಪಂಚೇಂದ್ರಿಯಗಳು :** ೧. ಕಣ್ಣು ೨. ಕಿವಿ ೩. ಮೂಗು ೪. ನಾಲಗೆ ೫. ಚರ್ಮ.

**ಪರಿಪೂರ್ಣ :** ಪೂರ್ಣ ಮದಃ, ಪೂರ್ಣಮಿದಂ ಪೂರ್ಣಾತ್ ಪೂರ್ಣ ಮುದಿಚ್ಛತೆ, ಪೂರ್ಣಮೇವಾ ವಶಿಷ್ಯತೆ (ಈಶಾವಾಸ್ಯ)

**ಪಕ್ಷ ಪ್ರಾಯಶ್ಚಿತ್ತ :** ಹದಿನೈದು ದಿವಸಗಳಿಗೊಮ್ಮೆ ಮನದ ಶುದ್ಧೀಕರಣಕ್ಕಾಗಿ ಮಾಡುವ ವ್ರತ.

**ಪಾವನ :** ದೇವತೆಗಳ ಗುಡಿಗಳಿಗೆ ನಮಸ್ಕರಿಸುವಂತಹ ತಲೆ ಪಾವನ.

**ಪುರುಷಾರ್ಥಗಳು :** ೧. ಧರ್ಮ ೨. ಅರ್ಥ ೩. ಕಾಮ ೪. ಮೋಕ್ಷ.

**ಮೂರು ಸುತರು :** ತ್ರಿವಿಧ ತಾಪಗಳಿಗೆ ಮೂರು ಸುತರೆಂದು ಕರೆಯಲಾಗುತ್ತದೆ. ೧. ಆದಿಭೌತಿಕ ೨. ಆದ್ಯಾತ್ಮಿಕ ೩. ಆದಿ ದೈವಿಕ.

**ಮೇರು :** ಭೂಮಿಯ ಕೇಂದ್ರಸ್ಥಾನದಲ್ಲಿರುವ ಪೌರಾಣಿಕ ಪರ್ವತ. ಇದು ಸುವರ್ಣಮಯವಾಗಿರುವುದೆಂದೂ, ಇದರ ಸುತ್ತಲೂ ಎಲ್ಲಾ ಗ್ರಹಗಳು ತಿರುಗುತ್ತವೆಂದೂ ನಂಬಿಕೆ.

**ರಾಗಗಳ ಹೆಸರುಗಳು :** ೧. ಅಹೇರಿ ೨. ಕಲ್ಯಾಣಿ ೩. ಕಾಂಬೋದಿ ೪. ಗುಂಡಕ್ರಿ ೫. ಗುಜ್ಜರಿ ೬. ಗುರ್ಜರಿ ೭. ತೋಡಿ ೮. ದೇಶಾಕ್ಷಿ ೯. ದೇಸಿ ೧೦. ನಾಟಿ ೧೧. ಪಾಡಿ ೧೨. ಪೂರವ ೧೩. ಪೂರವಿ ಕಲ್ಯಾಣಿ ೧೪. ಭೂಪಾಳಿ ೧೫. ಭೈರವಿ ೧೬. ಮಲಹರಿ ೧೭. ಮಾರವಿ ೧೮. ಮೇಘರಂಜನಿ ೧೯. ರಾಮಕ್ರಿ ೨೦. ವರಾಳಿ ೨೧. ವಸಂತ ೨೨. ಶಂಕರಾಭರಣ ೨೩. ಶ್ರೀರಾಗ ೨೪. ಸಾರಂಗ ೨೫. ಸಾವೇರಿ ೨೬. ಸಾಳಗ ೨೭. ಸೋರಟ.

**ವಜ್ರ :** ಇಂದ್ರನ ಆಯುಧ. ಪರ್ವತಗಳಿಗೆ ರೆಕ್ಕೆಗಳಿದ್ದವೆಂದೂ, ಅವು ಹಾರಿ ಹಾರಿ ಲೋಕಕ್ಕೆ ತೊಂದರೆ ಕೊಡತೊಡಗಿದಾಗ ಇಂದ್ರನು ತನ್ನ ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನು ಕಡಿದು ಹಾಕಿದನೆಂದೂ ಪುರಾಣದ ಕಥೆಗಳು ಹೇಳುತ್ತವೆ. ರೆಕ್ಕೆಗಳು ಹೋದಮೇಲೆ ಪರ್ವತಗಳು ಅಚಲವಾದವು.

**ವಾದ್ಯಗಳ ಹೆಸರುಗಳು :** ೧. ಕಿನ್ನರಿ ೨.ಕೊಂಬು ೩. ಕೊಳಲು ೪. ಝಂಪೆತಾಳ ೫. ತಾಳ ೬. ತುತ್ತುರಿ ೭. ದಂಡಿಗೆ ೮.ದುಂದುಭಿ ೯. ಮದ್ದಲೆ ೧೦. ಮೃದಂಗ ೧೧. ಮುರಲಿಗಾನ ೧೨. ಮೌರಿ ೧೩. ವೇಣು ೧೪. ಶಂಖ

**ವಿಷ್ಣು ಪಂಚಕ :** ಪ್ರತಿ ತಿಂಗಳಲ್ಲಿಯೂ ಶುದ್ಧ ಮತ್ತು ವದ್ಯ ಏಕಾದಶಿ, ಹುಣ್ಣಿವೆ, ಅಮವಾಸ್ಯೆ ಮತ್ತು ಶ್ರವಣಾ ನಕ್ಷತ್ರಗಳಂದು ಉಪವಾಸ ಮಾಡುವ ಒಂದು ವೈಷ್ಣವ ವ್ರತ.

ಷಡ್ದರ್ಶನಗಳು : ೧. ಸಾಂಖ್ಯ ೨. ಯೋಗ ೩.ನ್ಯಾಯ ೪. ವೈಶೇಷಿಕ ೫. ಮೀಮಾಂಸಾ ೬. ವೇದಾಂತ

ಷಡುರಸಗಳು: ಆರು ರಸಗಳು – ಕಾರ, ಹುಳಿ ಸಿಹಿ, ಉಪ್ಪು, ಕಹಿ, ಒಗರು.

ಸಪ್ತ ಋಷಿಗಳು : ೧. ವಿಶ್ವಾಮಿತ್ರ ೨. ಜಮದಗ್ನಿ ೩. ಭಾರಧ್ವಾಜ ೪. ಗೌತಮ ೫. ಅತ್ರಿ ೬. ವಶಿಷ್ಠ ೭. ಕಶ್ಯಪ.

ಸಪ್ತ ಚಿರಂಜೀವಿಗಳು : ೧. ಅಶ್ವತ್ಥಾಮ ೨. ಬಲಿ ೩. ವ್ಯಾಸ ೪. ಹನುಮಂತ ೫. ವಿಭೀಷಣ ೬. ಕೃಪ ೭. ಪರಶುರಾಮ

ಸಪ್ತ ದ್ವೀಪಗಳು : ೧. ಜಂಬುದ್ವೀಪ ೨. ಪ್ಲಕ್ಷದ್ವೀಪ ೩. ಕುಶದ್ವೀಪ ೪. ಕ್ರೌಂಚದ್ವೀಪ ೫. ಶಾಕದ್ವೀಪ ೬. ಶಾಲ್ಮಿಲೀದ್ವೀಪ ೭. ಪುಷ್ಕರದ್ವೀಪ.

ಸಪ್ತಸಮುದ್ರಗಳು : ೧. ಲವಣ ೨. ಇಕ್ಷು ೩. ಸುರೆ ೪. ಸರ್ಪಿ ೫. ದಧಿ ೬. ಕ್ಷೀರ ೭. ಜಲ.

ಸಪ್ತ ಧಾತುಗಳು : ೧. ರಸ ೨. ರಕ್ತ ೩. ಮಾಂಸ ೪. ನೆಣ ೫. ಎಲುವು ೬. ಮಿದುಳು ೭. ವೀರ್ಯ

ಸಪ್ತ ವ್ಯಸನಗಳು : ೧. ಸ್ತ್ರೀ ವ್ಯಸನ ೨. ಪಗಡೆ ವ್ಯಸನ ೩. ಬೇಟೆಯ ವ್ಯಸನ ೪. ಪಾನ (ಕುಡಿತ) ವ್ಯಸನ ೫. ವಾಕ್ ಪಾರುಷ್ಯ (ಒಂದು ಮಾತು) ವ್ಯಸನ ೬. ಅರ್ಥ ವ್ಯಸನ ೭. ದೂಷಣ ವ್ಯಸನ.

ಸಿರಿಮುದ್ರೆ : ವೈಷ್ಣವರು ಧರ್ಮಾಧಿಕಾರ್ಯಕ್ಕಾಗಿ ದೇಹಕ್ಕೆ ಲೇಪಿಸುವ ಐದು ಮುದ್ರೆಗಳ (ಶಂಖ, ಚಕ್ರ, ಗದ, ಪದ್ಮ, ನಾರಾಯಣ) ಸಮೂಹ.

ಹದಿನೆಂಟು ಪುರಾಣಗಳು : ೧. ಬ್ರಾಹ್ಮ ೨. ಪದ್ಮ ೩. ವೈಷ್ಣವ ೪. ಶೈವ ೫. ಭಾಗವತ ೬. ನಾರದೀಯ ೭. ಮಾರ್ಕಂಡೇಯದ ೮. ಆಗ್ನೇಯ ೯.ಭವಿಷ್ಯ ೧೦. ಬ್ರಹ್ಮವೈವರ್ತ

೧೧. ಲೈಂಗ ೧೨. ವರಾಹ ೧೩. ಸ್ಕಾಂದ ೧೪. ವಾಮನ ೧೫. ಕೌರ್ಯ ೧೬. ಮಾತ್ಸ ೧೭. ಗರುಡ ೧೮. ಬ್ರಹ್ಮಾಂಡ.

**ಹರಿ ಸರ್ವಾಂಗೆ :** ತನ್ನ ಸರ್ವಾಂಗದಲ್ಲಿಯೂ ಹರಿಮಯಳಾದವಳು.

**ಹಾಟಕಾಂಬರ :** ಬಂಗಾರದ ಬಣ್ಣದ ಉಡುಪುಳ್ಳವ. ವಿಷ್ಣು. ಹೂವ ತರುವರ ಮನೆಗೆ ಹುಲ್ಲ ತರುವ – ದೇವರು ತನ್ನ ಭಕ್ತ ಮನೆಯಲ್ಲಿ ಆಳಾಗಿ ದುಡಿಯುವನು.

# ಅನುಬಂಧ–೩

## ಪೂರ್ವ ಕತೆಗಳು

**೧. ಅಗಜೆಯರಸ :** 'ಅಗ' ವೆಂದರೆ ಸ್ಥಳ ಬಿಟ್ಟು ಹೋಗಲಾರದ, ಬೆಟ್ಟ, ಪರ್ವತ, ಇಲ್ಲಿ ಹಿಮಾಲಯ. ಅದರ ಮಗಳು ಅಗಜೆ, ಪಾರ್ವತಿ, ಅವಳ ಅರಸ ಶಿವ. ಅವನು ಕಾಶಿಯಲ್ಲಿ ರಾಮನಾಮದ ಮಹಿಮೆಯನ್ನು ಪಾರ್ವತಿಗೆ ಹೇಳಿದನು.

**೨. ಅಗಸ್ತ್ಯ :** ಮಿತ್ರಾವರುಣ ಮತ್ತು ಊರ್ವಶಿಯರ ಮಗ. ಇವನು ಕುಂಭದಲ್ಲಿ ಹುಟ್ಟಿದುದರಿಂದ ಇವನಿಗೆ ಕುಂಭಸಂಭವನೆಂಬ ಹೆಸರುಂಟಾಯಿತು. ವಿದರ್ಭದೇಶದ ರಾಜಕುಮಾರಿ ಲೋಪಾಮುದ್ರೆ ಇವನ ಹೆಂಡತಿ.

**೩. ಅಜಮಿಳ :** ಕಾನ್ಯಕುಬ್ಜದ ಒಬ್ಬ (ಕನೋಜ – ಉತ್ತರಪ್ರದೇಶ) ಬ್ರಾಹ್ಮಣ. ತಂದೆ – ತಾಯಿ ಹೆಂಡತಿಯರನ್ನು ಬಿಟ್ಟು ಸೂಳೆಯ ಮನೆಯಲ್ಲಿ ಇದ್ದು ಅನೇಕ ದುರಾಚಾರಗಳನ್ನು ಮಾಡಿ ಹೊಟ್ಟೆ ಹೊರೆಯುತ್ತಿದ್ದನು. ಇವನ ಹತ್ತು ಮಕ್ಕಳಲ್ಲಿ ಕೊನೆಯವನ ಹೆಸರು ನಾರಾಯಣ, ಸಾಯುವ ವೇಳೆಯಲ್ಲಿ ನಾರಾಯಣ. (ನಾರಗ) ನ ಹೆಸರನ್ನು ನೆನೆದುದರಿಂದ ನಾಮ ಸ್ಮರಣ ಮಹಿಮೆಯಿಂದ ಈತ ದಿವ್ಯಪದವಿಯನ್ನು ಪಡೆದನು.

**೪. ಅತ್ರಯವರಸೆ :** ಇದು ಅತ್ರಿಯು ಅನುಸೂಯೆಯಿಂದ ದತ್ತಾತ್ರೇಯನೆಂಬ ವಿಷ್ಣು ರೂಪದ ಮಗನನ್ನು ಪಡೆದುದನ್ನು ಹೇಳುತ್ತದೆ. ಸಪ್ತರ್ಷಿಗಳಲ್ಲಿ ಒಬ್ಬನಾದ ಅತ್ರಿಯು ಬ್ರಹ್ಮನ ಮಗ. ಕರ್ದಮನೆಂಬುವನೂ ಬ್ರಹ್ಮನ ಮಾನಸಪುತ್ರನೆ. ಇವನು ಸ್ವಾಯಂಭುವ ಮನುವಿನ

ಮಗಳಾದ ದೇವಹೂತಿಯನ್ನು ಮದುವೆಯಾಗಿ ಅನುಸೂಯೆಯೆಂಬ ಮಗಳನ್ನು ಪಡೆದನು. ಇವಳ ಪಾತೀವ್ರತ್ಯವನ್ನು ಪರೀಕ್ಷಿಸಲೆಂದು ತ್ರಿಮೂರ್ತಿಗಳು ಬಂದು, ಅವಳು ಬೆತ್ತಲೆಯಾಗಿ ತಮಗೆ ಊಟಬಡಿಸಬೇಕೆಂದು ಕೇಳಿದಾಗ, ಆಕೆ ಮೂವರನ್ನು ಸಣ್ಣ ಮಕ್ಕಳನ್ನಾಗಿ ಮಾರ್ಪಡಿಸಿದ ಕಥೆ ಹಿನ್ನೆಲೆಯಾಗಿದೆ. ಮೂವರು ಸೇರಿ ಮುಂದೆ ಒಂದು ವಿಗ್ರಹವಾಗಿ ದತ್ತಾತ್ರೇಯ ವೆಂಬ ರೂಪ ಪಡೆಯಿತು. ಇದು ವಿಷ್ಣುವಿನ ಅವತಾರಗಳಲ್ಲಿ ಒಂದೆಂದು ಪ್ರಸಿದ್ಧಿಯಾಗಿದೆ.

**೫. ಅಂಬರೀಶ :** ಸೂರ್ಯವಂಶದಲ್ಲಿ ನಾಭಾಗರಾಜನ ಮಗನಾಗಿ ಹುಟ್ಟಿಸವನು. ವಿಷ್ಣುಭಕ್ತ, ಪರಮ ಭಾಗವತ. ಆವನ ಏಕಾದಶಿ ವ್ರತವನ್ನು ಕೆಡಿಸಬೇಕೆಂದು ದೂರ್ವಾಸನು ದ್ವಾದಶಿ/ ಪಾರಣೆಗೆ ಹೊತ್ತು ಮೀರಿ ಬಂದನು. ವ್ರತದ ಕಟ್ಟಳೆಯನ್ನು ಮೀರಲಾರದೆ ಆಂಬರೀಶನು ಆ ವೇಳೆಗಾಗಲೇ ತೀರ್ಥಪ್ರಾಶನ ಮಾಡಿದರಿಂದ ದೂರ್ವಾಸನು ಸಿಟ್ಟಿಗೆದ್ದು ಅವನನ್ನು ಶಪಿಸಲು ವಿಷ್ಣುವಿನ ಚಕ್ರಾಯುಧವು ದೂರ್ವಾಸನ ಮೇಲೆ ಎರಗಿ ಬಂದಿತು. ಅದನ್ನು ತಡೆಯುಲಾರದೇ ದೂರ್ವಾಸನ ಮೇಲೆ ಎರಗಿ ಬಂದಿತು. ಅದನ್ನು ತಡೆಯುಲಾರದೇ ದೂರ್ವಾಸನು ಅಂಬರೀಶನ ಮೊರೆಹೊಕ್ಕು ತನ್ನ ಶಾಪವನ್ನು ಹಿಂತಿಗೆದು ಕೊಳ್ಳಬೇಕಾಯಿತು.

**೬. ಅರುಣ :** ಈತನು ಸೂರ್ಯನ ಸಾರಥಿ. ವಿನತೆಯ ಮಗ. ಗರುಡನ ಅಣ್ಣ. ತನ್ನ ಸವತಿಯು ಮಕ್ಕಳನ್ನು ಹಡೆದರೂ ತನಗೆ ಮಕ್ಕಳಾಗಲಿಲ್ಲವೆಂಬ ಸಿಟ್ಟಿನಿಂದ ವಿನತೆ ತನ್ನ ಬಸಿರನ್ನು ಹಿಚುಕಿಕೊಂಡಳು. ಹೀಗೆ ಬೆಳವಣಿಗೆಯಾಗದೆ ಹುಟ್ಟಿದ ಕಾಲುಗಳಿಲ್ಲದ ಮಗನೆ ಅರುಣ.

**೭. ಅರುಣಾಚಲ :** ವಿಲ್ಲುಪುರಂ ಗುಡೂರು ರೇಲ್ವೆದಾರಿಯ ಮೇಲೆ ವಿಲ್ಲುಪುರಂನಿಂದ ೪೨ ಮೈಲುಗಳ ಮೇಲೆ

ತಿರುವಣ್ಣಾಮಲೈ ಇದೆ. ಇದರಿಂದ ಸಮೀಪದಲ್ಲಿ ಅರುಣಾಚಲವಿದೆ. ಇಲ್ಲಿಯ ಅರುಣಾಚಲೇಶ್ವರನ ಭವ್ಯ ಮಂದಿರವು ವಿಸ್ತಾರಕ್ಕೆ ಹೆಸರಾಗಿದೆ.

**೮. ಅಶ್ವತ್ಥಾಮ :** ದ್ರೋಣಾಚಾರ್ಯ ಹಾಗೂ ಕೃಪೆ ಇವರ ಮಗ. ಇವನು ಚಿರಂಜೀವಿಗಳಲ್ಲಿ ಒಬ್ಬ. ಇವನು ರುದ್ರಾಂಶ. ತಂದೆಯ ಬಳಿಯಲ್ಲಿ ಧನುರ್ವಿದ್ಯೆಯನ್ನು ಕಲಿತು ಮಹಾರಥಿಯೆನಿಸಿಕೊಂಡನು. ಕರ್ಣನಿಗೆ ಸೇನಾಪತಿ ಪಟ್ಟ ಸಿಕ್ಕದ್ದನ್ನು ಕಂಡು ಸಿಟ್ಟಿಗೆದ್ದು ಶಸ್ತ್ರಸನ್ಯಾಸ ಕೈಗೊಂಡನು. ಮಹಾಭಾರತದ ಯುದ್ಧ ಮುಗಿದ ಬಳಿಕ ತಪಸ್ಸಿಗಾಗಿ ಹಿಮಾಲಯಕ್ಕೆ ತೆರಳಿದನು.

**೯. ಅಸ್ತಮಿಸಿದ ಇನಮಂಡಲ** ಅಭಿಮನ್ಯುವಿನ ವಧೆಯಾದ ಬಳಿಕ ಜಯದ್ರಥನನ್ನು ಸೂರ್ಯಾಸ್ತದೊಳಗಾಗಿ ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದ ಅರ್ಜುನನಿಗಾಗಿ ಶ್ರೀ ಕೃಷ್ಣನು ಕೃತ್ರಿಮವಾದ ಸೂರ್ಯಾಸ್ತವನ್ನು ಸೃಷ್ಟಿಸಿ ತನ್ನ ಭಕ್ತನಿಗಾಗಿ ಪುನಃ ಉದಯವನ್ನು ತೋರಿಸಿದನು. ಇದನ್ನು 'ಅಸ್ತಮಿಸಿದ ಇನಮಂಡಲಕ್ಕೆ ಉದಯವಿತ್ತನೊಬ್ಬ' ನೆಂದು ದಾಸರು ಹಾಡಿದ್ದಾರೆ.

**೧೦. ಅಹಲ್ಯೆ :** ಅಹಲ್ಯೆ ಮುದ್ಗಲ ಋಷಿಯ ಮಗಳು. ಗೌತಮ ಋಷಿಯೊಂದಿಗೆ ಮದುವೆಯಾಗಿದ್ದಳು. ಇಂದ್ರನ ಮೋಸದ ನಡತೆಯ ಮೂಲಕ ಅಪರಾಧಿಯಾದ ಅಹಲ್ಯೆ ಗೌತಮನ ಶಾಪದಿಂದ ಕಲ್ಲಾಗಿದ್ದಳು. ಸೀತೆಯ ಸ್ವಯಂವರಕ್ಕೆಂದು ವಿಶ್ವಾಮಿತ್ರನ ಆಶ್ರಮದಿಂದ ಮಿಥಿಲಾನಗರಿಗೆ ಹೋಗುವ ಹಾದಿಯಲ್ಲಿ ರಾಮನ ಪಾದಸ್ಪರ್ಶದಿಂದ ಮತ್ತೆ ಅಹಲ್ಯೆಯಾದಳು.

**೧೧. ಅಹೋಬಲ ನರಸಿಂಹ :** ರಾಯಚೂರು – ಮದ್ರಾಸ್ ರೇಲ್ವೆ ಮಾರ್ಗದಲ್ಲಿ ಬರುವ ಕಡಪಾ ನಿಲ್ದಾಣದಿಂದ ಅಹೋಬಲಕ್ಕೆ ಹೋಗುವ ದಾರಿಯಿದೆ. ಇಲ್ಲಿ ಶ್ರೀ ನರಸಿಂಹನ ಒಂಭತ್ತು ಬೇರೆ ಬೇರೆ ಹೆಸರಿನ ವಿಗ್ರಹಗಳಿವೆ. ಸ್ಥಳಪುರಾಣದಲ್ಲಿ ಇದು ಹಿರಣ್ಯಕಶಿಪುವಿನ ರಾಜಧಾನಿಯಾಗಿತ್ತೆಂಬ ಉಲ್ಲೇಖವಿದೆ.

೧೨. ಉಗ್ರಸೇನ : ಮಧುರೆಯ ರಾಜನಾಗಿದ್ದನು. ಕಂಸನ ತಂದೆ. ದುರಾಚಾರಿಯಾದ ಕಂಸನು ರಾಜನಾಗಬೇಕೆಂಬ ಆಸೆಯಿಂದ ಈತನನ್ನು ಸೆರೆಯಲ್ಲಿರಿಸಿ ತಾನು ಆಡಳಿತ ನಡೆಸತೊಡಗಿದ. ಉಗ್ರಸೇನನ ಸೋದರ ದೇವಕನೆಂಬುವನ ಮಗಳೇ ದೇವಕಿ. ಕೃಷ್ಣನ ತಾಯಿ.

೧೩. ಋಷಭದೇವ : ನಾಭಿರಾಜ ಮತ್ತು ಮೇರುದೇವಿಯರ ಮಗನೇ ಋಷಭದೇವ. ಈತ ವಿಷ್ಣುವಿನ ಅವತಾರವೆಂದು ಭಾಗವತದಲ್ಲಿ ಹೇಳಲಾಗಿದೆ.

೧೪. ಕನಕದಾಸ : ಪುರಂದರದಾಸರ ಸಮಕಾಲೀನ ಹರಿದಾಸರು. ಹಿರೆಕೆರೂರು ತಾಲ್ಲೂಕಿನ ಕಾಗಿನೆಲೆಯಲ್ಲಿ ಜನಿಸಿದರು. ಬಂಕಾಪುರ ತಾಲ್ಲೂಕಿನ ಬಾಡದಿಂದ ಆದಿಕೇಶವನ ಮೂರ್ತಿಯನ್ನು ತಂದು ಕಾಗಿನೆಲೆಯಲ್ಲಿ ಸ್ಥಾಪಿಸಿದರು. ದಾಸಸಾಹಿತ್ಯದಲ್ಲಿಯೇ ಕನಕದಾಸರಿಗೆ ವಿಶಿಷ್ಟ ಸ್ಥಾನವಿದೆ. ಆದೀಕೇಶವ, ಕಾಗಿನೆಲೆಯಾದಿ ಕೇಶವ ಅಂಕಿತಗಳಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಹರಿಭಕ್ತಿಸಾರ, ನಳಚರಿತೆ, ಮೋಹನ ತರಂಗಿಣಿ, ರಾಮಧ್ಯಾನ ಚರಿತೆ, ಮೊದಲಾದ ಕೃತಿಗಳನ್ನು ರಚಿಸಿದ್ದಾರೆ.

೧೫. ಕಪಿಲದೇವ : ಕರ್ದಮಮುನಿ ಮತ್ತು ಸ್ವಾಯಂಭುವ ಮನುವಿನ ಮಗಳಾದ ದೇವಹೂತಿಯರ ಮಗ. ಇವನು ವಿಷ್ಣುವಿನ ಅವತಾರವೆಂದು ಭಾರತದಲ್ಲಿ ವರ್ಣನೆ ಇದೆ. ಇವನು ಸಾಂಖ್ಯ ಸೂತ್ರಗಳನ್ನು ಬರೆದನೆಂದು ತಿಳಿದು ಬರುತ್ತದೆ.

೧೬. ಕರುಳ ಹರಕ : ನರಸಿಂಹ ಪರಮಾತ್ಮನ ನಾಲ್ಕನೆಯ ಅವತಾರ. ಭಕ್ತ ಪ್ರಹ್ಲಾದನ ಮೊರೆಯಂತೆ ಕಂಬದಿಂದ ಉದ್ಭವಿಸಿ ಪ್ರಹ್ಲಾದನ ತಂದೆಯಾದ ಹಿರಣ್ಯಕಶಿಪು–ವನ್ನು ಕೊಂದನು. ಹಿರಣ್ಯಕಶಿಪುವಿನ ಕರುಳನ್ನು ಮಾಲೆಯಾಗಿ ಧರಿಸಿರುವುದರಿಂದ ಇವನಿಗೆ ಕರುಳ ಹರಕ ಎನ್ನುವುದು.

**೧೭. ಕಾರ್ತವೀರ್ಯ :** ಈತನು ಮಾಹಿಷ್ಮತಿಯ ಕೃತಿವೀರ್ಯನೆಂಬ ರಾಜನ ಮಗನು. ಇವನು ಸಾವಿರ ತೋಳುಗಳ ಪರಾಕ್ರಮಿ. ರಾವಣನನ್ನು ಕೂಡ ಸೋಲಿಸಿದನು ಜಮದಗ್ನಿ ಋಷಿಗಳ ಆಶ್ರಮದಿಂದ ಇವನು ಕಾಮಧೇನುವನ್ನು ಒತ್ತಾಯದಿಂದ ತೆಗೆದುಕೊಂಡು ಹೋಗಲು ಪರಶುರಾಮನು ಇವನನ್ನು ಸಂಹರಿಸಿದನು.

**೧೮. ಕಾಲಕೇಯರು :** ಕಾಲಕೇಯರೆಂಬ ರಾಕ್ಷಸರು ಸಮುದ್ರದಲ್ಲಿ ಅಡಗಿಕೊಂಡು ಲೋಕಕಂಟಕರಾಗಿದ್ದರು. ಆಗ ದೇವತೆಗಳು ಬ್ರಹ್ಮನ ಬಳಿಗೆ ಹೋದರು. ಬ್ರಹ್ಮನು ಅವರನ್ನು ಅಗಸ್ತ್ಯಮುನಿಗಳ ಬಳಿಗೆ ಕಳಿಸಿದನು. ಅಗಸ್ತ್ಯನು ಸಮುದ್ರವನ್ನು ಶೋಷಣ ಮಾಡಲಾಗಿ ಕಾಲಕೇಯರು ಹೊರಬಿದ್ದರು. ಆಗ ದೇವತೆಗಳು ಅವರನ್ನು ಕೊಂದರು.

**೧೯. ಕಿಷ್ಕಿಂದೆ :** ವಾಲಿ, ಸುಗ್ರೀವರ ರಾಜಧಾನಿ. ಬಳ್ಳಾರಿ ಜಿಲ್ಲೆಯ ತುಂಗಭದ್ರಾ ನದಿಯ ಉತ್ತರ ತೀರದಲ್ಲಿದೆ. ಇದರ ಬಳಿಯಲ್ಲಿಯೇ ಹಂಪಿಯ ಪಂಪಾಕ್ಷೇತ್ರವಿದೆ.

**೨೦. ಕುರುಕ್ಷೇತ್ರ :** ಉತ್ತರ ಪ್ರದೇಶದಲ್ಲಿ ದಿಲ್ಲಿಯ ಸಮೀಪದಲ್ಲಿರುವ ಒಂದು ದೊಡ್ಡ ಬಯಲು. ಇದು ೨೫೦೦ ಚದರಮೈಲು ವಿಸ್ತಾರವಾಗಿದೆ.ಇದು ಧರ್ಮ-ಕ್ಷೇತ್ರವೆಂದು ಭಗವದ್ಗೀತೆ ಹೇಳುತ್ತದೆ. ಇಲ್ಲಿ ಏಳು ನದಿಗಳು ಹರಿದಿವೆ. ಅನೇಕ ತೀರ್ಥಗಳಿವೆ.

**೨೧. ಕೇಶಿ :** ಈತನು ಕಂಸ ಪರಿವಾರಕ್ಕೆ ಸೇರಿದ ಒಬ್ಬ ರಾಕ್ಷಸ. ಈತನು ಕುದುರೆ ರೂಪ ತಾಳಿ ಬಲರಾಮ, ಕೃಷ್ಣರನ್ನು, ಗೊಲ್ಲ ಹುಡುಗರನ್ನು, ಪೀಡಿಸಲಾಗಿ ಶ್ರೀಕೃಷ್ಣನು ಇವನನ್ನು ಎತ್ತಿ ಅಪ್ಪಳಿಸಿ ಕೊಂದನು.

**೨೨. ಗಿರಿರಾಜ :** ಗಿರಿರಾಜನಿಗೆ ಹಿಮವಂತರಾಜ, ಪರ್ವತರಾಜ ಎಂಬ ಹೆಸರುಗಳಿವೆ. ಈತನ ಹೆಂಡತಿ ಮೇನಾ. ಇವರ ಮಗಳು ಪಾರ್ವತಿ. ಪೂರ್ವಜನ್ಮದ ದಾಕ್ಷಾಯಿಣಿ ಇಲ್ಲಿ ಪಾರ್ವತಿಯಾಗಿ ಹುಟ್ಟಿಬಂದು ಶಿವನನ್ನು

ಕುರಿತು. ತಪಸ್ಸು ಮಾಡಿ ವರಿಸಿದ ಕಥೆ ಹರಿವಂಶದ ಮೂಲಕ ತಿಳಿದುಬರುತ್ತದೆ.

**೨೩. ಚಾಣೂರ ಮುಷ್ಟಿಕರು :** ಚಾಣೂರ – ಮೂಷಿಕ ಎಂಬುವವರು ಕಂಸನ ಆಸ್ಥಾನದ ಜಟ್ಟಿಗಳು. ಬಿಲ್ಲುಹಬ್ಬಕ್ಕೆಂದು ಕಂಸನು ಶ್ರೀ ಕೃಷ್ಣ – ಬಲರಾಮರನ್ನು ಮಧುರೆಗೆ ಕರೆಕಳಿಸಿ ಈ ಜಟ್ಟಿಗಳೊಂದಿಗೆ ಮಲ್ಲಯುದ್ಧ ಮಾಡಲು ಹೇಳಿದನು. ಚಾಣೂರನನ್ನು ಕೃಷ್ಣನು ಮುಷ್ಟಿಕನನ್ನು ಬಲರಾಮನೂ ಕೊಂದರು.

**೨೪. ಚಾರ್ವಾಕ :** ಈತ ಬೃಹಸ್ಪತಿಯ ಶಿಷ್ಯ ನಾಸ್ತಿಕಮತದ ಪ್ರಚಾರಕ. ಪ್ರತ್ಯಕ್ಷ ಪ್ರಮಾಣಗಳನ್ನು ಮಾತ್ರ ನಂಬುವ ಈತನ ಸಿದ್ಧಾಂತಗಳು ವೈಜ್ಞಾನಿಕವಾಗಿವೆ.

**೨೫. ಜಂಬು ಭೇದಿ :** ಬಲಿಯ ಗೆಳೆಯನಾದ ಈತನು ಒಬ್ಬ ರಾಕ್ಷಸ. ಈತನಿಗೆ ಜಂಭಾಸುರನೆಂಬ ಹೆಸರಿದೆ. ಯುದ್ಧದಲ್ಲಿ ಇಂದ್ರನ ವಜ್ರಾಘಾತಕ್ಕೆ ಬಲಿ ಎಚ್ಚರದಪ್ಪಿ ಬೀಳಲು ಈತನು ಸಿಂಹವನ್ನೇರಿ ಇಂದ್ರನ ಸಂಗಡ ಕಾದಾಡಿ ಅವನಿಂದ ಹತನಾದನು.

**೨೬. ಜಾಂಬವತಿ :** ಋಕ್ಷರಾಜನಾದ ಜಾಂಬವಂತನ ಮಗಳು. ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು. ಶಮಂತಮಣಿಯನ್ನು ಹುಡುಕಲು ಹೋಗಿ ಶ್ರೀಕೃಷ್ಣ ಜಾಂಬವಂತನ ಕೂಡ ಮುಷ್ಟಿಯುದ್ಧ ಮಾಡಿದನು. ಯಾರಿಂದಲೂ ಸೋಲದ ಜಾಂಬವಂತನು ಸೋಲಲು ಆಶ್ಚರ್ಯಪಟ್ಟು, ಯುದ್ಧ ಮಾಡಿದವನು ಕೃಷ್ಣರೂಪದ ಶ್ರೀರಾಮಚಂದ್ರನೇ ಎಂದು ಖಂಡಿತ ತಿಳಿದು ಶಮಂತಕ ರತ್ನವನ್ನು ತನ್ನ ಮಗಳಾದ ಜಾಂಬವತಿಯನ್ನು ಕೃಷ್ಣನಿಗೆ ಅರ್ಪಿಸಿದನು. ಜಾಂಬವತಿ ಶ್ರೀಕೃಷ್ಣ ತೀರಲು ಅಗ್ನಿಪ್ರವೇಶ ಮಾಡಿದಳು.

**೨೭. ಜಯದ್ರಥ :** ಸಿಂಧು – ಶಿಬಿ ದೇಶಗಳ ಅರಸನಾದ ಈತ ದುರ್ಯೋಧನನ ತಂಗಿಯಾದ ದುಶ್ಶಲೆಯನ್ನು ಮದುವೆಯಾಗಿದ್ದ, ಕುರುಕ್ಷೇತ್ರದ ಯುದ್ಧದಲ್ಲಿ

ಅರ್ಜುನನ ಪ್ರತಿಜ್ಞೆಯಂತೆ ಶ್ರೀ ಕೃಷ್ಣನ ಯುಕ್ತಿಯಿಂದ ಇವನು ಮರಣಹೊಂದಿದನು.

೨೮. ಶಂಕರಾಚಾರ್ಯ : ಇವರು ಅದ್ವೈತ ಮತ ಸ್ಥಾಪಕರು, ಕೇರಳ ರಾಜ್ಯದ ಕಾಲಟಿ ಗ್ರಾಮದಲ್ಲಿ ಜನಿಸಿದರು. ಈ ಗ್ರಾಮವು ಪೆರಿಯಾರ ನದಿಯ ತೀರದ ಮೇಲಿದೆ. ಇವರು ಚಿಕ್ಕಂದಿನಿಂದಲೇ ಸನ್ಯಾಸ ಸ್ವೀಕರಿಸಿ ಗೋವಿಂದ ಯತಿಗಳಲ್ಲಿ ತತ್ವಜ್ಞಾನವನ್ನು ಅಭ್ಯಾಸ ಮಾಡಿದರು. ಪ್ರಸ್ಥಾನತ್ರಯಕ್ಕೆ ಭಾಷ್ಯ ಬರೆದು ವೈದಿಕ ಧರ್ಮವನ್ನು ಪುನರುಜ್ಜೀವನಗೊಳಿಸಿದರು ಇವರು, ಮೂಲಪೀಠ ಶೃಂಗೇರಿ, ಕೇದಾರ ಜಗನ್ನಾಥಪುರಿ, ದ್ವಾರಕೆಗಳಲ್ಲಿ ಮಠಗಳನ್ನು ಸ್ಥಾಪಿಸಿ, ಭಾರತದ ತುಂಬಾ ವೈದಿಕ ಧರ್ಮವನ್ನು ಪ್ರಸಾರವಾಡಿ ತಮ್ಮ ೩೨ನೇ ವಯಸ್ಸಿನಲ್ಲಿ ಗುಹಾಪ್ರವೇಶ ಮಾಡಿದರು.

೨೯. ಶಕುನಿ : ಸುಬಲರಾಜನ ಮಗ ದುರ್ಯೋಧನನ ಸೋದರ ಮಾವ. ಇವನ ಕುಟಿಲ ತಂತ್ರದಿಂದಲೇ ಪಾಂಡವರು ವನವಾಸ - ಅಜ್ಞಾತವಾಸಗಳನ್ನು ಅನುಭವಿಸ ಬೇಕಾಯಿತು. ಕುರುಕ್ಷೇತ್ರದ ಯುದ್ಧಕ್ಕೆ ಇವನ ವಂಚನೆಗಳೇ ಕಾರಣವಾದವು.

೩೦. ಶಾನಕ : ಗೃತ್ಸಮದ ಋಷಿಯ ಮೊಮ್ಮಗನಾದ ಶಾನಕನು ಶುನಕನ ಮಗ. ಭೃಂಗುವಂಶದವ. ನೈಮಿಷಾ-ರಣ್ಯದಲ್ಲಿ ವಾಸವಾಗಿದ್ದ ಒಬ್ಬ ಕುಲಪತಿ. ಸೂತ ಪೌರಾಣಿಕನಿಂದ ಪುರಾಣಗಳನ್ನು ಕೇಳಿದ ಮಹರ್ಷಿಗಳಲ್ಲಿ ಮುಖ್ಯನು.

೩೧. ಶಿಶುಪಾಲ : ಚೇದಿ ದೇಶಾಧಿಪತಿ ದಮಘೋಷ ಹಾಗೂ ವಸುದೇವನ ತಂಗಿಯಾದ ಶ್ರುತಶ್ರವೆ ಇವರ ಮಗ. ಪಾಂಡವನು ಹಾಗೂ ಇವನು ಅಬ್ಬಚ್ಚಿ ತಾಯಿ ಮಕ್ಕಳು. ಇವನು ಹುಟ್ಟಿದಾಗ ಇವನಿಗೆ ನಾಲ್ಕು ಕೈ, ಮೂರು ಕಣ್ಣುಗಳಿದ್ದವು ಕೃಷ್ಣನಿಂದಲೇ ಇವನ ಸಾವು ಎಂಬುದು ಗೊತ್ತಾದಾಗ ಇವನ ತಾಯಿ ತನ್ನ ಮಗನನ್ನು ಬದುಕಿಸಲು ಕೃಷ್ಣನಲ್ಲಿ ಮೊರೆಯಿಟ್ಟಳು.

ಆಗ ಕೃಷ್ಣನು ನೂರು ತಪ್ಪು ಮಾಡುವವರೆಗೆ ಮಾತ್ರ ತಾಳುತ್ತೇನೆ, ಆಮೇಲೆ ಕೊಲ್ಲುತ್ತೇನೆಂದು ಹೇಳಿದನು. ರಾಜಸೂಯ ಯಾಗದಲ್ಲಿ ಪೂಜೆಯ ಕಾಲಕ್ಕೆ ಕೃಷ್ಣನು ಇವನನ್ನು ಕೊಂದನು. ಶಿಶುಪಾಲನು ಜನ್ಮದಲ್ಲಿ ಹಿರಣ್ಯಕಶಿಪು, ರಾವಣ ಆಗಿದ್ದನೆಂದು ಭಾರತ ಸಭಾದಲ್ಲಿ ಹೇಳಲಾಗಿದೆ.

೩೨. **ಶುಕಮುನಿ** : ಈತನು ವೇದವ್ಯಾಸರ ಮಗ. ನಾರದ ಮೊದಲಾದವರಲ್ಲಿ ಬ್ರಹ್ಮವಿದ್ಯೆ ಕಲಿತು ವೈರಾಗ್ಯ ತಾಳಿದನು. ಈತನು ಪರೀಕ್ಷಿತ ರಾಜನಿಗೆ ಭಾಗವತವನ್ನೂ ಗಂಧರ್ವ ಭಾರತವನ್ನು ತಿಳಿಸಿಕೊಟ್ಟನು. ಸಂಕೀರ್ತನ ಭಕ್ತರಲ್ಲಿ ಶುಕನು ಮೊದಲಿಗನು.

೩೩. **ಶ್ರೀಶೈಲ** : ಜ್ಯೋತಿರ್ಲಿಂಗವುಳ್ಳ ದಕ್ಷಿಣ ಹಿಂದುಸ್ತಾನದ ಪ್ರಸಿದ್ಧ ಶೈವಕ್ಷೇತ್ರ, ಕರ್ನೂಲು ರೇಲ್ವೆನಿಲ್ದಾಣದಿಂದ ಆತ್ಮಕೂರು ಮೂಲಕ ಶ್ರೀಶೈಲಕ್ಕೆ ಹೋಗಬಹುದು. ಇಲ್ಲವೇ ನಂದ್ಯಾಲದಿಂದ ಆತ್ಮಕೂರಿಗೆ ಹೋಗಿ ಹೋಗಬಹುದಾಗಿದೆ. ಈಗ ಕರ್ನೂಲು ರೇಲ್ವೆ ನಿಲ್ದಾಣದಿಂದ ಶ್ರೀಶೈಲದವರೆಗೆ ನೇರ ಬಸ್ಸುಗಳಿವೆ.

# ಟಿಪ್ಪಣಿಗಳು

**ತಕ್ಷಕ :** ಅರ್ಜುನನು ಅಗ್ನಿಯ ಅಪೇಕ್ಷೆಯಂತೆ ಖಾಂಡವವನವನ್ನು ಅವನಿಗೆ ಆಹುತಿ ಕೊಟ್ಟ ಸಮಯದಲ್ಲಿ ಆ ವನದಲ್ಲಿದ್ದ ತಕ್ಷಕನ ಹೆಂಡತಿ ಅವನನ್ನು ಬಾಯಲ್ಲಿ ಕಚ್ಚಿಕೊಂಡು ಹೋಗುತ್ತಿರಲು ಅರ್ಜುನನು ಬಾಣ ಹೊಡೆದು ಅವಳ ತಲೆ ಕತ್ತರಿಸಿದ. ಆಗ ತಕ್ಷಕನು ಪಾರಹೋ ಸರ್ಪಾಸ್ತ್ರವಾಗಿ ಕರ್ಣನ ಬತ್ತಳಿಕೆಯಲ್ಲಿ ಸೇರಿ, ತನ್ನ ಸೇಡು ತೀರಿಸುವ ವಿಚಾರದಲ್ಲಿದ್ದನು. ಇದೇ ಸರ್ಪಾಸ್ತ್ರವನ್ನು ಕರ್ಣನು ಅರ್ಜುನನ ಕೊರಳಿಗೆ ಗುರಿಯಿಟ್ಟು ಹೊಡೆದಾಗ ಶ್ರೀಕೃಷ್ಣನು ಅರ್ಜುನನ ರಥವನ್ನು ನೆಲಕ್ಕೆ ಒತ್ತಲು ಸರ್ಪಾಸ್ತ್ರ ಅರ್ಜಿನನ ಕಿರೀಟವನು ಕೊಂಡೊಯ್ದಿತು. ಇನ್ನೊಂದು ಸಲ ತನ್ನನ್ನು ಪ್ರಯೋಗಿಸೆಂದು ಹೇಳಿದರೂ ಕರ್ಣನು ಕುಂತಿಗೆ ಕೊಟ್ಟ ಮಾತಿಗಾಗಿ ಒಪ್ಪಲಿಲ್ಲ.

**ತ್ರಿಪುರ :** ಮಾಯಾಸುರನು ತಾರಕಾಸುರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿಗಳಿಗಾಗಿ ಮೂರು ಪಟ್ಟಣಗಳನ್ನು ಕಟ್ಟಿಕೊಟ್ಟನು ಇದಕ್ಕೆ ತ್ರಿಪುರವೆಂಬ ಹೆಸರು. ಇವರು ದೇವತೆಗಳನ್ನು ಕಾಡತೊಡಗಿ ಧರ್ಮ ಘಾತಕ ಕಾರ್ಯ ಕೈಗೊಳ್ಳಲು ವಿಷ್ಣು ಬುದ್ಧನಾಗಿ ಅವರನ್ನು ನಾಶಮಾಡಿದನು.

**ದತ್ತಾತ್ರೆಯ :** ವೈವಸ್ವತ ಮನ್ವಂತರದಲ್ಲಿ ಅತ್ರಿ ಮಹರ್ಷಿಯು ಸಂತಾನಕ್ಕಾಗಿ ತಪಸ್ಸು ಮಾಡಿದನು. ಆಗ ಪ್ರಸನ್ನರಾದ ತ್ರಿಮೂರ್ತಿಗಳು ತಮ್ಮ ಒಬ್ಬೊಬ್ಬರ ಅಂಶದಿಂದ ಒಬ್ಬೊಬ್ಬ ಮಗನು ಹುಟ್ಟುವನೆಂದು ಅನುಗ್ರಹಿಸಿದರು. ಅದರಂತೆ ಬ್ರಹ್ಮನ ಅಂಶದಿಂದ ದುರ್ವಾಸ ಮುನಿಯೂ, ವಿಷ್ಣುವಿನ ಅಂಶದಿಂದ ದತ್ತಾತ್ರೇಯನು ಶಿವನ ಅಂಶದಿಂದ ದುರ್ವಾಸ ಮುನಿಯು ಜನಿಸಿದರು.

**ದರ್ಭಶಯನ :** ಮಾನಾಮಧುರೆಯಿಂದ ರಾಮೇಶ್ವರಕ್ಕೆ ಹೋಗುವ ದಾರಿಯಲ್ಲಿ ರಾಮನಾಡು ಎಂಬ ರೇಲ್ವೆ ನಿಲ್ದಾಣವಿದೆ.

ಇಲ್ಲಿಂದ ದರ್ಭಶಯನ ಮಂದಿರವು ಆರು ಮೈಲುಗಳಲ್ಲಿದೆ. ಇಲ್ಲಿಯ ಮಂದಿರದಲ್ಲಿ ದರ್ಭಶಯ್ಯೆಯ ಮೇಲೆ ಮಲಗಿದ ಶ್ರೀ ವಿಷ್ಣುವಿನ ದ್ವಿಭುಜಮೂರ್ತಿ ಇದೆ. ವಿಭೀಷಣನ ಸಮ್ಮತಿಯಿಂದ ಶ್ರೀರಾಮನು ಇಲ್ಲಿ ದರ್ಭದ ಆಸನವನ್ನು ಹಾಕಿಕೊಂಡು ಮೂರು ದಿನಗಳವರೆಗೆ ವ್ರತಮಾಡಿ ಮಾರ್ಗವನ್ನು ಕೊಡು ಎಂದು ಸಮುದ್ರ ರಾಜನನನ್ನು ಪ್ರಾರ್ಥಿಸಿದನೆಂಬ ಕಥೆ ಈ ಕ್ಷೇತ್ರದ ವಿಷಯಕವಾಗಿದೆ. ಇಲ್ಲಿಂದ ಮೂರು ಮೈಲುಗಳ ಮೇಲೆ ಸಮುದ್ರ ದಂಡೆಯ ಮೇಲೆ ಹನುಮಂತನ ಗುಡಿಯಿದೆ.

ದೇವಲ : ಕಶ್ಯಪ ಗೋತ್ರದ ಒಬ್ಬ ವೇದಮಂತ್ರಕಾರ ಮತ್ತು ಪ್ರವರಕಾರ ಇವನಿಗೆ ಅಸಿತನೆಂಬ ಇನ್ನೊಂದು ಹೆಸರಿದೆ. ಇವನು ಹೂ ಹೂ ಎಂಬ ಗಂಧರ್ವನಿಗೆ ಶಾಪಕೊಟ್ಟನು. ಆದುದರಿಂದ ಅವನು ಮೊಸಳೆಯಾದನು.

ದ್ರುಪದ : ಈತನು ಪಾಂಚಾಲ ದೇಶದ ರಾಜ. ಸೋಮಕ ವಂಶದ ವೃಷತ ಮತ್ತು ಮೇನಕೆಯರ ಮಗ. ಇವನಿಗೆ ಯಿಜ್ಞಸೇನ, ಪಾಂಚಾಲ ಮತ್ತು ಪಾರ್ಷತ ಎಂಬ ಹೆಸರುಗಳಿವೆ. ದ್ರೌಪದಿ ಇವನ ಮಗಳು. ಈತನು ದ್ರೋಣಾಚಾರ್ಯರ ಸಹಪಾಠಿ. ದ್ರೋಣಾಚಾರ್ಯರು ದ್ರುಪದನನ್ನು ಯುದ್ಧದಲ್ಲಿ ಸಂಹರಿಸಿದರು.

ದ್ರೋಣಾಚಾರ್ಯರು : ದ್ರೋಣಾಚಾರ್ಯರ ತಂದೆಯ ಹೆಸರು ಭಾರದ್ವಾಜ, ದ್ರೋಣ ಕಲಶದಲ್ಲಿ ಹುಟ್ಟಿದ್ದರಿಂದ ಇವರಿಗೆ ಈ ಹೆಸರು ಬಂತು. ಕಕ್ಕನಾದ ಅಗ್ನಿವೇಶನೆಂಬ ಋಷಿಯಲ್ಲಿ ಇವರು ಧನುರ್ವಿದ್ಯೆ ಕಲಿತರು. ಇವರು ಕೌರವರಿಗೂ ಪಾಂಡವರಿಗೂ ಗುರುಗಳಾಗಿದ್ದರು. ಕುರುಕ್ಷೇತ್ರದ ಯುದ್ಧದಲ್ಲಿ ಎರಡನೆಯ ಸೇನಾಪತಿಯಾಗಿ ದ್ರುಪದರಾಜನ ಮಗ ದುಷ್ಟದುಮ್ನನಿಂದ ಮರಣ ಹೊಂದಿದರು.

**ಧನ್ವಂತರಿ :** ಈತ ದೇವತೆಗಳ ವೈದ್ಯ. ಆಯುರ್ವೇದವನ್ನು ದೇವಲೋಕದಲ್ಲಿ ಪ್ರಚಾರಕ್ಕೆ ತಂದವನು. ದೇವ – ದಾನವರು ಸಮುದ್ರ ಮಥನ ಮಾಡಿದಾಗ ಹೊರಟ ಹದಿನಾಲ್ಕು ರತ್ನಗಳಲ್ಲಿ ಇವನು ಒಬ್ಬ.

**ಧ್ರುವ :** ಉತ್ತಾನಪಾದ ಸುನೀತಿಯರ ಮಗ. ಮಲತಾಯಿ ಸುರುಚಿಯ ಮತ್ಸರದಿಂದ ಬೇಸತ್ತು. ಸ್ಥಿರವಾದ ಸ್ಥಾನವನ್ನು ದೇವರಿಂದ ಪಡೆದುಕೊಳ್ಳಬೇಕೆಂದು ತಪಸ್ಸಿಗೆ ಹೋಗುವನು. ಅವನ ತಪಸ್ಸಿಗೆ ಮೆಚ್ಚಿ ಶ್ರೀಹರಿ ಪ್ರತ್ಯಕ್ಷನಾಗಿ ಅವನಿಗೆ ಧ್ರುವ ಪದವಿಯನ್ನು ಕೊಟ್ಟನು.

**ಧೇನುಕಾಸುರ :** ಈತ ಒಬ್ಬ ರಾಕ್ಷಸ. ವೃಂದಾವನದ ಸಮೀಪದಲ್ಲಿದ್ದ ತಾಳೆಯ ವನದಲ್ಲಿ ವಾಸಮಾಡುತ್ತಿದದು. ಅಲ್ಲಿ ಬಂದು ಹಣ್ಣು ಹರಿಯುವವರನ್ನೆಲ್ಲಾ ಕೊಂದು ಬಿಡುತ್ತಿದ್ದ. ಒಂದು ದಿನ ಬಲರಾಮನು – ಗೋಪಾಲನೊಂದಿಗೆ ವನಕ್ಕೆ ಹೋಗಿ ಹಣ್ಣು ತಿಂದಾಗ, ಧೇನುಕನು ಭೀಕರವಾದ ಕತ್ತಿಯ ರೂಪತಾಳಿ ಬಲರಾಮನ ಮೇಲೇರಿ ಹೋಗಿ ಆತನಿಂದ ಹತನಾದನು.

**ನರಕಾಸುರ :** ನರಕಾಸುರನು ಪ್ರಾಗ್ ಜೋತಿಷ್ಯಪುರದ ರಾಜ. ಇವನು ಕೃಷ್ಣನ ಪ್ರತಿವಾದಿ. ಇವನು ಭರತಖಂಡ ಮತ್ತು ದೇವತೆಗಳನ್ನೆಲ್ಲಾ ಗೆದ್ದು ೧೬೧೦೦ ರಾಜಪುತ್ರಿಯರನ್ನು, ಗಂಧರ್ವ ಕನ್ಯೆಯರನ್ನು ತನ್ನ ಸೆರೆಮನೆಯಲ್ಲಿರಿಸಿದ್ದನು. ಕೃಷ್ಣನು ಇವನನ್ನು ಕೊಂದು ಅವರ ಸೆರೆಬಿಡಿಸಿ ತಾನೇ ಸ್ವೀಕರಿಸಿದನು.

**ನೆರೆತುಂಬುರ :** ಕಶ್ಯಪನ ಮಗನಾದ ತುಂಬುರ ಒಬ್ಬ ದೇವಗಂಧರ್ವ, ಗಾಯಕ ಸ್ವರ್ಗಲೋಕದಿಂದ ಅಪ್ಸರೆ ರಂಭೆಯು ಕುಬೇರನ ನಗರವಾದ ಅಲಕಾವತಿಗೆ ಹೋಗುತ್ತಿರುವಾದ ದಾರಿಯಲ್ಲಿ ತುಂಬುರನು ಅವಳನ್ನು ನೋಡಿ ಮೋಹಿಸಿ ಅವಳ ಮಾನಭಂಗ ಮಾಡಿದರೆಂದು ಕಥೆ. ವಿಷ್ಣುವಿನ ಓಲಗದಲ್ಲಿ ರಂಭೆ ನರ್ತನ ಮಾಡುವಾಗ ತುಂಬುರನು ಹಾಡುವನೆಂದು ಉಲ್ಲೇಖಿಸಿದೆ.

**ಪರಾಶರ :** ವ್ಯಾಸನ ತಂದೆ. ಶಕ್ತಿಯ ಮಗ. ವಸಿಷ್ಠನ ಮೊಮ್ಮಗ. ಯಮುನಾ ನದಿಯನು ದಾಟುವಾಗ ದೋಣಿ ನಡೆಸುತ್ತಿದ್ದ ಮತ್ಸ್ಯಗಂಧಿಯೊಂದಿಗೆ ಕೂಡಿಕೊಂಡು ಸದ್ಯೋಗರ್ಭದಿಂದ ವ್ಯಾಸ ಹುಟ್ಟಿದ್ದು ಮಹಾಭಾರತದಲ್ಲಿ ಬರುತ್ತದೆ.

**ಪರೀಕ್ಷಿತ :** ಅರ್ಜುನನ ಮಗನಾದ ಅಭಿಮನ್ಯು ಮತ್ತು ಉತ್ತರೆಯರ ಮಗನೇ ಪರೀಕ್ಷಿತ. ಇವನು ತಾಯಿಯ ಹೊಟ್ಟೆಯಲ್ಲಿರುವಾಗಲೇ ಅಶ್ವತ್ಥಾಮನು ಬಿಟ್ಟ ಬ್ರಹ್ಮಾಸ್ತ್ರದಿಂದ ಪಾತಾಳದ ಉದಕವನ್ನು ಮೇಲೆ ತಂದು ಭೀಷ್ಮಾಚಾರ್ಯರ ನೀರಡಿಕೆಯನ್ನು ತಣಿಸಿದನು.

**ಪುರುಹೂತ :** ಇಂದ್ರನ ಇನ್ನೊಂದು ಹೆಸರು. ದೇವತೆಗಳ ಅರಸ ಸ್ವರ್ಗಲೋಕದ ಒಡೆಯ ದೈತ್ಯರ ಸಂಗಡ ಇವನ ಹೋರಾಟವು ಪುರಾಣ ಪ್ರಸಿದ್ಧವಾಗಿದೆ. ಅಹಲ್ಯೆಯ ಶಾಪಕ್ಕೆ ಕಾರಣನಾದ ಈತ ಸಹಸ್ರಾಕ್ಷನೆಂಬ ಹೆಸರನ್ನು ಗೌತಮನ ಶಾಪದಿಂದ ಪಡೆದನು.

**ಪ್ರಹ್ಲಾದ :** ಹಿರಣ್ಯಕಶಿಪು ಮತ್ತು ಕಯಾಧು ಇವರ ಮಗ. ಇವನು ಪರಮ ಭಾಗವತ. ಈತನ ವಿಷ್ಣುಭಕ್ತಿಯನ್ನು ಸಹಿಸದೆ ಹಿರಣ್ಯಕಶಿಪು ಈತನನ್ನು ನಾನಾರೀತಿಯಲ್ಲಿ ಹಿಂಸಿಸಿದನು. ಪ್ರಹ್ಲಾದನನ್ನು ಸಂರಕ್ಷಿಸಲು ಶ್ರೀಹರಿ ನರಸಿಂಹಾವತಾರ ತಾಳಿ ಅವನನ್ನು ಕೊಂದನು. ಪ್ರಹ್ಲಾದನು ದೃಢಭಕ್ತಿಗೆ ಹೆಸರಾಗಿದ್ದಾನೆ.

**ಬಾಣಾಸುರ :** ಬಲಿ ಚಕ್ರವರ್ತಿಯ ಹಿರಿಯ ಮಗನೇ ಬಾಣಾಸುರ. ಈತ ಮಹಾಶಿವಭಕ್ತ, ಶಿವನನ್ನು ತಾಂಡವದಿಂದ ಮೆಚ್ಚಿಸಿ ಒಂದು ಸಾವಿರ ತೋಳುಗಳನ್ನು ಪಡೆದವ. ಇವನ ಮಗಳ ಹೆಸರು ಉಷೆ. ಇವಳು ಅನಿರುದ್ಧನನ್ನು ಪ್ರೀತಿಸುತ್ತಿದ್ದಳು. ಉಷೆಯ ಗೆಳತಿ ಚಿತ್ರಲೇಖೆ ಅವನನ್ನು ಮಾಯೆಯಿಂದ ಶೋಣಿತಪುರದಲ್ಲಿ ಗಂಧರ್ವ ವಿವಾಹವಾದಳು. ಈ ವಿಷಯ ತಿಳಿದ ಬಾಣಾಸುರ ಸಿಟ್ಟಿನಿಂದ ಅನಿರುದ್ಧನನ್ನು ಸೆರೆಯಲ್ಲಿಟ್ಟನು. ಶ್ರೀಕೃಷ್ಣನಿಗೆ ಇದು ಗೊತ್ತಾದಾಗ ದಂಡೆತ್ತಿ ಬಂದು ಬಾಣಾಸುರನನು

ಸೋಲಿಸಿ ಅವನಿಗೆ ಎರಡೇ ತೋಳುಗಳುಳಿಯುವಂತೆ ಮಾಡಿದನು.

**ಬಿನುಗುಬೇಡತಿ :** ಶಬರಿ, ಪಂಪಾತೀರದಲ್ಲಿದ್ದ ಇವಳ ಆಶ್ರಮಕ್ಕೆ ರಾಮನು ಸೀತಾನ್ವೇಷಣೆಯ ಸಂದರ್ಭದಲ್ಲಿ ಬಂದಾಗ ಇವಳು ರಾಮನಿಗೆ, ತಾನು ಭಕ್ತಿಯಿಂದ ಮೊದಲು ರುಚಿ ನೋಡಿ ಹಣ್ಣನ್ನು ಕೊಟ್ಟಳೆಂದೂ, ರಾಮನು ಪ್ರೀತಿಯಿಂದ ಅದನ್ನು ತಿಂದನೆಂದು ಕಥೆ.

**ಭಗದತ್ತ :** ಈತನು ನರಕಾಸುರನ ಮಗ. ಪ್ರಾಗ್ ಜ್ಯೋತಿಷ್ಯ ನಗರದಲ್ಲಿ ರಾಜ್ಯವಾಳುತ್ತಿದ್ದನು. ಜಗಂಯುದ್ಧ ಪ್ರವೀಣನಾದ ಈತನು ಮಹಾಭಾರತ ಯುದ್ಧದಲ್ಲಿ ಹನ್ನೆರಡನೆಯ ದಿವಸ ಅರ್ಜುನನಿಂದ ಮಡಿದನೆಂದು ಮಹಾಭಾರತ ಹೇಳುತ್ತದೆ.

**ಭಾಗೀರಥಿ :** ಭಗೀರಥನ ತಪಸ್ಸಿಗೆ ಮೆಚ್ಚಿ ಭಾಗೀರಥಿ ಶಿವನ ತಲೆಯಿಂದಿಳಿದು ರಭಸದಿಂದ ಮುಂದುವರಿದಾಗ ದಾರಿಯಲ್ಲಿಯ ಜುಹ್ನುಮುನಿಯ ಯಜ್ಞಶಾಲೆಯನ್ನು ಹೊಕ್ಕಳು. ಸಿಟ್ಟಿಗೆದ್ದ ಜುಹ್ನುಮುನಿ ಭಾಗೀರಥಿಯನ್ನು ಕುಡಿದನು. ಆಗ ಭಗೀರಥನು ಪ್ರಾರ್ಥನೆ ಮಾಡತೊಡಗಿದನು. ತನ್ನ ಮಗಳೆಂದು ಒಪ್ಪಿಕೊಂಡರೆ ಹೊರಬಿಡುವೆನೆಂದು ಜುಹ್ನುಮುನಿ ತಿಳಿಸಿದನು. ಅದರಂತೆ ಒಪ್ಪಿಕೊಳ್ಳಲು ಜುಹ್ನು ತನ್ನ ಕಿವಿಯಿಂದ ಭಾಗೀರಥಿಯನ್ನು ಹೊರಕ್ಕೆ ಕಳುಹಿಸಿದನು.

**ಭೀಷ್ಮಾಚಾರ್ಯ :** ಇವರು ಕುರುವಂಶದ ಶಂತನು ರಾಜನಿಂದ ಗಂಗಾದೇವಿಯಲ್ಲಿ ಹುಟ್ಟಿದರು. ಅಷ್ಟವಸುಗಳಲ್ಲಿ ಒಬ್ಬರಾದ ಇವರು ವಶಿಷ್ಟರ ಶಾಪದಿಂದ ಭೂಮಿಯಲ್ಲಿ ಅವತರಿಸಿದರು. ಇವರಿಗೆ ಕುರುಕುಲ ಪಿತಾಮಹನೆಂಬ ಹೆಸರಿದೆ. ಇವರ ಮೊದಲಿನ ಹೆಸರು ದೇವವ್ರತ. ಅಜನ್ಮ ಬ್ರಹ್ಮಚರ್ಯವ್ರತ ತೊಟ್ಟಿದ್ದರಿಂದ ಭೀಷ್ಮರೆಂಬ ಹೆಸರುಂಟಾಯಿತು. ಕೌರವ – ಪಾಂಡವರ ಸಂಧಾನ ಪ್ರಯತ್ನ ವಿಫಲವಾದಾಗ ಕೊನೆಗೆ ಕುರುಕ್ಷೇತ್ರದಲ್ಲಿ ಇವರು ಅರ್ಜುನನ ಬಾಣದಿಂದ ಶರಪಂಜರಮೇಲೆ ಮಲಗಿದರು. ಇವರು ಇಚ್ಛಾಮರಣಿಗಳಾಗಿದ್ದರು.

**ಭೃಗುಮುನಿ :** ಸರಸ್ವತಿ ನದಿಯ ದಡದ ಮೇಲೆ ಋಷಿಗಳು ಯಜ್ಞ ಮಾಡುತ್ತ ಅಗ್ರಪೂಜೆಯನ್ನು ಯಾವ ದೇವತೆಗೆ ಸಲ್ಲಿಸಬೇಕೆಂಬ ವಿಚಾರವಾಗಿ ವಿವಾದವೊದಗಿ ಭೃಗಮುನಿಯು ತ್ರಿಮೂರ್ತಿಗಳ ಸತ್ವಪರೀಕ್ಷೆ ಮಾಡಲು ಹೊರಟಾಗ ವೈಕುಂಠದಲ್ಲಿ ನಾರಾಯಣನು ಲಕ್ಷ್ಮಿಯೊಂದಿಗೆ ಸುಖನಿದ್ರೆಯಲ್ಲಿದ್ದು, ತಾನು ಬಂದುದನ್ನು ಅರಿಯದೇ ಇರಲು ಭೃಗಮುನಿಯು ಸಿಟ್ಟಿಗೆದ್ದು ನಾರಾಯಣನನ್ನು ಬೇಡುತ್ತ ಮುನಿಯ ಕಾಲಿಗೆಷ್ಟು ನೋವಾಯಿತೊ ಎಂದು ಅವನ ಕಾಲುಗಳನ್ನು ಒತ್ತುತ್ತ ಅವನ ಕಾಲಲ್ಲಿದ್ದ ಕಣ್ಣನ್ನು ಕಿತ್ತುಬಿಟ್ಟ ಕಾಲಲ್ಲಿ ಕಣ್ಣಿದ್ದುದರಿಂದಲೇ ಭೃಗಮುನಿಗೆ ಅಹಂಕಾರವಿದ್ದಿತು.

**ಮದಗಜ :** ಕಂಸನ ಕುವಲಯಾ ಪೀಡನೆಂಬ ಹೆಸರಿನ ಆನೆಯ ಹೆಸರು ಮದಗಜ. ಕೃಷ್ಣ ಬಲರಾಮರನ್ನು ಕೊಲ್ಲುವ ಉದ್ದೇಶದಿಂದ ಕಂಸನ ಆಜ್ಞೆಯಂತೆ ಮಾವುತನು ಈ ಆನೆಯನ್ನು ಅವರ ಮೇಲೆ ನೂಕಿದಾಗ ಶ್ರೀಕೃಷ್ಣನು ಅದನ್ನು ಕೊಂದನು.

**ಮಧುಕರವೃತ್ತಿ :** ಇದು ಹರಿದಾಸರಿಗೆ ಜೀವನ ಸಾಧನವಾಗಿದೆ. ಮಧುಕರವೃತ್ತಿಯೆಂಬುದು ಒಂದು ಲಾಕ್ಷಣಿಕ ಪದ. ನಿತ್ಯವೂ ಮನೆಮನೆಗೆ ಹೋಗಿ ಒಪ್ಪತ್ತಿಗೆ ಸಾಲುವಷ್ಟು ಮಾತ್ರ ಧಾನ್ಯಭಿಕ್ಷೆ ಬೇಡುವುದಕ್ಕೆ ಮಧುಕರವೃತ್ತಿಯೆಂಬ ಹೆಸರು. ಜೇನುಹುಳುವು ಹೂ ಹೂ ತಿರುಗಿ ಹನಿ ಹನಿ ರಸವನ್ನು ಕೂಡಿಸಿ ಸಂಗ್ರಹಿಸುವ ರೀತಿಯಿಂದ ಈ ಶಬ್ದವು ಬಂದಿದೆ. ಬೇರೆ ಬೇರೆ ಭಕ್ತರಲ್ಲಿಯ ಸದ್ಗುಣಗಳನ್ನು ಸಂಗ್ರಹಿಸಿ, ತನ್ನನ್ನು ಪರಿಪೂರ್ಣಗೊಳಿಸುವ ರೀತಿಯು ಮಧುಕರವೃತ್ತಿಯಾಗುತ್ತದೆ.

**ಮಣಿಕರ್ಣಿಕಾ :** ಕಾಶಿಯಲ್ಲಿಯ ಒಂದು ಸ್ನಾನಘಟ್ಟ. ಇದಕ್ಕೆ ವೀರತೀರ್ಥವೆಂತಲೂ ಹೆಸರಿದೆ ಘಟ್ಟದ ಮೇಲೆ ಮಣಿಕರ್ಣಿಕಾ ಕುಂಡವಿದೆ. ನಾಲ್ಕೂ ಬದಿಗಳಲ್ಲಿ ಕಲ್ಲಿನ ಪಾವಟಗೆಗಳಿವೆ. ಈ ಕುಂಡದ ನೀರನ್ನು ಪ್ರತಿವಾರ

ಹೊರಗೆ ಬಿಡಲಾಗುವುದು. ಇದರ ಬಳಿಯಲ್ಲಿಯೇ ತಾಲಕೇಶ್ವರ ಮತ್ತು ವೀರೇಶ್ವರ ಮಂದಿರಗಳಿವೆ.

**ಮಹಿದಾಸ :** ಈತನು ಐತರೇಯ ಉಪನಿಷತ್ತಿನ ದೃಷ್ಟಾರನು ಈತನ ಹೆಸರು ಐತರೇಯ ಬ್ರಾಹ್ಮಣದಲ್ಲಿ ಉಲ್ಲೇಖಿತವಾಗಿದೆ. ಈತನು ವಿಷ್ಣುವಿನ ಅವತಾರವೆಂದು ನಂಬಿಕೆಯಿದೆ.

**ಮಾಂಧಾತ :** ಸೂರ್ಯಕುಲದ ಯದನಾಶ್ವನ ಮಗ. ಯವನಾಶ್ವನಿಗೆ ಅನೇಕ ಜನ ಹೆಂಡಂದಿರಿದ್ದರೂ ಯಾರಲ್ಲಿಯೂ ಮಕ್ಕಳಾಗಿರಲಿಲ್ಲ. ಭೃಗೃಷಿಯಿಂದ ಪುತ್ರಕಾಮೇಷ್ಠಿ–ಯನ್ನು ಮಾಡಿಸಿದನು. ಪುತ್ರಪರವಾದ ಮಂತ್ರಗಳಿಂದ ಅಭಿಮಂತ್ರಿತವಾದ ಉದಕವನ್ನು ಇಟ್ಟಿದ್ದರು. ನೀರಡಿಸಿದ್ದ ಯುವನಾಶ್ವನು ಈ ಉದಕವನ್ನು ಕುಡಿಯಲು ಗರ್ಭ ನಿಂತಿತು. ಋಷಿಗಳು ಇವನ ಹೊಟ್ಟೆಯನ್ನು ಸೀಳಿ ಕೂಸನ್ನು ತೆಗೆದರು. ಇಂದ್ರನ ಕಿರುಬೆರಳನ್ನು ಚೀಪಿ ಇವನಿಗೆ ಮಾಂಧಾತನೆಂಬ ಹೆಸರು ಬಂತು. ಇವನಿಗೆ ಪುರುಕಾತ್ಸ, ಅಂಬರೀಶ, ಮುಚುಕುಂದರೆಂಬ ಮಕ್ಕಳಿದ್ದರು.

**ಮುಚುಕುಂದ ವರದ :** ಮಾಧಾಂತ ರಾಜನಿಗೆ ಪುರುಕುತ್ಸ, ಮುಚುಕುಮದ ಎಂಬಿಬ್ಬರು ಮಕ್ಕಳಿದ್ದರೆಂದೂ, ಮುಚುಕುಂದನು ಕೃಷ್ಣ ಭಕ್ತನಾಗಿದ್ದದ್ದೂ ಭಾಗವತದಲ್ಲಿ ಬರುತ್ತದೆ. ದೇವದೈತ್ಯರ ಸಮರದಲ್ಲಿ ದೇವತೆಗಳಿಗೆ ನೆರವಾಗಿ, ವರವನ್ನು ಪಡೆದುಕೊಂಡು ನಿದ್ರೆಯಿಂದ ಎದ್ದೊಡನೇ ಕಾಲಯವನ್ನು ನೋಟದಿಂದಲೇ ಸುಟ್ಟು ಕೃಷ್ಣನ ಮೆಚ್ಚುಗೆಯನ್ನು ಪಡೆದುಕೊಂಡವನು.

**ಮೆಂಡಿಗೆ :** ದಾಸರು, ಕೀರ್ತನ, ಸುಳಾದಿ, ಉಗಾಭೋಗಗಳನ್ನು ರಚಿಸಿರುವಂತೆ ಮಂಡಿಗೆ ಎಂಬ ಹಾಡಿನ ಪ್ರಕಾರವನ್ನು ರಚಿಸಿದ್ದಾರೆ. ತತ್ವಜ್ಞಾನದ ರಹಸ್ಯವನ್ನು ಈ ಹಾಡುಗಳಲ್ಲಿ ಕಾಣಬಹುದಾಗಿದೆ. ಅನೇಕ ಒಗಟುಗಳು ಸಂಕೇತಗಳನ್ನೊಳಗೊಂಡ ಈ ಹಾಡುಗಳು ಆಧ್ಯಾತ್ಮದ ಅನಂತತೆಯನ್ನು ಗರ್ಭೀಕರಿಸಿಕೊಂಡಿದೆ.

**ರಾವಣ :** ವಿಶ್ರವಸ್ ಮತ್ತು ಕೈಕಸಿಯರ ಮಕ್ಕಳಲ್ಲಿ ರಾವಣನು ಹಿರಿಯ ಮಗ. ಇವನ ಹೆಂಡತಿ ಮಂಡೋದರಿ. ಈತ ಲಂಕೆಯ ಅರಸು. ರಾಮಚಂದ್ರನು ವನವಾಸದಲ್ಲಿದ್ದಾಗ ಸೀತಾದೇವಿಯನ್ನು ಕದ್ದೊಯ್ದುದರಿಂದ ಯುದ್ಧವಾಗಿ ಕಪಿಗಳ ಸಹಾಯದಿಂದ ಶ್ರೀರಾಮನು ರಾವಣನನ್ನು ಕೊಂದನು. ರಾಮನು ಶ್ರೇಷ್ಠ ಶಿವಭಕ್ತನಾಗಿದ್ದ. ರಾಮ – ರಾವಣರ ಯುದ್ಧದಲ್ಲಿ ಹನುಮಂತನ ಪಾತ್ರ ಬಹುಮುಖ್ಯವಾಗಿದೆ.

**ರಾಹು – ಕೇತು :** ಕಶ್ಯಪ ಮತ್ತು ಸಿಂಹಿಕೆಯರ ಮಗನೆ ರಾಹು. ನವಗ್ರಹಗಳಲ್ಲಿ ಎಂಟನೆಯವನು. ಇವನು ಸರ್ಪರೂಪಿಯೆಂಬುದು ಸಂಪ್ರದಾಯಿಕ ಕಲ್ಪನೆ. ಸಮುದ್ರಮಂಥನ ಕಾಲದಲ್ಲಿ ದೇವತೆಗಳೊಡನೆ ಈತನು ಅಮೃತ ಉಣ್ಣಲಿಕ್ಕೆ ಕುಳಿತಿದ್ದನು. ಇವನು ರಾಕ್ಷಸವೆಂಬ ವಿಷಯವನ್ನು ಸೂರ್ಯ – ಚಂದ್ರರು ಶ್ರೀಹರಿಗೆ ತಿಳಿಸಿದರು. ಆಗ ಶ್ರೀಹರಿ ತನ್ನ ಚಕ್ರದಿಂದ ಇವನ ತಲೆ ಉರುಳಿಸದನು. ತಲೆಯ ಭಾಗ ಕೇತುವಾಯಿತು. ದಡವು ರಾಹುವಾಯಿತು. ಅಂದಿನಿಂದ ಈ ರಾಹು– ಕೇತು, ಸೂರ್ಯ – ಚಂದ್ರರ ವೈರಿಗಳಾಗಿದ್ದಾರೆ. ಗ್ರಹಣಕ್ಕೆ ಇವರೇ ಕಾರಣರೆಂಬ ನಂಬಿಕೆಯಿದೆ.

**ರುಕುಮಾಂಗದ :** ಋತಧ್ವಜನ ಮಗ. ಇವನ ಹೆಂಡತಿ ವಿಂಧ್ಯಾವಲಿ ಈತನಿಗೆ ಧರ್ಮಾಂಗದನೆಂಬ ಮಗನಿದ್ದನು. ಇವನು ಏಕಾದಶಿ ವ್ರತವನ್ನು ತಪ್ಪದೇ ಪಾಲಿಸುತ್ತಿದ್ದನು. ಅದನ್ನು ಮುರಿಯಲು ಬ್ರಹ್ಮನು ಕಳುಹಿಸಿದ ಮೋಹಿನಿ, ಇವನನ್ನು ಲಗ್ನವಾಗಿ ಇವನ ವ್ರತಕೆಡಿಸಬೇಕೆಂದು ಪ್ರಯತ್ನ ಮಾಡಿದಳು. ಆದರೆ ಇವನು ಮಗನನ್ನು ಬಲಿಕೊಡಲು ಸಿದ್ಧನಾದನೇ ಹೊರತು ವ್ರತ ಮುರಿಯಲು ಒಪ್ಪಲಿಲ್ಲ. ಇದನ್ನು ನೋಡಿ ವಿಷ್ಣು ಪ್ರತ್ಯಕ್ಷಕನಾಗಿ ಮೋಕ್ಷವನ್ನು ಕೊಟ್ಟನು.

**ರೇವಂತ :** ಸಂಜ್ಞಾ ಮತ್ತು ಸೂರ್ಯರ ಅಶ್ವಾವಸ್ಥೆಯರ ಮಗ. ಇವನು ಗುಹ್ಯಕರ ಅಧಿಪತಿ, ಇವನಿಗೆ ಅಶ್ವದ ಅಧಿಪತ್ಯವನ್ನು ಕೊಡಲಾಗಿತ್ತು.

**ಲಂಕಿಣಿ :** ಈಕೆ ಲಂಕಾಪಟ್ಟಣದ ಅಭಿಮಾನಿ ದೇವತೆ. ಹನುಮಂತನು ಲಂಕಾಪಟ್ಟಣವನ್ನು ಪ್ರವೇಶಿಸುವಾಗ ಲಂಕಿಣಿ ಆತನನ್ನು ತಡೆದಳು. ಆಗ ಹನುಮಂತನು ಮುಷ್ಟಿಯಿಂದ ಈಕೆಯನ್ನು ಹೊಡೆದು ಸೋಲಿಸಿದನು. ನಂತರ ಈಕೆಯು ಸಹಾಯದಿಂದಲೇ ಲಂಕಾಪಟ್ಟಣವನ್ನು ಪ್ರವೇಶಿಸಿದನು.

**ವಟತರು :** ತ್ರಿವೇಣಿ ಸಂಗಮದಲ್ಲಿ ಯಮುನಾ ನದಿಯ ದಂಡೆಯ ಮೇಲೆ ಇರುವ ಒಂದು ಪ್ರಯಾಗದ ಪ್ರಸಿದ್ಧ ಕ್ಷೇತ್ರ. ಇದಕ್ಕೆ ಅಕ್ಷಯವಟವೆಂಬ ಹೆಸರು. ಇಲ್ಲಿ ಒಂದು ಪುರಾತನ ಆಲದ ಮರವಿದ್ದು, ಅದರ ಬುಡದಲ್ಲಿ ಪಿತೃಗಳಿಗೆ ಪಿಂಡಗಳನ್ನು ಅರ್ಪಿಸುವ ಸಂಪ್ರದಾಯವಿದೆ.

**ವರಶೌನಕ :** ನೈಮಿಷಾರಣ್ಯದಲ್ಲಿರುತ್ತಿದ್ದ ಭೃಗುವಂಶದ ಋಷಿ, ಸೂತ ಪೌರಾಣಿಕನಿಂದ ಪುರಾಣೇತಿಹಾಸಗಳನ್ನು ಶ್ರವಣ ಮಾಡಿದವನು. ಇವನ ಹೆಸರು ಭಾಗವತ. ಭಾರತದಲ್ಲೂ ಬರುತ್ತದೆ.

**ವಿದುರ :** ವಿಚಿತ್ರ್ಯವೀರ್ಯನ ಹೆಂಡತಿಯಾದ ಅಂಬಿಕೆಯ ದಾಸಿಯ ಮಗ. ವೇದವ್ಯಾಸರ ಅನುಗ್ರಹದಿಂದ ಜನಿಸಿದವ. ಮಹಾವಿಷ್ಣುಭಕ್ತ ಮತ್ತು ಜ್ಞಾನಿ. ಶ್ರೀಕೃಷ್ಣನು ಸಂಧಾನಕ್ಕಾಗಿ ಹಸ್ತಿನಾವತಿಗೆ ಹೋದಾಗ ದುರ್ಯೋಧನನ ಅರಮನೆಯನ್ನು ಬಿಟ್ಟು ಈತನ ಆತಿಥ್ಯ ಪಡೆದನು. ಕೃಷ್ಣ ಮನೆಗೆ ಬಂದ ಉತ್ಸಾಹದಲ್ಲಿ ವಿದುರ ಮನೆಯ ಗಳುವನ್ನು ಕಿತ್ತಿಸಿದನಂತೆ.

**ವಿಭೀಷಣ :** ಪೌಲಸ್ತ್ಯಮುನಿ ಮತ್ತು ಕೈಕಸೆಯರ ನಾಲ್ಕನೆಯ ಮಗ. ರಾವಣ ಕುಂಭಕರ್ಣರ ತಮ್ಮ. ಶೂರ್ಪಣಖಿ ಇವನ ತಂಗಿ. ಮಿಂಕ್ಕವರೆಲ್ಲಾ ಅಸುರೀ ಭಾವದವರಾದರೂ ಇವನು ಭಗವದ್ಭಕ್ತ. ಸೀತಾಹರಣವನ್ನು ವಿರೋಧಿಸಿ, ರಾಮ ರಾವಣರ ಯುದ್ಧ ಪ್ರಾರಂಭವಾದಾಗ ಇವನು ಶ್ರೀರಾಮನ ಬಳಿ ಆಶ್ರಯದಲ್ಲಿ ನಿಂತ. ರಾವಣ ವಧೆಯಾದ ನಂತರ ಲಂಕೆಯ ಸಿಂಹಾಸನವು ಇವನಿಗೆ ದೊರೆಯಿತು.

**ವೃದ್ಧಕ್ಷತ್ರ :** ಈತನು ಸಿಂಧುದೇಶದ ಅರಸು. ಇವನ ಮಗ ಜಯದ್ರಥ. ದುರ್ಯೋಧನನ ತಂಗಿಯ ಮಗ. ಈತನು ಸಾಯಂಸಂಸ್ಥೆಯನ್ನು ಮಾಡುತ್ತಿದ್ದಾಗ ಅರ್ಜುನನ ಬಾಣದಿಂದ ಛಿನ್ನವಾದ ಜಯದ್ರಥನ ರುಂಡವು ಇವನ ಬೊಗಸೆಯಲ್ಲಿ ಬಿತ್ತು. ವೃದ್ಧಕ್ಷತ್ರ ಹೇಸಿ ಅದನ್ನು ನೆಲಕ್ಕೆ ಒಗೆದನು. ಆದಕಾರಣ ಅವನ ತಲೆ ಒಡೆದು ಸಾವಿರ ಹೋಳಾಯಿತು.

**ಸಗರರಾಜ :** ಸಗರರಾಜನು ಅಶ್ವಮೇಧಯಾಗ ಹೂಡಿ ಕುದುರೆಯನ್ನು ದಿಗ್ವಿಜಯಕ್ಕೆ ಬಿಟ್ಟನು ಅವನ ೬೦,೦೦೦ ಮಂದಿ ಮಕ್ಕಳು ಅದರ ಬೆಂಗಾವಲಾಗಿ ನಡೆದರೂ ಕುದುರೆ ಮಾಯವಾಯಿತು. ಅದು ಕಪಿಲಋಷಿಯ ಹತ್ತಿರವಿತ್ತು. ಅದನ್ನು ಮುಟ್ಟಲು ಹೋದಾಗ ಕಪಿಲ ಋಷಿ ಅವರನ್ನು ತನ್ನ ಕಣ್ಣಿನಿಂದ ಸುಟ್ಟನು. ಇವರನ್ನು ಉದ್ಧಾರ ಮಾಡಬೇಕೆಂದು ಇವರ ಅಣ್ಣನ ಮರಿಮಗ ಭಗೀರಥ ತಪಸ್ಸು ಮಾಡಿ ಗಂಗೆಯನ್ನು ಭೂಮಿಗೆ ತಂದು ಉದ್ಧಾರ ಮಾಡಿದನು.

**ಸಂಜೀವಿನಿ ಪರ್ವತ :** ಇದಕ್ಕೆ ದ್ರೋಣಗಿರಿಯೆಂದೂ ಹೆಸರು. ಕಪಿಸೇನೆಗೆ ಸೋಲುಂಟಾಗಿ ಲಕ್ಷ್ಮಣನು ಮೂರ್ಛಿತನಾಗಿ ಬಿದ್ದಾಗ ಜಾಂಬವಂತನ ಹೇಳಿಕೆಯ ಮೇರೆಗೆ ಹನುಮಂತನು ಐವತ್ತು ಸಾವಿರ ಯೋಜನ ದೂರದಿಂದ ಸಂಜೀವಿನಿ ಪರ್ವತವನ್ನು ಎತ್ತಿಕೊಂಡು ತಂದನು. ಸೈನ್ಯವೆಲ್ಲಾ ಚೇತರಿಸಿದ ಮೇಲೆ ರಣಭೂಮಿಯಿಂದಲೇ ಆ ಪರ್ವತವನ್ನು ತೂರಿ ಮೂಲಸ್ಥಳದಲ್ಲಿ ನಿಲ್ಲಿಸಿದನು.

**ಸಿಡಿಯಮುಳ್ಳು :** ಮೈಲಾರಲಿಂಗನ ಹೆಸರಿನಲ್ಲಿ ಮಾಡುವ ಒಂದು ವ್ರತ ಇದಾಗಿದೆ. ಇದರಲ್ಲಿ ಹರಕೆ ಹೊತ್ತವನು ಎತ್ತರವಾದ ಚೌಕಟ್ಟಿಗೆ ಬಡಿದ ಡೊಂಕು ಹಾಗೂ ಚೂಪಾದ ಮೊಳೆಯನ್ನು ಬೆನ್ನುಹುರಿಗೆ ಚುಚ್ಚಿಕೊಂಡು ತೂಗಾಡುವನು. ಇದು ಇನ್ನೂ ಸಿಂಹಳ ದ್ವೀಪದಲ್ಲಿ ಪ್ರಚಲಿತದಲ್ಲಿದೆ.

**ಸುಗ್ರೀವ :** ಸೂರ್ಯ ಮತ್ತು ಋಕ್ಷರಜಸ್ ಇವರ ಮಗ. ವಾಲಿಯ ತಮ್ಮ ಈತನನ್ನು ಶ್ರೀರಾಮನು ಅನುಗ್ರಹಿಸಿ ಕಿಷ್ಕಿಂದೆಯ ರಾಜ್ಯಕ್ಕೆ ರಾಜನನ್ನಾಗಿ ಮಾಡುತ್ತಾನೆ. ವಾಲಿ ಸುಗ್ರೀವರೊಂದಿಗೆ ಯುದ್ಧ ನಡೆಯುತ್ತದೆ.

**ಸುಧನ್ವ :** ಚಂಪಕಾವತಿಯ ರಾಜ. ಹಂಸಧ್ವಜನ ಮಗ. ಪಾಂಡವರ ಅಶ್ವಮೇಧದ ಕುದುರೆಯನ್ನು ಕಟ್ಟಿ ಯುದ್ಧಕ್ಕೆ ಸನ್ನದ್ಧರಾಗಬೇಕೆಂದು ರಾಜನು ಆಜ್ಞೆ ಕೊಟ್ಟಾಗ ಸುಧನ್ವ ತಡಮಾಡಿದ. ಆ ತಪ್ಪಿಗಾಗಿ ಪ್ರಾಯಶ್ಚಿತ್ತವೆಂದು ಅವನನ್ನು ಪುರೋಹಿತರಾದ ಶಂಖಲಿಖಿತರ ಆಜ್ಞೆಯಂತೆ ಕಾಯ್ದೆಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿಸಲಾಯಿತು. ಶ್ರೀ ಹರಿಯ ನಾಮಸ್ಮರಣೆಯಿಂದ ಸುಧನ್ವನಿಗೆ ಯಾವ ಬಾಧೆಯು ಆಗಲಿಲ್ಲ.

**ಹರಿಶ್ಚಂದ್ರ :** ಈತನು ಸೂರ್ಯವಂಶದು ತ್ರಿಶಂಕು – ಸತ್ಯವತಿಯರ ಮಗ. ವಸಿಷ್ಟನು ಈತನ ಪುರೋಹಿತ. ಶೈಬ್ಯಕನ್ನೆಯಾದ ತಾರಾಮತಿ ಈತನ ಹೆಂಡತಿ. ರೋಹಿತನೆಂಬುವನು ಇವನ ಮಗ. ವಚನ ಪಾಲನೆಗಾಗಿ ಈತನು ಹೆಸರಾಗಿದ್ದಾನೆ. ವಿಶ್ವಾಮಿತ್ರ ಮುನಿಯ ಮೂಲಕ ರಾಜ್ಯ ಕಳೆದುಕೊಂಡು ಹೆಂಡತಿ ಮಕ್ಕಳನ್ನು ಮಾರಿ ಕಾಶಿ ಪಟ್ಟಣದ ಸ್ಮಶಾನದ ಕಾವಲುಗಾರನಾಗಿ ಅನೇಕ ಕಷ್ಟಗಳನ್ನೆದುರಿಸಿ ಕೊನೆಗೆ ಪರಮೇಶ್ವರನ ಅನುಗ್ರಹದಿಂದ ತನ್ನ ರಾಜ್ಯವನ್ನು ಮರಳಿ ಪಡೆದು ಪತ್ನಿ ಪುತ್ರರೊಂದಿಗೆ ಸುಖದಿಂದ ಬಾಳಿದನು.

**ಹಸ್ತಿನಾಪಟ್ಟಣದ ನೇಗಿಲಲೆತ್ತಿದನು :** ಒಮ್ಮೆ ದುರ್ಯೋಧನನಾಡಿದ ಮಾತಿನಿಂದ ಸಿಟ್ಟಿಗೆದ್ದ ಬಲರಾಮನು ತನ್ನ ನೇಗಿಲಿನಿಂದ ಹಸ್ತಿನಾವತಿಯನ್ನು ಎತ್ತಿ ಗಂಗೆಯಲ್ಲಿ ಹಾಕಲಿಕ್ಕೆ ಹವಣಿಸಿದನು. ಇದರೊಂದಿಗೆ ಹಸ್ತಿನಾಪುರದ ತಳಹದಿಯನ್ನು ಬದಲಿಸಿದನು.

**ಹಿರಣ್ಯಾಕ್ಷ :** ಹಿರಣ್ಯಕಶಿಪುವಿನ ಅಣ್ಣನಾದ ಈತ ಕಶ್ಯಪ ಮತ್ತು ದಿತಿ ಇವರ ಮಗ. ಸನಕಾದಿಗಳ ಶಾಪದಿಂದ ಜಯ ವಿಜಯರೆಂಬ ವೈಕುಂಠದ ದ್ವಾರಪಾಲಕರು ಮೂರು ಜನ್ಮದಲ್ಲಿ ದಾನವರಾಗಿ ಹುಟ್ಟಿ ವಿಷ್ಣುವಿನೊಂದಿಗೆ ಯುದ್ಧ ಮಾಡಿದನು. ವಿಷ್ಣು ಗೆಲ್ಲತೊಡಗಿದಾಗ ಹಿರಣ್ಯಕ್ಷನು ಭೂಮಂಡಲವನ್ನು ತೆಗೆದುಕೊಂಡು ಓಡತೊಡಗಿದನು. ವಿಷ್ಣು ವರಾಹ ರೂಪತಾಳಿ ಇವನನ್ನು ಕೊಂದನು.

# ಅನುಬಂಧ–೪

## ಕೀರ್ತನೆಗಳ ಅಕಾರಾದಿ

# ಅನುಬಂಧ–೫

## ಸಹಾಯಕ ಸಾಹಿತ್ಯ

### I ಸಂಪಾದಿತ ಕೃತಿಗಳು

| ಕ್ರ. ಸಂಖ್ಯೆ | ಸಂಪಾದಕರ ಹೆಸರು | ಕೃತಿಯ ಹೆಸರು | ಪ್ರಕಾಶನದ ಹೆಸರು ಮತ್ತು ಪ್ರಕಟಿತ ವರ್ಷ. |
|---|---|---|---|
| ೧. | ಪಾವಂಜೆ ಗುರುರಾಯ | ಪುರಂದರದಾಸರ ಕೀರ್ತನೆಗಳು | ಶ್ರೀ ಮನ್ಮಧ್ವ ಸಿದ್ಧಾಂತ ಗ್ರಂಥಾಲಯ ಉಡುಪಿ, ೧೯೧೨. |
| ೨. | ಸುಬೋಧ ರಾಮರಾಯ | 'ಹರಿದಾಸ ಕೀರ್ತನ ತರಂಗಿಣಿ' | ಹರಿದಾಸ ಕೀರ್ತನ ತರಂಗಿಣಿ ಗ್ರಂಥಮಾಲೆ, ೧೯೨೫. |
| ೩. | ಗೊರೆಬಾಳ ಹನುಮಂತರಾಯ | ಹರಿದಾಸರ ಕೀರ್ತನೆಗಳು | ವರದೇಂದ್ರ ಹರಿದಾಸ ಸಾಹಿತ್ಯ ಮಂಡಲಿ, ಲಿಂಗಸೂರು ೧೯೪೪. |
| ೪. | ಬೆಟಗೇರಿ ಕೃಷ್ಣಶರ್ಮ ಬೆಂಗೇರಿ ಹುಚ್ಚರಾಯ | ಪೂಜಾತತ್ವ | ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ, ೧೯೯೩ |
| ೫. | " " | ಆರ್ತಭಾವ | ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ, ೧೯೬೪. |
| ೬. | " " | ಮಹಾತ್ಮ್ಯಜ್ಞಾನ | ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ, ೧೯೬೪ |
| ೭. | " " | ಕೃಷ್ಣಲೀಲೆ | ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ, ೧೯೬೫ |

೮. " " ಲೋಕನೀತಿ ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ, ೧೯೬೫

೯. ಸಂಕೀರ್ಣ ಸಂಗ್ರಹ ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ, ೧೯೬೬

೧೦. ಪ್ರೊ.ಸಾ.ಕೃ.ರಾಮಚಂದ್ರರಾವ್ ಜೀವನ ದರ್ಶನ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು ೧೯೮೫

೧೧. " " ಆಧ್ಯಾತ್ಮದರ್ಶನ " "

೧೨. " " ಸಮಾಜದರ್ಶನ " "

೧೩. " " ಕೀರ್ತನ ದರ್ಶನ " "

೧೪. ಡಾ. ಬಸವರಾಜ ಸಬರದ "ಪುರಂದರದಾಸರ ಆಯ್ದ ಕೀರ್ತನೆಗಳು" ಬಂಜಾರಾ ಪ್ರಕಾಶನ ಗುಲಬರ್ಗಾ, ೨೦೦೨


## II. ಸಂಶೋಧನಾ ಕೃತಿಗಳು


೧. ಆರ್.ಎಸ್.ಪಂಚಮುಖಿ ಹರಿದಾಸ ಸಾಹಿತ್ಯ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೫೨

೨. " " ಪುರಂದರ ದಾಸರ ಜೀವನ ಚರಿತ್ರೆ ಶ್ರೀ ಪುರಂದರದಾಸ ಸೇವಾಮಂಡಲ, ಹೊಸಪೇಟೆ ೧೯೫೬.

೩. ಬುರ್ಲಿ ಬಿಂದು ಮಾಧವ (ಸಂ) ಶ್ರೀ ಪುರಂದರದಾಸರು ಮಿಂಚಿನಬಳ್ಳಿ ಕಾರ್ಯಾಲಯ ಧಾರವಾಡ , ೧೯೬೪.

೪. ಡಾ.ವ.ಅ. ದಿವಾಣಜಿ ಪ್ರಸಾದ ಯೋಗ ಉಷಾಸಾಹಿತ್ಯ ಮಾಲೆ, ಮೈಸೂರು ೧೯೭೨.

| | | | |
|---|---|---|---|
| ೫. | ಜಿ. ವರದರಾಜರಾವ್ | ಹರಿದಾಸ ಸಾಹಿತ್ಯ ಸಮೀಕ್ಷೆ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ. ೧೯೭೩. |
| ೬. | ಆರ್.ಎಸ್.ಪಂಚಮುಖಿ, ಎಸ್.ಕೆ.ರಾಮಚಂದ್ರರಾವ್ ಮತ್ತು ತ. ಸು. ಶ್ಯಾಮರಾವ್ | "ಪುರಂದರದಾಸರ ಸಾಹಿತ್ಯ ಸಮೀಕ್ಷೆ" | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭ |
| ೭. | ವೀ. ಸೀತಾರಾಮಯ್ಯ | ಶ್ರೀ ಪುರಂದರದಾಸರು | ನ್ಯಾಷನಲ್ ಬುಕ್ ಟ್ರಸ್ಟ್, ನವದೆಹಲಿ, ೧೯೭೯ |
| ೮. | ಡಾ. ಬಸವರಾಜ ಸಬರದ | ಬಸವೇಶ್ವರ ಮತ್ತು ಪುರಂದರದಾಸ | ತರಳಬಾಳು ಪ್ರಕಾಶನ, ಸಿರಿಗೆರೆ, ೧೯೯೨ |

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು